ಶ್ರೀ ಬಾಲಲೀಲಾ ಮಹಂತ ಶಿವಯೋಗೀಶ್ವರ ಗ್ರಂಥಮಾಲೆ- ೮

ಶ್ರೀ ಮೈಲಾರದ

# ಬಸವಲಿಂಗ ಶರಣರ ಕೃತಿಗಳು

ಷಟ್‌ಸ್ಥಲ ನಿರಾಭಾರ ವೀರಶೈವ ಸಿದ್ಧಾಂತ, ಗುರುಕರುಣ ತ್ರಿವಿಧಿ,
ಶಿವಾನುಭವ ದರ್ಪಣ, ಲಿಂಗಪೂಜಾ ವಿಧಾನ

ಸಂಪಾದಕರು :

**ಶಿ. ಶಿ. ಬಸವನಾಳ,** ಎಂ., ಎ.

ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ—೪

ಮೈಲಾರದ

# ಶ್ರೀ ಬಸವಲಿಂಗ ಶರಣರ ಕೃತಿಗಳು

ಪ್ರಕಾಶಕರು :

ಶ್ರೀ ಮ. ಪ್ರ. ಸ್ವ. ಮೃತ್ಯುಂಜಯ ಮಹಾಸ್ವಾಮಿಗಳು

ಮು ರು ಘಾ ಮ ಠ

ಧಾರವಾಡ



ಸಂಪಾದಕರು :

ಶಿ. ಶಿ. ಬಸವನಾಳ, ಎಮ್. ಎ.



೧೯೫೫

ಪ್ರಕಾಶಕರು :

ಶ್ರೀ ನಿ. ಪ್ರ. ಸ್ವ. ಮೃತ್ಯುಂಜಯ ಮಹಾಸ್ವಾಮಿಗಳು
ಶ್ರೀ ಮುರುಘಾಮಠ, ಹಾವೇರಿಪೇಟೆ
ಮಠ ನಂ. ೭೬೬೮
ಧಾರವಾಡ



ಎರಡನೇ ಮುದ್ರಣ - ೧೯೫೫



ಬೆಲೆ : ಎರಡು ರೂಪಾಯಿ ಎಂಟು ಆಣೆ




ಮುದ್ರಕರು :
ಬಿಳಗಿ ರಾಮಣ್ಣನವರು
ಲಿಂಗರಾಜ ಆರ್ಟ ಪ್ರೆಸ್, ಮನೆ ನಂ. ೩೨೦
ಮಾಳಮಡ್ಡಿ, ಧಾರವಾಡ



ಶ್ರೀ. ಮ. ಪ್ರ. ಮುರುಘೇಂದ್ರ ಮಹಾ ಶಿವಯೋಗಿಗಳು

ಗಚ್ಚಿನಮಠ, ಅಥಣಿ

# ಅರ್ಪಣೆ

ಶಿವಶರಣರ ಘನವಾದ ಮಾರ್ಗದಲ್ಲಿ ನಡೆದು

ಶಿವಯೋಗ ತಪಸ್ಸನ್ನಾಚರಿಸಿದ

ಪರಮವೈರಾಗ್ಯಮೂರ್ತಿಗಳೂ ಕಾರಣಪುರುಷರೂ

ಆದ

ಅಥಣಿ ಗಚ್ಚಿನಮಠದ

ಲಿಂಗೈಕ್ಯ

ಶ್ರೀಮನ್ನಿರಂಜನ ಪ್ರಣವಸ್ವರೂಪ

**ಮುರುಘೇಂದ್ರ ಮಹಾಶಿವಯೋಗಿಗಳ**

**ದಿವ್ಯಪಾದಾರವಿಂದಗಳಿಗೆ**

ಈ ಗ್ರಂಥವನ್ನು ಭಕ್ತಿಪುರಸ್ಸರವಾಗಿ

ಸಮರ್ಪಿಸಲಾಗಿದೆ

## ಮೊದಲನೇ ಮುದ್ರಣದ

# ಮುನ್ನುಡಿ

368

ಲಿಂಗೈಕ್ಯ ಶ್ರೀಮನ್ನಿರಂಜನ ಪ್ರಣವಸ್ವರೂಪಿ ಶ್ರೀಮದಥಣಿ ಮುರುಘೇಂದ್ರ ಶಿವಯೋಗಿಗಳವರ ಸ್ಮರಣಾರ್ಥವಾಗಿ ಪ್ರಕಟಿಸಲು ಕೈಕೊಂಡ ಬಳ್ಳಾರಿ ಜಿಲ್ಲಾ ಹರಪನಹಳ್ಳಿ ತಾಲೂಕ ಲಿಂಗನಾಯಕನಹಳ್ಳಿ ಶ್ರೀ. ನಿ. ಪ್ರ. ಚೆನ್ನವೀರಸ್ವಾಮಿಗಳವರ ಕರಕಂಜಸಂಜಾತರೂ ಮಹಾ ಶಿವಾನುಭಾವಿ ಕವಿಪುಂಗವರೂ ಆದ ಮೈಲಾರದ ಬಸವಲಿಂಗ ಶರಣರಿಂದ ರಚಿತವಾದ; ೧. ಷಟಸ್ಥಲ ನಿರಾಭಾರ ವೀರಶೈವ ಸಿದ್ಧಾಂತ. ೨. ಗುರು ಕರುಣ ತ್ರಿವಿಧಿ. ೩. ಶಿವಾನುಭವ ದರ್ಪಣ. ೪. ಲಿಂಗಪೂಜಾ ವಿಧಾನ. ಈ ನಾಲ್ಕು ಗ್ರಂಥಗಳನ್ನು ಒಂದುಗೂಡಿಸಿ ಅಭ್ಯಾಸಿಗಳಿಗೆ ವಿಶೇಷವಾಗಿ ಅನುಕೂಲವಾಗುವಂತೆ ಒಂದೇ ಗ್ರಂಥದಲ್ಲಿ ಅಚ್ಚುಗೊಳಿಸಿ ಮೈಲಾರದ ಬಸವಲಿಂಗ ಶರಣ ಕೃತಿಗಳೆಂದು ಹೆಸರಿಟ್ಟು ಬಾಲಲೀಲಾ ಮಹಂತ ಶಿವಯೋಗೀಶ್ವರ ಗ್ರಂಥಮಾಲೆಯಲ್ಲಿ ಪ್ರಕಟಿಸಲಾಗಿದೆ. ಈ ಮೊದಲು ಮೇಲ್ಕಂಡ ಕೃತಿ ಒಂದೊಂದೇ ಬೇರೆ ಬೇರೆ ಕಡೆಗಳಲ್ಲಿ ಅಚ್ಚಾಗಿದ್ದರೂ ಕೆಲವು ತುಂಬಾ ಲೋಪದೋಷಯುಕ್ತವಾಗಿದ್ದವು. ಆದರೆ ಅವರ ಸಮಗ್ರ ಗ್ರಂಥಗಳನ್ನು ಶುದ್ಧವಾಗಿಯೂ ಸುಬೋಧವಾಗಿಯೂ ಮತ್ತು ಐತಿಹಾಸಿಕ ಅಂಶಗಳೊಡನೆ ವಿದ್ವಜ್ಜನರಿಂದ ಪರಿಶೋಧಿಸಿ ನಾಲ್ಕು ಗ್ರಂಥಗಳನ್ನು ಕೂಡಿಯೇ ಓದುಗರಿಗೆ ಅನುಕೂಲವಾಗುವಂತೆ ಅಂದವಾಗಿ ಮುದ್ರಿಸಬೇಕೆಂಬ ಅಪೇಕ್ಷೆಯನ್ನು ವೀರಶೈವ ಸಾಹಿತ್ಯಕ್ಕಾಗಿಯೇ ತಮ್ಮ ಜೀವನವನ್ನೇ ಧಾರೆಯೆರೆಯುತ್ತಿರುವ ನಮ್ಮ ನಾಡಿನ ಸುಪ್ರಸಿದ್ಧ ವಿದ್ವಾಂಸರಾದ ಪ್ರೊ. ಶಿವಲಿಂಗಪ್ಪ ಶಿವಯೋಗಪ್ಪ ಬಸವನಾಳ, ಎಂ. ಎ., ಅವರಿಗೆ ತಿಳಿಸಿದೆವು. ಅವರು ಒಡನೆಯೇ ಒಪ್ಪಿಕೊಂಡು ಅದರಂತೆ ಶ್ರೀ ಬಸವಲಿಂಗ ಶರಣರ ಕೃತಿಗಳನ್ನು ಬಹು ಶ್ರಮಪಟ್ಟು ಪರಿಷ್ಕರಿಸಿ ಅವಶ್ಯವಿದ್ದ ಪ್ರಸ್ತಾವನೆಯನ್ನು ಬರೆದುಕೊಟ್ಟರು.

ನಮ್ಮ ಅಪೇಕ್ಷೆಯಂತೆ ಈ ಮಹತ್ಕಾರ್ಯಕ್ಕೆ ಅವಶ್ಯಕವಾಗಿದ್ದ ಮೈಲಾರದ ಬಸವಲಿಂಗ ಶರಣರ ವಿಚಾರದಲ್ಲಿ ಅಲ್ಲಲ್ಲಿ ಪ್ರಚಲಿತವಿರುವ

ಐತಿಹಾಸಿಕ ವಿಷಯುಗಳನ್ನೂ ಕೈಬರಹದ ಗ್ರಂಥಗಳನ್ನೂ ಸಂಗ್ರಹಿಸಿ ಕೊಂಡು ಬರುವುದಕ್ಕಾಗಿ ನಮ್ಮ ದಾವಣಗೆರೆ ಮಲ್ಲಾಬಾದಿ ಮಹಾ ಲಿಂಗಪ್ಪನವರ ಮಕ್ಕಳಾದ ವೀರಭದ್ರಪ್ಪನನ್ನು ಹರಪನಹಳ್ಳಿ ತಾಲೂಕ ಹರವಿ-ಲಿಂಗನಾಯಕನಹಳ್ಳಿ, ಕುರವತ್ತಿ ಮತ್ತು ಮೈಲಾರ, ಹೊಳಲು ಮುಂತಾದ ಸ್ಥಳಗಳಿಗೆ ಕಳಿಸಲಾಗಿತ್ತು. ಅವರು ತಿರಸಾವಹಿಸಿ ಅಲ್ಲಲ್ಲಿ ದೊರೆಯುವ ಪ್ರಚಲಿತವಿರುವ ವಿಷಯುಗಳನ್ನು ತಿಳಿದುಕೊಂಡು ಬಂದ ದ್ದಲ್ಲದೆ ಹರವಿ ಪುರಾಣಮಠದ ಲಿಂಗೈಕ್ಯ ಗುರುಮಲ್ಲಪ್ಪನವರ ಮೊಮ್ಮಕ್ಕಳ ಲ್ಲಿದ್ದ ಕೋರಿ ಕಾಗದದ ಎರಡು ಉತ್ತಮ ಪುಸ್ತಕಗಳನ್ನು ಸಹ ತಂದು, ಕರಡು ಪ್ರತಿ ತಿದ್ದುವ ಕಾರ್ಯದಲ್ಲಿಯೂ ಪದಗಳ ಪರಿಶೋಧನೆಂಬ ಕಾರ್ಯದಲ್ಲಿಯೂ ತುಂಬಾ ಪರಿಶ್ರಮಪಟ್ಟರು.

ಮತ್ತು ಈ ಗ್ರಂಥಕ್ಕೆ ಅತ್ಯವಶ್ಯಕವಾಗಿ ಬೇಕಾಗಿದ್ದ ಮೈಲಾರದಲ್ಲಿ ರುವ ಗ್ರಂಥಕರ್ತೃಗಳ ಮನೆಯು ಮತ್ತು ಲಿಂಗನಾಯಕನಹಳ್ಳಿಯಲ್ಲಿರುವ ಬಸವಲಿಂಗ ಶರಣರ ಗುರುಗಳಾದ ಶ್ರೀ ಮ. ಪ್ರ. ಚೆನ್ನವೀರಸ್ವಾಮಿಗಳವರ ಮಠದ ಭಾವಚಿತ್ರಗಳನ್ನು ಶ್ರೀಮನ್ನಿರಂಜನ ಜಗದ್ಗುರು ಮುರುಘ ರಾಜೇಂದ್ರ ಪ್ರಸಾದನಿಲಯ ಶ್ರೀ ಮುರುಘಾಮಠ, ಹಾವೇರಿಪೇಟೆ, ಧಾರವಾಡ ಈ ಸಂಸ್ಥೆಯ ಕಾರಕೂನ ವೀರಯ್ಯ ಕಲ್ಲೇದೇವರ ಇವರು ಬಹು ಪ್ರಯಾಸಪಟ್ಟು ತಂದರು. ಈ ಗ್ರಂಥಕ್ಕೆ ಅತ್ಯವಶ್ಯಕವಾಗಿದ ಕೋಶವನ್ನು ಶ್ರೀ ಶಿವಲಿಂಗಪ್ಪ ಹರಿಹರ ಮಾಸ್ತರ ಇವರು ತಯಾರಿಸಿ ಕೊಟ್ಟರು. ಈ ಪ್ರಸಂಗದಲ್ಲಿ ಕೆಲಸಗಾರರಾದ ಎಲ್ಲರಿಗೂ ಶ್ರೀ ಶಿವಯೋ ಗೀಶ್ವರರು ಮಂಗಳವನ್ನುಂಟುಮಾಡಲೆಂದು ಕೋರುತ್ತೇವೆ.

ಮೊದಲು ಸಿದ್ಧವಾಗಿದ್ದ ಷಟ್‌ಸ್ಥಲ ನಿರಾಭಾರ ವೀರಶೈವ ಸಿದ್ಧಾಂತ ವನ್ನು ಚಿತ್ರಕಲ್‌ದುರ್ಗದ ಶ್ರೀಮನ್ ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳು ಸುಭಾನು॥ ಆಶ್ವೀಜ ಶುದ್ಧ ೧೦ರಲ್ಲಿ ತಮ್ಮ ಅಮೃತ ಹಸ್ತದಿಂದ ಪ್ರಕಟಿಸಿದರು. ಈಗ ಸಮಗ್ರ ಗ್ರಂಥಗಳನ್ನು ನವಿಲುಗುಂದ ಗವಿಮಠಾಧೀಶರೂ, ಶ್ರೀ ಶಿವಯೋಗ ಮಂದಿರ ಸಂಸ್ಥೆಯ ಉಪಾಧ್ಯಕ್ಷರೂ, ಬಾಗಲಕೋಟೆ ಬಸವೇಶ್ವರ ವಿದ್ಯಾ ಭಿವೃದ್ಧಿ ಸಂಸ್ಥೆಯ ಅಧ್ಯಕ್ಷರೂ, ನಾಲ್ಕನೆಯ ಅಖಿಲ ಕರ್ನಾಟಕ ಶಿವಾನು ಭವ ಸಮ್ಮೇಳನಾಧ್ಯಕ್ಷರೂ ಆದ ಶ್ರೀ ಮ. ಪ್ರ. ಬಸವಲಿಂಗಸ್ವಾಮಿಗಳವರು

ಈ ಗ್ರಂಥದ ಪ್ರಕಟನೆಯ ಸಮಾರಂಭವನ್ನು ನೆರವೇರಿಸಿದುದಕ್ಕಾಗಿ ಮಹಾ “ ” ಸನ್ನಿಧಿಯಲ್ಲಿಯೂ ಶ್ರೀಗಳಲ್ಲಿಯೂ ನಮ್ಮ ಕೃತಜ್ಞತೆಯನ್ನು ಅರ್ಪಿಸುತ್ತೇವೆ.

ಮುರುಘಾಮಠ, ಧಾರವಾಡ
ಪ್ರಕಟನೆಯ ದಿನ
೨೮-೪-೧೯೪೫

ಪ್ರಕಾಶಕರು

## ಎರಡನೇ ಮುದ್ರಣದ

# ಮುನ್ನುಡಿ

ಲಿಂಗೈಕ್ಯ ಶ್ರೀಮದಥಣಿ ಮುರುಘೇಂದ್ರ ಮಹಾಶಿವಯೋಗಿಗಳವರ ಸ್ಮರಣಾರ್ಥವಾಗಿ ಪ್ರಾರಂಭಿಸಿದ ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆಯಲ್ಲಿ " ಶ್ರೀ ಮೈಲಾರದ ಬಸವಲಿಂಗ ಶರಣರ ಕೃತಿಗಳು " ನಾಲ್ಕನೆಯದಾಗಿದೆ.

ಈ ಗ್ರಂಥವನ್ನು ೧೯೪೫ ನೇ ಇಸವಿಯಲ್ಲಿ ಪ್ರಕಟಿಸಲಾಗಿತ್ತು. ಇದರ ಪ್ರತಿಗಳು ಮುಗಿದುದರಿಂದ ಇದನ್ನೇ ಪುನಃ ಪರಿಷ್ಕರಿಸಿ ಪ್ರಕಟಿಸಲಾಗಿದೆ.

ಲಿಂಗರಾಜ ಮುದ್ರಣಾಲಯದ ಒಡೆಯರಾದ ಬಿಳಗಿ ಬಂಧುಗಳು ಅನೇಕ ಕಾರ್ಯಗಳಿದ್ದರೂ ಎಲ್ಲವನ್ನು ಬಿಟ್ಟು ಸ್ವಾಮಿಕಾರ್ಯವೆಂದು ಭಾವಿಸಿ ಬಹು ಶ್ರದ್ಧೆಯಿಂದ ಅಂದವಾಗಿ ಮುದ್ರಣ ಮಾಡಿಕೊಟ್ಟರು.

ಶ್ರೀ ಶಿವಯೋಗೀಶ್ವರನು ಸರ್ವರೀತಿಯಿಂದಲೂ ಸೇವೆ ಸಲ್ಲಿಸಿದ ಸರ್ವರಿಗೂ ಮಂಗಲವನ್ನೀಯಲೆಂದು ಹಾರೈಸುತ್ತೇವೆ.

ಶ್ರೀ ಮುರುಘಾಮಠ
ಹಾವೇರಿಪೇಟೆ, ಧಾರವಾಡ
ದಿ: ೩೦-೭-೧೯೫೫

ಪ್ರಕಾಶಕರು



ಶ್ರೀ. ಮ. ನಿ. ಪ್ರ. ಮುರುಘೇಂದ್ರ ಮಹಾ ಶಿವಯೋಗಿಗಳು

# ಪ್ರ ಸ್ತಾ ವ ನೆ

## ೧

ಈ ಪುಸ್ತಕದಲ್ಲಿ ಮೈಲಾರದ ಶ್ರೀ ಬಸವಲಿಂಗ ಶರಣರು ರಚಿಸಿದ ಷಟ್‌ಸ್ಥಲ ನಿರಾಭಾರ ವೀರಶೈವ ಸಿದ್ಧಾಂತ, ಗುರುಕರುಣ ತ್ರಿವಿಧಿ, ಶಿವಾನುಭವ ದರ್ಪಣ, ಲಿಂಗಪೂಜಾ ವಿಧಾನ ಎಂಬ ನಾಲ್ಕು ಕೃತಿಗಳನ್ನು ಒಂದೆಡೆಮಾಡಿ ಪ್ರಕಟಿಸಲಾಗಿದೆ. ಮೈಲಾರದ ಸುತ್ತುಮುತ್ತಲಿನ ಪ್ರದೇಶದಲ್ಲಿ ತುಂಗಭದ್ರೆಯ ಇಕ್ಕೆಲದ ಪ್ರಾಂತಗಳಾದ ಬಳ್ಳಾರಿ, ಧಾರವಾಡ, ಚಿತ್ರಕಲ್‌ದುರ್ಗ ಜಿಲ್ಹೆಗಳಲ್ಲಿ ಈ ಶರಣಕವಿಗಳ ಕೃತಿಗಳು ಬಹುವಾಗಿ ಪ್ರಚಾರದಲ್ಲಿವೆ. ಶುದ್ಧ ವೀರಶೈವ ಸಂಪ್ರದಾಯ ಸಂಸ್ಕೃತಿಗಳನ್ನು ಅಚ್ಚಳಿಯದಂತೆ ಬಹುಕಾಲ ಪಾಲಿಸಿಕೊಂಡು ಬಂದ ಹಲವು ಮನೆತನಗಳು ಈಗಲೂ ಈ ಪ್ರಾಂತದಲ್ಲಿ ಗೋಚರವಾಗುತ್ತಿವೆ. ವೀರಶೈವಾಚಾರದ ತುತ್ತತುದಿಯಾದ, ಸಾಮಾನ್ಯರಿಗೆ ಆಚರಿಸಲು ಅತ್ಯಂತ ಪ್ರಯಾಸಕರವಾದ ಅರವತ್ತುಮೂರು ಶೀಲಗಳನ್ನು ಎಡೆಬಿಡದೆ ಆಚರಿಸುತ್ತಿದ್ದ ಮಹನೀಯರು ಈ ಪ್ರಾಂತದಲ್ಲಿ ಇತ್ತೀಚಿನ ವರೆಗೆ ಇದ್ದುದು ಹಲವರ ಸ್ಮರಣೆಯಲ್ಲಿರಬಹುದು. ಮೈಲಾರದ ಬಸವಲಿಂಗಶರಣರ ಕೃತಿಗಳು ಈ ಅಸಾಮಾನ್ಯ ಪರಿಸ್ಥಿತಿಯ ದ್ಯೋತಕವಾಗಿವೆಯೆಂಬಲ್ಲಿ ಯಾವ ಸಂದೇಹವೂ ಇಲ್ಲ.

ವೀರಶೈವರಲ್ಲಿ ಹಾಡುಗಬ್ಬಗಳನ್ನು ರಚಿಸಿದ ನಿಜಗುಣ ಶಿವಯೋಗಿಗಳು, ಸರ್ಪಭೂಷಣ ಶಿವಯೋಗಿಗಳು, ಮುಪ್ಪಿನ ಷಡಕ್ಷರಿಕವಿಗಳು, ಬಾಲಲೀಲಾ ಮಹಂತ ಶಿವಯೋಗಿಗಳು ಹಾಗು ಘನಮಠದಾರ್ಯರು ಈ ಮೊದಲಾದ ಶರಣಕವಿಗಳ ಮಾಲಿಕೆಯಲ್ಲಿಯೆ ಮೈಲಾರದ ಬಸವಲಿಂಗ ಶರಣರನ್ನು ಸೇರಿಸುವುದು ಸರಿಯೇ. ಆದರೆ ಕೇವಲ ಭಕ್ತಿಯ ಉದ್ರೇಕದಿಂದ, ತಾತ್ಕಾಲಿಕ ಸ್ಫೂರ್ತಿಯಿಂದ ಹೊರಹೊಮ್ಮಿದಂತೆ ಕವನಗಳನ್ನು ರಚಿಸಿದವರೆಂದು ಮುಪ್ಪಿನ ಷಡಕ್ಷರಿ, ಬಾಲಲೀಲಾ ಮಹಂತ ಶಿವಯೋಗಿ ಮತ್ತು ಘನಮಠದಾರ್ಯರನ್ನು ಒಂದು ಪಂಗಡವಾಗಿಯೂ,

ತತ್ತ್ವ, ಶಾಸ್ತ್ರ, ಆಚಾರ, ಅನುಭವ ಇವೆಲ್ಲವುಗಳನ್ನು ತಾವು ಪರಿಪೂರ್ಣ ವಾಗಿ ಅಳವಡಿಸಿಕೊಂಡು ಇನ್ನಿತರರಿಗೆ ಅಧಿಕಾರವಾಣಿಯಿಂದ ತಿಳಿಸಿ ಹೇಳುವ ಉದ್ದೇಶದಿಂದಲೆ ತಮ್ಮಲ್ಲಿಯ ಸಹಜ ಕವಿತಾಶಕ್ತಿಯನ್ನು ಬುದ್ಧ್ಯಾಪೂರ್ವಕವಾಗಿ ಉಪಯೋಗಿಸಿಕೊಂಡು ತಮ್ಮ ಕೃತಿಗಳನ್ನು ರಚಿಸಿದವರೆಂದು ನಿಜಗುಣಾದಿ ಉಳಿದವರನ್ನು ಇನ್ನೊಂದು ಪಂಗಡ ವಾಗಿಯೂ ವಿಂಗಡಿಸಬಹುದು. ಆಗ ಮೈಲಾರದ ಬಸವಲಿಂಗ ಶರಣರನ್ನು ಈ ಎರಡನೆಯ ಪಂಗಡಕ್ಕೆ ಸೇರಿಸುವುದು ವಿಹಿತವೇ. ಆದರೆ ಇನ್ನೂ ಸೂಕ್ಷ್ಮವಾಗಿ ವಿವೇಚಿಸಿದರೆ ವೀರಶೈವರಿಗಷ್ಟೆ ಅಲ್ಲದೆ ಉಳಿದವರಿಗೂ ಪ್ರಿಯವಾದ ವೇದಾಂತ ವಿಷಯಗಳನ್ನು ಸುಲಭವಾಗಿ, ಸುಲಲಿತವಾಗಿ, ಆದರೂ ತುಂಬ ಪಾಂಡಿತ್ಯದಿಂದ ಪ್ರತಿಪಾದಿಸುವುದಕ್ಕೆಂದೆ ತಮ್ಮ ಕೃತಿ ಗಳನ್ನು ರಚಿಸಿದವರೆಂದು ನಿಜಗುಣ ಶಿವಯೋಗಿ ಹಾಗು ಸರ್ಪಭೂಷಣ ಶಿವಯೋಗಿಗಳನ್ನು ಭಾವಿಸಿದರೆ, ಅವರಿಂದ ಮೈಲಾರದ ಬಸವಲಿಂಗ ಶರಣರನ್ನು ಕೇವಲ ವೀರಶೈವದ ವಿಶಿಷ್ಟ ಲಕ್ಷಣಗಳಾದ ಷಟ್‌ಸ್ಥಲ, ಅಷ್ಟಾವರಣ, ಪಂಚಾಚಾರ ಈ ಮೊದಲಾದ ವಿಷಯಗಳ ವಿವೇಚನೆ ಗಾಗಿಯೆ ತಮ್ಮ ಕೃತಿಗಳನ್ನು ಮೀಸಲಾಗಿರಿಸಿದವರೆಂದು ಬೇರ್ಪಡಿಸುವದು ಅವಶ್ಯವೆನಿಸುತ್ತಿದೆ; ಸೂಕ್ತವೂ ಎನಿಸುತ್ತಿದೆ.

೨

ಶೈವ ಹಾಗೂ ವೀರಶೈವ ಈ ಎರಡಕ್ಕೂ ಉಪಾಸ್ಯದೇವತೆ ಒಂದೆ ಎಂಬ ಕಾರಣದಿಂದ, ಇವೆರಡಕ್ಕೂ ಶಿವಾಗಮಗಳೇ ಆಧಾರ ಎಂಬ ದೃಷ್ಟಿ ಯಿಂದ ವಿಚಾರಿಸಿದರೆ, ಭಕ್ತಿಯ ಹೆಚ್ಚಳವೊಂದನ್ನು ಬಿಟ್ಟರೆ, ಈ ಎರಡು ಮತಗಳಿಗೂ ಹೆಚ್ಚಿನ ಭೇದವೇನು ಸಕೃದ್ದರ್ಶನಕ್ಕೆ ತೋರದಿರುವುದು ಸಹಜವಾಗಿದೆ. ಆದರೆ ಹೆಚ್ಚು ಆಳವಾಗಿ ವಿವೇಚಿಸಿದವರಿಗೆ ಶೈವಕ್ಕೂ ವೀರಶೈವಕ್ಕೂ ಬಹಳ ಅಂತರವಿದೆಯೆಂದೂ ಅಲ್ಲದೆ, ಬಸವಣ್ಣನವರ ಕಾಲ ದಿಂದ ಈಚೆಗೆ ರೂಪಗೊಂಡಿರುವ ವೀರಶೈವಕ್ಕೂ[೧] ಮೊದಲಿನ ಶೈವಕ್ಕೂ

೧. ಬಸವಣ್ಣನವರ ಕಾಲದಿಂದ ಈಚೆಗೆ ಕೆಲವು ಮಾರ್ಪಾಟುಗಳಾಗಿವೆ ಎಂಬುದಕ್ಕೆ ಒಂದೆರಡು ಉದಾಹರಣೆಗಳನ್ನು ಕೊಡಬಹುದು; ವಿಭೂತಿಯನ್ನು ಧರಿಸುವಾಗ ಬಸವ ಎಂಬ ಮೂರಕ್ಷರಗಳ ಮಂತ್ರವನ್ನು ಉಚ್ಚರಿಸುತ್ತಿರಬೇಕೆಂಬುದು ವೀರಶೈವರಲ್ಲಿ ಈಗ ಬಳಕೆಯಲ್ಲಿರುವ ಕ್ರಮ. ಇದಕ್ಕೆ ಮೈಲಾರದ ಬಸವಲಿಂಗ ಶರಣರ ಷ. ಸಿ. ವೀ

ಮಹದಂತರವಿದೆಯೆಂದೂ ಹೊಳೆಯದಿರದು. ಈ ಅಂತರವು ಏಕ ಕಾಲಕ್ಕೆ ತಲೆದೋರದೆ ಕಾಲಾತಿಪಾತದಿಂದ ಹೆಚ್ಚು ಸ್ಪಷ್ಟವಾಗಿ ಕಂಗೊಳಿಸತೊಡಗಿದುದರಿಂದ ವೀರಶೈವರಲ್ಲಿ ಕೂಡ ಎಷ್ಟೋ ಜನರಿಗೆ ಈ ಅಂತರದ ಸರಿಯಾದ ಜ್ಞಾನವು ಇಲ್ಲದಿರುವುದು ನಿಜವಾಗಿದೆ.

ಶಿವಶರಣರ ಸಂತತಿಯನ್ನು (೧) ಪುರಾತನರು, (೨) ನೂತನ ಪುರಾತನರು (ಅಥವಾ ಬಸವಾದಿ ಪ್ರಮಥರು), (೩) ನೂತನರು ಎಂದು ಕಾಲಮಾನದಿಂದ ಮೂರು ಪಂಗಡವಾಗಿ ವೀರಶೈವ ಗ್ರಂಥಕಾರರು ವಿಭಾಗಿಸುವದುಂಟು. ಕಡೆಯ ಎರಡು ಪಂಗಡದವರೆಲ್ಲರು ವೀರಶೈವರೇ ಎಂದು ಹೇಳಬಹುದಾದರೂ ಪುರಾತನರೆಂಬ ಮೊದಲಿನ ವರ್ಗದಲ್ಲಿ ಸಮಾವೇಶವಾಗುವ ಶರಣರು ವೀರಶೈವರೇ ಅಲ್ಲ, ಶೈವರು. ಅವರಲ್ಲಿ ಮುಖ್ಯರಾದವರು ದಕ್ಷಿಣಭಾರತದಲ್ಲಿ (ದ್ರಾವಿಡ ಅಥವಾ) ತಮಿಳು ನಾಡಿನಲ್ಲಿ ಅರವತ್ತು ಮೂರು ಪುರಾತನರೆಂದು ಈಗಲೂ ಪೂಜೆಗೊಳ್ಳುತ್ತಿದ್ದಾರೆ. ಈ ಪುರಾತನರೆಲ್ಲರೂ ಪ್ರಸಿದ್ಧರಾಗಿರುವುದು ತಮ್ಮ ಶಿವಭಕ್ತಿಯ ಉತ್ಕಟತೆಗಾಗಿ.[೨] ತಮ್ಮ ಭಕ್ತಿಯ ಅತಿರೇಕದಲ್ಲಿ ಇವರು ತಮಗಾಗಲಿ ಇತರರಿಗಾಗಲಿ ಶಾರೀರಿಕ ಇಲ್ಲವೆ ಮಾನಸಿಕ ಹಿಂಸೆಯನ್ನೊ ಯಾತನೆಯನ್ನೊ ಒದಗಿಸುವುದರಲ್ಲಿ ಹಿಂದೆ ಮುಂದೆ ನೋಡಲಿಲ್ಲವೆಂಬುದು ಅವರ ಚರಿತ್ರೆಗಳಿಂದಲೆ ಕಂಡು ಬರುತ್ತಿದೆ.

ಸಿದ್ಧಾಂತದ ಅಷ್ಟಾವರಣ ಪ್ರಕರಣದ ೨೪ ನೆಯ ಪದ್ಯವನ್ನು ನೋಡುವುದು; ಆದರಂತೆ ಅವರ ಶಿವಾನುಭವದರ್ಪಣ ೪೮ ನೆಯ ಹಾಡು ೬ ನೆಯ ಪದ್ಯ ನೋಡುವುದು. ಅದೇ ರೀತಿ ಮುಳುಗುಂದ ಶ್ರೀ ಬಾಲಲೀಲಾ ಮಹಂತ ಶಿವಯೋಗಿಗಳ ಕೈವಲ್ಯದರ್ಪಣದ ೨೨ ನೆಯ ಪದ (ಪುಟ. ೧೭) ವು ಈ ಮಾತಿಗೆ ಸಾಕ್ಷಿಯಾಗಿದೆ. ಇಷ್ಟಲಿಂಗವನ್ನು ಗುರುವು ಶಿಷ್ಯನಿಗೆ ಕೊಡುವ ದೀಕ್ಷೆಗೆ ಆಯತ ದೀಕ್ಷೆಯೆಂಬ ಹೆಸರು; ಉಳಿದ ಎರಡು ದೀಕ್ಷೆಗೆ ಸ್ವಾಯತ, ಸನ್ನಿಹಿತವೆಂಬ ಹೆಸರು; ಈ ದೀಕ್ಷೆಗಳು ಬಸವಣ್ಣನವರ ಕಾಲದಿಂದಲೆ ಬಳಕೆಗೆ ಬಂದುವೆನ್ನಲು ಮಡಿವಾಳ ಮಾಚಿದೇವರ "ಆಯತವು ಬಸವಣ್ಣನಿಂದ, ಸ್ವಾಯತವು ಬಸವಣ್ಣನಿಂದ, ಸನ್ನಿಹಿತವು ಬಸವಣ್ಣನಿಂದ" ಎಂಬ ವಚನವು ಸಾಕ್ಷಿಯಾಗಿದೆ.

೨. ಈ ಪುರಾತನರ ಕಂಚಿನ ಅಥವಾ ಶಿಲೆಯ ವಿಗ್ರಹಗಳು ದಕ್ಷಿಣದ ಪ್ರಸಿದ್ಧ ಶೈವ ದೇವಾಲಯಗಳಲ್ಲಿ ಜಗಲಿಯ ಮೇಲೆ ಸಾಲುಸಾಲಾಗಿ ಇಟ್ಟಿರುವುದು ಕಂಡು ಬರುತ್ತದೆ. ಅವುಗಳಲ್ಲಿ ಆಯಾ ಭಾಗಗಳಲ್ಲಿ ಪ್ರಸಿದ್ಧರಾದ ಪುರಾತನರ ವಿಗ್ರಹಗಳನ್ನು ಉಳಿದವುಗಳಿಗಿಂತ ಮುಂದೆ ಇಟ್ಟಿರುವದು ಕಂಡು ಬರುತ್ತದೆ.

ಮೃಡಬಲಿಪೂಗೊಂಡ ಸತಿಯ ಕೈಕಡಿದಿಟ್ಟ
ಮೃಡನಿಗೆ ಜೆಡೆಯ ನಲ್ ಸೊಡರೆತ್ತಿದ
ಮೃಡನಿಗೋಸುಗ ತನೂಜನನೆ ಬಾಣಸಗೆಯ್ದ
ಮೃಡನನೇಳಿಸಿದಾತ್ಮಪಿತನ ಸಂಹರಿಸಿದ[೧]

ಈ ಮಹನೀಯರು ತಮ್ಮ ಶಿವಭಕ್ತಿಯ ಈ ಬಗೆಯ ವೀರಾವೇಶಕ್ಕಾಗಿ ವೀರಶೈವರಲ್ಲಿಯೂ ಈ ರೀತಿ ಸ್ತೋತ್ರಾರ್ಹರಾಗಿರುವುದು ಅರಿದಲ್ಲ ವಾದರೂ, ಇವರ ಮನೋವೃತ್ತಿಗೂ 'ಅಯ್ಯಾ ಎಂದೊಡೆ ಸ್ವರ್ಗ: ಎಲವೋ ಎಂದೊಡೆ ನರಕ' ಎಂದು ಮುಂತಾಗಿ[೨] ವಚನದಲ್ಲಿ ಸಹ ಹಿಂಸೆಯನ್ನು ಹೊದ್ದದ ಬಸವಣ್ಣನವರ ಮನೋವೃತ್ತಿಗೂ ಮಹದಂತರವಿದೆ ಎಂಬುದು ವಿಚಾರಪರರಿಗೆ ತೋರದಿರದು.

ಈ ಪುರಾತನರಲ್ಲಿ ಹಲವರು ಕೀಳುಜಾತಿಯವರಾಗಲಿ ಕೀಳುವೃತ್ತಿಯವರಾಗಲಿ ಆಗಿದ್ದರು. ಅಪೇಯಪಾನ ಅಭಕ್ಷ್ಯಭೋಜನಗಳು ಇವರಿಗೆ ನಿಷಿದ್ಧವಾಗಿರಲಿಲ್ಲ. ಇಂತಹ ಕೀಳು ಪರಿಸ್ಥಿತಿಯಲ್ಲಿ ಸಹ ಇವರು ತಮ್ಮ ಶಿವಭಕ್ತಿಯ ಫಲವನ್ನು ಸಾಧಿಸಿದರೆಂದೇ ಇವರು ಲೋಕಪೂಜ್ಯರಾಗಿದ್ದಾರೆ; ವೀರಶೈವರಿಗೂ ಪ್ರಾತಃಸ್ಮರಣೀಯರಾಗಿದ್ದಾರೆ. ಭಕ್ತಿಗೆ ಜಾತಿ, ವೃತ್ತಿ, ಲಿಂಗ, ವಯ ಮುಂತಾದ ಯಾವುವೂ ಅಡ್ಡಬರಲಿಲ್ಲವೆಂಬುದನ್ನು ತೋರಿಸಿಕೊಟ್ಟುದರಲ್ಲಿಯೆ ಇವರ ಹೆಚ್ಚಳವಿದೆಯೆಂದು ತಿಳಿದೇ ವೀರಶೈವರು ಇವರ ಉದಾಹರಣೆಗಳನ್ನು ತೆಗೆದುಕೊಂಡಿರಬೇಕು. ಏಕೆಂದರೆ, ಭಕ್ತಿಯ ಹೊರತು ಇನ್ನಾವ ವಿಷಯದಲ್ಲೂ ಇವರು ವೀರ

---

೧. ಸರ್ಪಭೂಷಣ ಕವಿಗಳ ಕೈವಲ್ಯ ಕಲ್ಪವಲ್ಲರಿ: ಶಿವಕಾರುಣ್ಯಪ್ರಾರ್ಥನಾ ಸ್ಥಳ: ಪದ ೪, ಪದ್ಯ ೩.

೨. ಈ ವಚನದಂತೆ ಬಸವಣ್ಣನವರ ಇನ್ನೊಂದು ವಚನ:
'ಏನು ಬಂದಿರಿ, ಹದುಳವಿದ್ದಿರೆ?' ಎಂದರೆ
ನಿಮ್ಮ ಮೈಸಿರಿ ಹಾರಿಹೋಹುದೇ ?
'ಕುಳ್ಳಿರೆ'ಂದರೆ ನೆಲ ಕುಳಿಹೋಹುದೇ ?
ಒಡನೆ ನುಡಿದರೆ ಸಿರ-ಹೊಟ್ಟೆ ಒಡೆವುದೇ ?
ಕೊಡಲಿಲ್ಲದಿದ್ದರೊಂದು ಗುಣವಿಲ್ಲದಿದ್ದರೆ
ಮೂಗ ಕೊಯ್ವುದ ಮಾಬ್ಬನೇ ಕೂಡಲಸಂಗಯ್ಯನು ?
—ಬಸವಣ್ಣನವರ ವಚನಗಳು: ಭಕ್ತಜ್ಞಾನ ಸ್ಥಳ: ೧೩೩.

ಶೈವರಿಗೆ ಆದರ್ಶರಲ್ಲವೆಂಬುದನ್ನು ನಾವು ಮರೆಯುವಂತಿಲ್ಲ. ಇವರು ಭಕ್ತಿಮಾರ್ಗದಿಂದ ತಮ್ಮ ಆತ್ಮೋದ್ಧಾರವನ್ನು ಸಾಧಿಸಿಕೊಂಡ ಶ್ರೇಯಸ್ಸು ವ್ಯಕ್ತಿಗತವಾಗಿ ಇವರಿಗೇ ಸೇರಬೇಕಾದುದಲ್ಲದೆ, ವರ್ಣ, ಆಶ್ರಮ ಮೊದಲಾದ ಕಟ್ಟುಗಳಿಗೆ ಒಳಗಾದ ಶೈವಸಮಾಜಕ್ಕೆ ಸಲ್ಲುವುದಿಲ್ಲ. ಇವರ ಮಾಹಾತ್ಮ್ಯದ ಪರಿಣಾಮವು ಸಮಾಜದ ಮೇಲೆ ಆಗಲಿಲ್ಲವೆಂದೇ ಹೇಳಬೇಕು. ಆದರೆ ವೀರಶೈವರಲ್ಲಿ ಭಕ್ತಿಮಾರ್ಗವು ಇಡಿಯ ಸಮಾಜಕ್ಕೆ ಸಾಮಾನ್ಯವಾಗಿ ಸಾಧಿಸಲು ಅನುಕೂಲವಾಗಿರಬೇಕೆಂಬ ತತ್ತ್ವವೇ ಅಂಗೀಕೃತವಾಗಿದೆಂಬುದು ನೆನಪಿನಲ್ಲಿಡತಕ್ಕ ಮಾತಾಗಿದೆ.[೧]

ಶೈವರಲ್ಲಿ ಶಿವನನ್ನು ಒಂದಿಲ್ಲೊಂದು ವಿಗ್ರಹದ ರೂಪದಲ್ಲಿ ಆರಾಧಿಸುವ ರೂಢಿ-ವಿರಳವಾಗಿಯೆ ಆಗಲಿ-ಇದೆ. ಕೆಲವರಿಗೆ ನಟೇಶನ ರೂಪದಲ್ಲಿ ಆಸಕ್ತಿಯಾದರೆ, ಮತ್ತೆ ಕೆಲವರಿಗೆ ಸೋಮಸ್ಕಂದಮೂರ್ತಿಯಲ್ಲಿ ಪ್ರೀತಿ,

---

೧. ನಾರದರ ಭಕ್ತಿಸೂತ್ರಗಳಲ್ಲಿ:

ನಾಸ್ತಿ ತೇಷು ಜಾತಿ ವಿದ್ಯಾ ರೂಪ ಕುಲ ಧನ ಕ್ರಿಯಾದಿಭೇದಃ (೭೨)
ಯತಸ್ತದೀಯಾಃ (೭೩)

ಎಂದು ಹೇಳಿರುವರಾದರೂ, ಅದರಿಂದ ಜಾತಿ ಮುಂತಾದ ಭೇದಗಳು ಒಬ್ಬ ವ್ಯಕ್ತಿಯ ಆತ್ಮೋನ್ನತಿಗೆ ಪ್ರತಿಬಂಧಕವಾಗುವುದಿಲ್ಲವೆಂಬುದಷ್ಟೆ ಇದರ ಅರ್ಥ. ಆದರೆ ಉಂಬಲ್ಲಿ ಉಡುವಲ್ಲಿ ಹೆಣ್ಣು-ಗಂಡು ಕೊಂಬಲ್ಲಿ ಕೊಡುವಲ್ಲಿ ಇವು ಅಳಿಯುವದಿಲ್ಲವೆಂದೇ ಇದರ ಆಶಯ. ಲಲಿತವಿಸ್ತಾರವೆಂಬ ಕ್ರಿಸ್ತಾಬ್ದ ೩ನೆಯ ಶತಮಾನದಲ್ಲಿ ರಚಿಸಿದ ಬೌದ್ಧ ಗ್ರಂಥದಲ್ಲಿ-ಶಾಕ್ಯಭಿಕ್ಷುಗಳ ಜಾತಿಯನ್ನು ಆವನೋ ಒಬ್ಬ ಬ್ರಾಹ್ಮಣನು ಕೇಳಿದಾಗ ಅದಕ್ಕೆ ಉತ್ತರವಾಗಿ:

ಜಾತಿಂ ಭವಾನ್ ಪೃಚ್ಛತಿ ಶಾಕ್ಯಭಿಕ್ಷೂನ್ಸ್ತಂತರ್ಗತಾಂಸ್ತೇಷು ಗುಣಾನ್ ನ ಚೇತಿ ।
ಅತೋ ಭವಾನ್ ಜಾತಿಮದಲೇಪಾತ್ ಆತ್ಮಾನಮನ್ಯಾಂಶ್ಚ ಹಿನಸ್ತಿ ಮೋಹಾತ್ ॥
ಆವಾಹಕಾಲೇಽಥ ವಿವಾಹಕಾಲೇ ಜಾತೇಃ ಪರೀಕ್ಷಾ ನ ತು ಧರ್ಮಕಾಲೇ ।
ಧರ್ಮಕ್ರಿಯಾಯಾಂ ಗುಣಾ ನಿಮಿತ್ತಾಃ ಗುಣಾಶ್ಚ ಜಾತಿಂ ನ ವಿಚಾರಯಂತಿ ॥

“ಶಾಕ್ಯಭಿಕ್ಷುಗಳ ಗುಣಗಳನ್ನು ಬಿಟ್ಟು ಅವರ ಜಾತಿಯನ್ನು ನೀವು ಕೇಳುತ್ತಿರುವಿರಿ, ಜಾತಿಮದಮೂಲಕವಾಗಿ ನೀವು ನಿಮ್ಮನ್ನೂ ಉಳಿದವರನ್ನೂ ಅಜ್ಞಾನದಿಂದ ಕಡೆಗಣಿಸುತ್ತಿರುವಿರಿ. ಮದುವೆ-ಆಮಂತ್ರಣ ಕಾಲದಲ್ಲಿ ಜಾತಿಯನ್ನು ವಿಚಾರಿಸಬಹುದೇ ಹೊರತು ಧರ್ಮಕಾರ್ಯಗಳಲ್ಲಿ ಅಲ್ಲ. ಧರ್ಮಕ್ರಿಯೆಗಳಲ್ಲಿ ಗುಣಗಳನ್ನೇ ವಿಚಾರಿಸತಕ್ಕದ್ದು” ಎಂದು ಹೇಳಿರುವರು. ಇದು ಬೌದ್ಧರಲ್ಲಿಯೂ ಸಮಾಜದೃಷ್ಟ್ಯಾ ಜಾತಿಗಳಿದ್ದುವೆಂದು ತೋರುವುದಿಲ್ಲವೆ? ಆದರೆ “ವಿಪ್ರಮೊದಲಾಗಿ ಅಂತ್ಯಜಕಡೆಯಾಗಿ ಶಿವಭಕ್ತರೆಲ್ಲರೂ ಒಂದೆ ಎಂಬ” ಎಂಬ ತತ್ತ್ವವನ್ನು ಎಲ್ಲ ವಿಷಯಗಳಲ್ಲಿಯೂ ಅಂಗೀಕರಿಸಿ ಆ ರೀತಿ ಸಮಾಜರಚನೆಯನ್ನು ಮಾಡುವ ಪ್ರಯತ್ನವು ಬಸವಣ್ಣನವರ ಕಾಲದಲ್ಲಿ ನಡೆಯಿತೆಂಬುದಕ್ಕೆ ಅವರ ವಚನಗಳೇ ಸಾಕ್ಷಿಯಾಗಿವೆ.

ಬೇರೆ ಕೆಲವರಿಗೆ ದಕ್ಷಿಣಾಮೂರ್ತಿಯಲ್ಲಿ ನಂಬಿಗೆ ಉಂಟಾಗುವ ಸಂಭವ. ಆದರೆ ಶಿವನನ್ನು ಲಿಂಗರೂಪದಲ್ಲಿ ಪೂಜಿಸುವ ಜನರೇ ಅಸಂಖ್ಯಾತರಾಗಿದ್ದಾರೆ. ಶೈವಗುಡಿಗಳಲ್ಲೆಲ್ಲ ಬಹುತರ ಶಿವಲಿಂಗವೆ ಪ್ರತಿಷ್ಠಿತವಾಗಿರುವುದು. ದ್ವಾದಶ ಜ್ಯೋತಿರ್ಲಿಂಗಗಳಂತೂ ಪ್ರಸಿದ್ಧವಾಗಿವೆ. ಇದಕ್ಕೆ ಕಾರಣವೆಂದರೆ ಲಿಂಗವು ಮನುಷ್ಯಾಕಾರವನ್ನು ಏಳ್ಳಷ್ಟು ಹೋಲದಿರುವದರಿಂದ ಪರಮಾತ್ಮನ ಅಮೂರ್ತ ಸ್ವರೂಪವನ್ನು ಬಹು ಚೆನ್ನಾಗಿ ಸೂಚಿಸುವುದೆಂದು ತಜ್ಞರ ಮತ.[೧] ಆದರೆ ಇಂತಹ ಸ್ಥಾವರಲಿಂಗವಾದರೂ-ಉಳಿದ ಪ್ರತಿಮೆಗಳಷ್ಟಾಗದಿದ್ದರೂ ಅವುಗಳಂತೆಯೆ-ಶಿವನ ಪ್ರತೀಕವೆಂದೆ ತಿಳಿಯುವುದು ಸರಿ.

ಮತ್ತೆ ಕೆಲ ಶಿವಶರಣರು ಕುರಿಯ ಹಿಕ್ಕೆಯನ್ನೆ ಇಲ್ಲವೆ ಸ್ತ್ರೀಕುಚವನ್ನೆ ಅಳೆಯುವ ಬಳ್ಳವನ್ನೆ ಅಥವಾ ಕಲ್ಲಗುಂಡನ್ನೆ-ರೂಪಸಾಮ್ಯದಿಂದಾಗಲಿ ಆಕಾರಸಾದೃಶ್ಯದಿಂದಾಗಲಿ-ಶಿವಲಿಂಗವೆಂದು ನಂಬಿ ಪೂಜಿಸಿದರೆಂದು ಅವರ ಚರಿತ್ರೆಗಳಿಂದ ತಿಳಿದು ಬರುತ್ತಿದೆ.[೨] ಈ ಬಗೆಯ ಭಕ್ತಿಗೆ (ಮೂಢ ಇಲ್ಲವೆ) ಮುಗ್ಧಭಕ್ತಿಯೆಂದು ಹೇಳುವುದುಂಟು. ಲಿಂಗವನ್ನೆ ಶಿವನ ಪ್ರತೀಕವೆಂದು ಪೂಜಿಸುವುದಾದರೆ, ಅದೇ ರೀತಿ ಕುರಿಯ ಹಿಕ್ಕೆಯನ್ನಾಗಲಿ, ಸ್ತ್ರೀಕುಚವನ್ನಾಗಲಿ ಇನ್ನೇನನ್ನೇ ಆಗಲಿ ಪೂಜಿಸುವುದರಲ್ಲಿ ತಪ್ಪಾದರೂ ಏನು ಎಂದು ಬಲ್ಲವರು ಪ್ರಶ್ನಿಸಬಹುದು. ಅದೇನೇ ಇರಲಿ-ಈ ಭಾವನೆ, ಈ ಮಾರ್ಗ ವೀರಶೈವಕ್ಕೆ ಮಾತ್ರ ಸಮ್ಮತವಾದುದಲ್ಲವೆಂಬುದನ್ನು ನಾವು ನೆನಪಿನಲ್ಲಿಟ್ಟು ಕೊಳ್ಳತಕ್ಕದ್ದು.

ಇದೂ ಅಲ್ಲದೆ, ಶಿವನು ಭಕ್ತರನ್ನು ಉದ್ಧರಿಸುವುದಕ್ಕೆಂದು ಅವರ ಭಕ್ತಿಯ ಪರಿಯನ್ನು ಪರೀಕ್ಷಿಸುವುದಕ್ಕೆಂದು ಜಗತ್ತಿನಲ್ಲಿ ಬೇರೆ ಬೇರೆ ರೂಪಿನಿಂದ ಸಂಚರಿಸುತ್ತಾನೆಂಬುದು ಶೈವರಲ್ಲಿ ರೂಢವಾದ ನಂಬಿಗೆ. ಹಿಂದಕ್ಕೆ ಶಿವನು ಇಂತಹ ಇಪ್ಪತ್ತೈದು ಲೀಲೆಗಳನ್ನು ಮಾಡಿರುವನೆಂದು ಶೈವಪುರಾಣ

೧. ಈ ಬಗೆಗೆ ಹೆಚ್ಚಿನ ವಿವರಗಳಿಗಾಗಿ ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯಸಮಿತಿಯವರು ಪ್ರಕಟಿಸಿದ ವೀರಶೈವ ತತ್ತ್ವಪ್ರಕಾಶದಲ್ಲಿ ಈ ಲೇಖಕರು ಬರೆದ ಪ್ರಸ್ತಾವನೆ ಪುಟ ೧೨ ರಿಂದ ಮುಂದೆ ನೋಡುವುದು.

೨. ಶಿವಾನುಭವದರ್ಪಣ: ಪದ ೪೮, ಪದ್ಯ ೨೧ (ಪುಟ ೧೬೦); ಘನಮಠದಾರ್ಯರ ಭಕ್ತಿಸುಧಾಸಾರ: ಪದ್ಯ ೧೦೦; ಸರ್ಪಭೂಷಣಕವಿಯ ಕೈವಲ್ಯಕಲ್ಪವಲ್ಲರಿ: ನೀತಿಕ್ರಿಯಾಚರ್ಯ ಪ್ರತಿಪಾದನ ಸ್ಥಳ: ಪದ ೮. ಇತ್ಯಾದಿ.

ಗಳು ಸಾರುತ್ತಿವೆ. ಶಿವನು ತನ್ನ ಭಕ್ತರನ್ನು ಬಹು ಕಠೋರವಾದ ಪರೀಕ್ಷೆಗೆ ಈಡುಮಾಡುತ್ತಿದ್ದನಂತೆ. ಅಸಹನೀಯವಾದ ಹಿಂಸೆ, ಯಾತನೆ, ಕಿರುಕುಳ ಗಳಿಗೆ ಅವರನ್ನು ಗುರಿಮಾಡುತ್ತಿದ್ದನಂತೆ. ಹಸುಗೂಸುಗಳ ಮಾಂಸವನ್ನು ಬಯಸಿ ತಾಯಿತಂದೆಗಳಿಂದ ಮಕ್ಕಳನ್ನು ಕೊಲ್ಲಿಸುವಷ್ಟು ಅಮಾನುಷ ಕೃತ್ಯಗಳನ್ನು ಎಸಗುತ್ತಿದ್ದನೆಂದು ಈ ಕಥೆಗಳು ಹೇಳುತ್ತಿವೆ. ಮೇಲಾಗಿ ಶಿವನು ಗೌರವರ್ಣದವನಾದರೂ ವಿಕಟ ವೇಷಧಾರಿಯಾಗಿದ್ದನಂತೆ. ಉಡುವುದು ಆನೆದೊಗಲು, ಸರ್ಪಗಳ ಆಭರಣ, ಕೊರಳಲ್ಲಿ ಎಲುವಿನ ಹಾಗೂ ರುಂಡಗಳ ಮಾಲೆ, ಮೈಗೆ ಪೂಸುವುದು ಹೆಣದ ಬೂದಿ, ಒಂದು ಕೈಯಲ್ಲಿ ತಲೆಯೋಡು, ಇನ್ನೊಂದರಲ್ಲಿ ಶೂಲಕ್ಕೆ ಸಿಕ್ಕಿಸಿದ ಸೆಡೆದ ಹೆಣ, ಸ್ಮಶಾನವಾಸ-ಇತ್ಯಾದಿಯಾಗಿ. ವಿವೇಕದ ಓರೆಗಲ್ಲಿಗೆ ನಿಲ್ಲದ ಈ ಬಗೆಯ ಕಲ್ಪನೆಗಳು ಶೈವರಲ್ಲಿ ನಂಬುಗೆಯ ಬಂಡವಾಳವಾಗಿವೆ. ವೀರಶೈವ ರಲ್ಲಿಯೂ ಹಲವು ಕವಿಗಳೂ ಪುರಾಣಕರ್ತರೂ ಇವುಗಳನ್ನು ಪರಂಪ ರಾಗತವಾಗಿ ಅಂಗೀಕರಿಸಿದುದು ಕಂಡು ಬಂದರೂ, ನಿಜವಾದ ವೀರಶೈವಕ್ಕೆ ಈ ಕಲ್ಪನೆಗಳಾವುವೂ ಸಮ್ಮತವಾಗಿರುವುದಿಲ್ಲ. ವೀರಶೈವರು ವಿಗ್ರಹ ಪೂಜೆಯನ್ನೂ ಸ್ಥಾವರಲಿಂಗ ಪೂಜೆಯನ್ನೂ ತ್ಯಜಿಸಿರುವರಲ್ಲದೆ, ಗುಡಿಯ ಸಂಸ್ಕೃತಿಯನ್ನೆ ಅಲ್ಲಗಳೆದು, 'ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ' ವೆಂಬ, ಮನುಜರ 'ದೇಹವೇ ದೇಗುಲ' ವೆಂಬ ಉದಾತ್ತ ತತ್ತ್ವಗಳನ್ನು ಕೈಕೊಂಡಿರುವರು.[೧] ಆದುದರಿಂದ ವೀರಶೈವರಲ್ಲಿ ಪರಶಿವನ ಹಾಗು ಲಿಂಗದ ಬಗೆಗೆ ಕಲ್ಪನೆಗಳು ಯಾವ ವಿಧವಾಗಿವೆ ಎಂಬುದನ್ನು ಸ್ವಲ್ಪದ ರಲ್ಲಿಯೆ ಇಲ್ಲಿ ಹೇಳಬಯಸುತ್ತೇವೆ.[೨]

ಬ್ರಮ್ಹ - ವಿಷ್ಣು - ರುದ್ರರೆಂಬ ತ್ರಿಮೂರ್ತಿಗಳಲ್ಲದೆ ಅವರಿಗೆಲ್ಲ ಹಿನ್ನೆ ಲೆಯಾದ ಮೂಲಭೂತವಾದ ಪರಶಿವನು ಬೇರೆ ಇದ್ದಾನೆ. ಅವನು ನಿರ್ವಿ ಕಾರ, ನಿರಾಕಾರ, ನಿಷ್ಕಲ, ನಿರ್ಗುಣನಾಗಿದ್ದಾನೆ. ಸೃಷ್ಟಿಯೆಲ್ಲವು ಅವನ ಲೀಲೆ;ಮಾಯೆಯಲ್ಲ. ಈ ಲೀಲೆ ನಡೆಯುವದಕ್ಕೆ ಶಕ್ತಿಯ ನೆರವು ಆವಶ್ಯಕ.

೧. ಮೈಲಾರ ಬಸವಲಿಂಗ ಶರಣರ ಶಿವಾನುಭವದರ್ಪಣದ ೧೩ ನೆಯ ಪದವನ್ನು ನೋಡುವುದು. ಬಸವಣ್ಣನವರ ವಚನಗಳು ಈ ಮಾತನ್ನು ಸಮರ್ಥಿಸುತ್ತಿವೆ. ಪ್ರಾಣ ಲಿಂಗಿಯ ಪ್ರಾಣಲಿಂಗಿ ಸ್ಥಳದ ೧೧ ನೆಯ ವಚನ ನೋಡುವುದು.

೨. ಮುಂದಿನ ವಿಷಯವನ್ನು ವೀರಶೈವ ತತ್ತ್ವಪ್ರಕಾಶದ ಪ್ರಸ್ತಾವನೆ (ಪುಟ. ೧೩ ರಿಂದ ಮುಂದೆ) ಯಿಂದ ಸಂಕ್ಷಿಪ್ತ ಮಾಡಲಾಗಿದೆ.

ಆ ಶಕ್ತಿ ಪರಶಿವನಲ್ಲಿ ಅವಿನಾಭಾವದಿಂದಲೆ ನೆಲೆಸಿರುವಳು. ಪರಶಿವನ ಲೀಲೆಯಿಂದುಂಟಾದ ಸೃಷ್ಟಿಯಲ್ಲಿತೋರುವ ಪ್ರತಿಯೊಂದುವಸ್ತುವಿನಲ್ಲಿಯೂ, ಪ್ರತಿಯೊಂದು ಸ್ಥಾನದಲ್ಲಿಯೂ ಅವನು ಅಂತರ್ಯಾಮಿಯಾಗಿ ಇರುತ್ತಾನೆ: ಜೀವನಲ್ಲಿ (ಎಂದರೆ ಮನುಷ್ಯನಲ್ಲಿ) ಸಹ ಅದೇರೀತಿ ಅಂತರ್ಗತನಾಗಿರುತ್ತಾನೆ. ಆದರೆ ಸ್ಥೂಲಶರೀರದ ಪ್ರತಿಬಂಧದ ಮೂಲಕವಾಗಿ ಜೀವನಿಗೆ ಅಂಟಿಕೊಳ್ಳುವ ಮಲತ್ರಯಗಳ ಮೂಲಕವಾಗಿ ಮರವೆ ಅಜ್ಞಾನ ಮೊದಲಾದವುಗಳು ಜೀವನನ್ನು ಆವರಿಸಿರುತ್ತವೆ. ಈ ಪ್ರತಿಬಂಧಕವನ್ನು ಭೇದಿಸಿ ಪರಶಿವನನ್ನು ಸಾಧಿಸುವದೇ ಜೀವನ ಗುರಿ. ಜೀವನಿಗೆ ತನ್ನ ಅರಿವು ಉಂಟಾಗುವದೇ ಈ ಗುರಿಯನ್ನು ಸಾಧಿಸುವದರಲ್ಲಿ ಮೊದಲನೇಯ ಅಡಿಯಾಗಿದೆ. ಅದಕ್ಕೋಸುಗ ಭಕ್ತಿಭಾವದಿಂದ ಜೀವನು ಅನುಭವದಲ್ಲಿ ಹಿರಿಯನಾದ ಗುರುವನ್ನು ಅರಸುತ್ತಾನೆ. ಆ ಗುರುವಿನ ಕೃಪೆಗೆ ಪಾತ್ರನಾದಾಗ ಗುರುವು ಜೀವನ ಆಂತರಿಕ ಚಿತ್ (ಅಥವಾ ಶಿವ) ಕಳೆಯನ್ನು ಇಷ್ಟಲಿಂಗವಾಗಿ ಬಹಿಷ್ಕರಿಸಿ ಭಕ್ತನ ಕೈಗೆ ಕೊಡುತ್ತಾನೆ. ಇದನ್ನು ಮೈಲಾರದ ಬಸವಲಿಂಗ ಶರಣರು ಬಹು ಮಾರ್ಮಿಕವಾಗಿ ತಮ್ಮ ಕೃತಿಗಳಲ್ಲಿ ಹಲವು ಕಡೆಗಳಲ್ಲಿ ಹೇಳಿದ್ದಾರೆ.[೧]

ಜೀವನಿಗೆ ಅಂಗವೆಂದೂ ಹೆಸರುಂಟು. ಅಂಗನು ಉಪಾಸಕನು: ಲಿಂಗವು ಉಪಾಸ್ಯವು. ಅಂಗ-ಲಿಂಗಗಳೆರಡೂ ಪರಸಿವನ ಎರಡು ಸ್ಥಲಗಳು. ಲಿಂಗವನ್ನು ವೀರಶೈವನು ಬರಿಯ ಪ್ರತೀಕವೆಂದು ತಿಳಿಯುವದಿಲ್ಲವಾದುದರಿಂದ ಅವನು ಇತರ ಮತದವರಂತೆ ಲಿಂಗವನ್ನು ಇದಿರಿಟ್ಟು ಪೂಜಿಸುವದಿಲ್ಲ. ತನ್ನಲ್ಲಿಯೆ ಅಂತರ್ಯಾಮಿ ಯಾಗಿರುವ ಪರಶಿವನೆಂದೇ ತನ್ನ ಚಿತ್‌ಕಳೆಯೆಂದೇ ಆರಾಧಿಸುತ್ತಾನೆ. ಕರತಳದಲ್ಲಿ ಪೂಜಿಸುವುದಕ್ಕೆಂದು ಕೊಟ್ಟ ಇಷ್ಟಲಿಂಗದೊಡನೆ ಗುರುವು ಭಕ್ತನ ಸೂಕ್ಷ್ಮ ಮತ್ತು ಕಾರಣ ತನುಗಳಲ್ಲಿ ಪ್ರಾಣಲಿಂಗ ಮತ್ತು ಭಾವಲಿಂಗಗಳೆಂಬ ಇನ್ನೆರಡು ಲಿಂಗಗಳನ್ನು ಸ್ಥಾಪಿಸಿರುತ್ತಾನೆ. ಅವುಗಳ ಅನುಸಂಧಾನವನ್ನು ಭಕ್ತನು ಇಷ್ಟಲಿಂಗದೊಡನೆ ಅದರ ಮುಖಾಂತರವಾಗಿಯೆ ಮಾಡಬೇಕಾಗುತ್ತದೆ. ಜೀವನ ಅನುಭವವು ಹೆಚ್ಚಿದಂತೆ ‘ ಷಡ್‌ವಿಧ ’ಲಿಂಗಗಳ ಅರಿವು ಅವನಲ್ಲಿ ಒಡೆಮೂಡುತ್ತದೆ. ಈ ಲಿಂಗಗಳು ತನ್ನ ದೇಹದಲ್ಲಿಯೆ ( ಷಟ್‌ಚಕ್ರಗಳಲ್ಲಿ )

೧. ಷ. ಸಿ. ವೀರಶೈವ ಸಿದ್ಧಾಂತ: ೧ ನೆಯ ಪ್ರಕರಣ, ಪದ್ಯ ೪; ಪಂಚಾಚಾರ ಪ್ರಕರಣ; ಪದ್ಯ ೧ ರಿಂದ ಮುಂದೆ; ಗುರುಕರುಣ ತ್ರಿವಿಧ ೮೦, ೮೧ ಇತ್ಯಾದಿ.



ಮೈಲಾರ ಬಸವಲಿಂಗ ಶರಣರ ಗುರುಗಳಾದ ಶ್ರೀ ಚೆನ್ನವೀರಸ್ವಾಮಿಗಳ ಕರ್ತೃ ಗದ್ದುಗೆ
ಲಿಂಗನಾಯಕನಹಳ್ಳಿ (ಜಿ. ಬಳ್ಳಾರಿ)

ನೆಲಸಿವೆಯೆಂಬ ಅರಿವೂ ಉಂಟಾಗುತ್ತದೆ. ಬರುಬರುತ್ತ ಆತನ ಇಂದ್ರಿಯ ಗಳೆಲ್ಲವೂ ಲಿಂಗಮಯವಾಗುತ್ತವೆ. ಕೊನೆಗೆ ಲಿಂಗನೂ ಅಂಗನೂ ಒಂದರಲ್ಲೊಂದು ಬೆರೆತು ಲಿಂಗಾಂಗ ಸಾಮರಸ್ಯ ಉಂಟಾಗುತ್ತದೆ. ಇದನ್ನೆ ಕೊನೆಯ ಅನುಭವ ಅಥವಾ ಅನುಭವದ ಕೊನೆಯೆಂದು ಹೇಳಬಹುದು. ಒಮ್ಮೆ ಉಂಟಾದ ಪರಶಿವನ ಅನುಭವವು ಅಂಗನಲ್ಲಿ ಕಡೆತನಕ ಹಾಗೇ ಉಳಿಯುವುದರಿಂದ ಇದಕ್ಕೆ ಶಿವಾನುಭಾವವೆಂದು ಹೆಸರು.

ಭಕ್ತನ ಮಸ್ತಕದೊಳಗಿರ್ದ ಚಿತ್‌ಕಳೆಯನ್ನೆ, ('ಕಂಗಳಾಲಯ ಚಿಜ್ಜ್ಯೋತಿ'ಯನ್ನೆ) ಗುರುವು ಕರುಣಿಸಿ ಇಷ್ಟಲಿಂಗದ ರೂಪದಲ್ಲಿ ಭಕ್ತನ ಕೈಗೆ ಕೊಡುವುದರಿಂದ ಅದು ಬರಿಯ ಪ್ರತೀಕವಾಗಲಾರದು. ಅದು ತನ್ನಲ್ಲಿಯೆ ನೆಲಸಿದ, ತನ್ನ ನಿಜಸ್ವರೂಪವಾದ, ನಿಷ್ಕಳ ಪರಶಿವನ ಸಕಲ ರೂಪವೆಂದೆ ಭಕ್ತನು ಅದನ್ನು ಆರಾಧಿಸುತ್ತಾನೆ. ಇದು ಶಿಲೆಯಿಂದ ಮಾಡಿರುವುದಾದರೂ ಆಕಾರದಲ್ಲಿ ಶೈವಗುಡಿಯೊಳಗಿನ ಲಿಂಗವನ್ನು ಸ್ಥೂಲವಾಗಿ ಹೋಲುವುದಾದರು ಇದು ಶಿಲೆಯೆಂಬ ಅಥವಾ ಜಡವೆಂಬ ಭಾವನೆ ವೀರಶೈವರಲ್ಲಿಲ್ಲ. ಇದನ್ನು ಸಿದ್ಧಪಡಿಸುವಲ್ಲಿ 'ಪಂಚಸೂತ್ರ'ವೆಂಬ ವಿಶಿಷ್ಟ ಕ್ರಮವಿದೆ. ಇದನ್ನು ಗುರುವಿನಿಂದಲೆ ವಿಧಿವತ್ತಾಗಿ ಪಡೆಯ ಬೇಕಾಗುವುದು. ಇದನ್ನು ಆರಾಧಿಸುವ (ಪಂಚಾಕ್ಷರಿ) ಮಂತ್ರವನ್ನು ಗುರುವಿನ ಮುಖದಿಂದಲೆ ಆತನ ಅನುಗ್ರಹದಿಂದಲೆ ದೊರಕಿಸಬೇಕು. ಈ ಎಲ್ಲ ಸಂಸ್ಕಾರಕ್ಕೆ ದೀಕ್ಷೆಯೆಂಬ ಹೆಸರು. ದೀಕ್ಷೆಯಲ್ಲಿ ಆಯತ, ಸ್ವಾಯತ, ಸನ್ನಿಹಿತ ಎಂದು ಮೂರು ತೆರ. ಇಷ್ಟಲಿಂಗವನ್ನು ಕೊಡುವ ದೀಕ್ಷೆಗೆ 'ಆಯತ' ದೀಕ್ಷೆಯೆಂದೆನ್ನುವುದರಿಂದ ವೀರಶೈವನಿಗೆ 'ಲಿಂಗಾಯತ' ಎಂಬ ಹೆಸರು ಒಪ್ಪತಕ್ಕದ್ದಾಗಿದೆ.[೧]

೧. ವೀರಶೈವರಿಗೆ 'ಲಿಂಗಾಯತ' ಎಂಬ ಹೆಸರು ಗ್ರಂಥಗಳಲ್ಲಿ ಇಲ್ಲದಿದ್ದರೂ ಬಹಳವಾಗಿ ಬಳಕೆಯಲ್ಲಿದೆ. ಇದು 'ಲಿಂಗ' ಮತ್ತು 'ಆಯತ' ಎಂಬ ಎರಡು ಶಬ್ದಗಳ ಸಮಸ್ತ ಪದವೆಂದು ಕಾಣುತ್ತದೆ. ಆದರೆ 'ಆಯತ' ಶಬ್ದದ ಬಗೆಗೆ ತಜ್ಞರಲ್ಲಿ ಭಿನ್ನಾಭಿಪ್ರಾಯವಿದೆ. ಕೆಲ ಸಂಸ್ಕೃತ ಪಂಡಿತರು ಈ ಶಬ್ದಕ್ಕೆ ಸರಿಯಾದ ಸಂಸ್ಕೃತ ವ್ಯುತ್ಪತ್ತಿಯನ್ನು ಕಾಣದೆ—ಇದನ್ನು ಕೆಲವರು 'ಲಿಂಗಾಯ್ತ' ಎಂದೂ ಉಚ್ಚರಿಸುತ್ತಿರುವುದರಿಂದ—'ಬಾಗಾಯ್ತ' 'ಜಿರಾಯ್ತ' ಮೊದಲಾದ ಶಬ್ದಗಳಂತೆ ಅನ್ಯದೇಶೀಯ ಶಬ್ದವೆಂದು ಕಡೆಗಣಿಸಿರುವರು. ಬೇರೆ ಕೆಲ ಕನ್ನಡ ಪಂಡಿತರು 'ಆಯ್ತ' ಎಂಬುದು ಕನ್ನಡ ತದ್ಧಿತ ಪ್ರತ್ಯಯವೆಂತಲೂ 'ಲಿಂಗಾಯ್ತ' ಎಂದರೆ ಲಿಂಗದಲ್ಲಿ ವರ್ತಿಸುವವನು ಅಥವಾ ಲಿಂಗವಂತನು ಎಂಬ ಅರ್ಥವನ್ನೆ ಸೂಚಿಸುತ್ತಿದೆ ಎನ್ನುವರು. 'ಲಿಂಗವಂತ' ಪದವು ಬಸವಣ್ಣನವರೇ ಮೊದಲಾ

ವೀರಶೈವರ ಏಕಮೇವ ಗುರಿಯಾದ ಶಿವಾನುಭಾವ ಅಥವಾ ಲಿಂಗಾಂಗ ಸಾಮರಸ್ಯವನ್ನು ಪಡೆಯಬೇಕಾದರೆ ಅಷ್ಟಾವರಣ, ಪಂಚಾಚಾರಗಳಿಂದ ಯುಕ್ತವಾದ ಷಟ್‌ಸ್ಥಳಾಚಾರಣೆಯೆ ಸರಿಯಾದ ಮಾರ್ಗವೆಂದು ವೀರಶೈವರ ನಂಬಿಗೆ. ಇದನ್ನೆ ಮೈಲಾರದ ಬಸವಲಿಂಗಶರಣರು ತಮ್ಮ ಕೃತಿಗಳಲ್ಲಿ ವಿಸ್ತಾರವಾಗಿ ವಿಧವಿಧವಾಗಿ ಪ್ರತಿಪಾದಿಸಿದ್ದಾರೆ.

ವೀರಶೈವರ ವಿಶಿಷ್ಟ ಲಕ್ಷಣಗಳಾದ ಅಷ್ಟಾವರಣಗಳಲ್ಲಿ ಗುರು, ಮಂತ್ರ ಮುಂತಾದ ಕೆಲವು ಲಕ್ಷಣಗಳು ಹಲವು ಬೇರೆ ಮತಾನುಯಾಯಿಗಳಿಗೂ, ಅವುಗಳೊಡನೆ ಲಿಂಗ, ವಿಭೂತಿ, ರುದ್ರಾಕ್ಷಿ ಮುಂತಾದ ಇನ್ನೂ ಕೆಲವು ಶೈವರಿಗೂ ಸಾಮಾನ್ಯವಾಗಿವೆಯೆಂದು ಕಂಡುಬಂದರೂ, ಅವುಗಳ ಬಗೆಗೆ ವೀರಶೈವರಲ್ಲಿಯೂ ಇನ್ನುಳಿದವರಲ್ಲಿಯೂ ಇರುವ ತಿಳಿವಳಿಕೆಯಲ್ಲಿ

---

ದವರ ವಚನಗಳಲ್ಲಿ ಕಂಡು ಬರುವುದರಿಂದ 'ಲಿಂಗಾಯತ' ಶಬ್ದವನ್ನು ಬಿಟ್ಟು 'ಲಿಂಗವಂತ' ಎಂಬುದನ್ನು ಬಳಸುವುದು ಮೇಲೆಂದು ಅವರ ಅಭಿಪ್ರಾಯ. ಮತ್ತೆ ಕೆಲವರು 'ಲಿಂಗಾಯತ' ಎಂಬ ಪದವನ್ನು ಅನ್ಯ ಜಾತೀಯ ಜನರು ವೀರಶೈವರಿಗೆ ವ್ಯಂಗ್ಯವಾಗಿ—ಮಹಾರಾಷ್ಟ್ರದಲ್ಲಿ ಲಿಂಗಾಡ್ಯ' (ಲಿಂಗಾಡ್ಯ ?) ಎಂಬ ಪದವನ್ನು ಬಳಸುವಂತೆ-ಪ್ರಯೋಗಿಸುತ್ತಿರಬೇಕೆಂದೂ, ವೀರಶೈವರು ಈ ಪದವನ್ನು ಬಳಸುವದು ಸರಿಯಲ್ಲವೆಂದು ತಿಳಿಯುತ್ತಾರೆ. ಆದರೆ ಇದು ನಿಜವಾಗಿಯೂ ವೀರಶೈವರ ಸಾಂಕೇತಿಕ ಪದವಾಗಿರಬೇಕೆಂದು ತೋರುತ್ತಿದೆ. ಇದರ ಅರ್ಥ ಇಷ್ಟಲಿಂಗವುಳ್ಳವರು ಎಂದಿರಬೇಕು. ಆಯತ ದೀಕ್ಷೆಯಿಂದ—ಗುರುವಿನ ಕೃಪೆಯಿಂದ—ದೊರೆತ ಲಿಂಗವುಳ್ಳವರು ಎಂಬರ್ಥದಲ್ಲಿ 'ಲಿಂಗವು ಆಯತವಾದವರು' ಎಂದು ಸೂಚಿಸುವಂತೆ ತೋರುತ್ತಿದೆ. 'ಆಯತ' ಎಂಬ ಶಬ್ದವು 'ಆಯತ ಬಟ್ಟಲು', 'ಆಯತ ಮಾಡುವುದು' ಮುಂತಾದ ವಿಶಿಷ್ಟ ವೀರಶೈವ ಆಚಾರಗಳನ್ನು ಸೂಚಿಸುವ ಪದಗಳಲ್ಲಿ ಬಂದು ಬರುವುದು ವೀರಶೈವರಿಗೆ ಗೊತ್ತಿದ್ದ ಮಾತು. ಸ್ಥೂಲವಾದ ಇಂದ್ರಿಯ ಗೋಚರವಾದ ಜಗತ್ತನ್ನು ಮಾತ್ರ ನಂಬುವ ಚಾರ್ವಾಕರಿಗೆ 'ಲೋಕಾಯತ'ರೆನ್ನುವಂತೆ (Radhakrishnan's Indian Philosophy, Vol. I, pp. 278 et seq) ವಿಶ್ವವನ್ನೆಲ್ಲ ಲಿಂಗಮಯವೆಂದು ನಂಬುವ ವೀರಶೈವರನ್ನು 'ಲಿಂಗಾಯತ'ರೆಂದು ಹೇಳುವುದು ಅರ್ಥಗರ್ಭಿತವಾಗಿಯೆ ಇದೆ. ಹೀಗಿದ್ದರೂ ಈ ಪದವು ಗ್ರಂಥಸ್ಥವಾಗಿರುವುದಕ್ಕೆ ಕೆಲ ಕಾರಣಗಳನು ಸೂಚಿಸಬಹುದು. ಈ ಪದವು ಬಸವಣ್ಣನವರ ಕಾಲದಿಂದೀಚೆಗೆ ರೂಢವಾಗಿರಬೇಕು. ವೀರಶೈವರ ವೈಶಿಷ್ಟ್ಯವನ್ನು ಬೀರುವ ಈ ಪದವನ್ನು ಆರಂಭದಲ್ಲಿ ವೀರಶೈವರು ತಮ್ಮತಮ್ಮೊಳಗೆ ಮಾತ್ರ ಪ್ರಯೋಗಿಸುತ್ತಿರಬೇಕು. ಇದಕ್ಕೆ ಒಂದೆರಡು ಸಾಮ್ಯವನ್ನು ಕೊಡಬಹುದು. ವೀರಶೈವರಿಗೆ ಕೆಲವೆಡೆಗಳಲ್ಲಿ ಶಿವಾಚಾರದವರೆಂದೂ ಹೇಳುವುದುಂಟು. ಈ ಹೆಸರು ವೀರಶೈವರಿಗೆ ವಿಶಿಷ್ಟವಾದ ಪಂಚಾಚಾರಗಳಲ್ಲಿ ಒಂದಾದ ಶಿವಾಚಾರದಿಂದಲೆ ಬಂದಿರಬೇಕು. ಹೀಗೆಯೆ ಪಂಚಾಚಾರದವರೆಂದು ಒಂದು ಪಂಗಡಕ್ಕೆ ಹೆಸರಾಗಿದೆ. ಇದೆಲ್ಲ ಜನಸಾಮಾನ್ಯರಲ್ಲಿ ಕಂಡು ಬರುವ ಅಜ್ಞಾನದ ಪರಿಣಾಮ ಹಾಗೂ ಕುರುಹು.

ಬಹಳ ವ್ಯತ್ಯಾಸವಿದೆ. ಉದಾಹರಣೆಗೆಂದು ಗುರು-ಲಿಂಗ-ಜಂಗಮ ಈ ಮೂರೂ ಪರಶಿವನ ಮೂರು ರೂಪಗಳೆಂದು ವೀರಶೈವರ ತಿಳಿವಳಿಕೆ. ಭಕ್ತನಿಗೆ ಇಷ್ಟಲಿಂಗವು ದೊರೆಯುವುದು ಕೇವಲ ಗುರುಕೃಪೆಯಿಂದ ಎಂಬುದೂ, ಭಕ್ತನು ತಾನು ಭೋಗಿಸಬೇಕಾದ ಪ್ರತಿಯೊಂದು ಪದಾರ್ಥ ವನ್ನು ಲಿಂಗಮುಖವಾಗಿಯೆ ಭೋಗಿಸಿ ಲಿಂಗ ಭೋಗೋಪಭೋಗಿಯಾಗ ಬೇಕೆಂಬುದೂ, ಲಿಂಗಕ್ಕೆ ಜಂಗಮವೇ ಮುಖವಾದುದರಿಂದ ತಾನು ಸೇವಿಸ ತಕ್ಕ ವಸ್ತುವನ್ನು ಮೊದಲು ಜಂಗಮಕ್ಕೆ ಸಲ್ಲಿಸಿ ಜಂಗಮದ ಪ್ರಸಾದವನ್ನೆ ಲಿಂಗಮುಖವಾಗಿ ಭಕ್ತನು ಸೇವಿಸತಕ್ಕದ್ದೆಂಬುದು ವೀರಶೈವರ ನಂಬಿಗೆ, ಅವರ ಆಚಾರ.[೧] ಆದುದರಿಂದ ಗುರು ಜಂಗಮರನ್ನು ಬರಿಯ ನರರೆಂದು, ಲಿಂಗವನ್ನು ಬರಿಯ ಶಿಲೆಯೆಂದು, ಪಾದೋದಕವನ್ನು ಬರಿಯ ನೀರೆಂದು ಪ್ರಸಾದವನ್ನು ಬರಿಯ ಅನ್ನವೆಂದು (ಎಂದರೆ ಇವೆಲ್ಲ ಬರಿಯ ಜಡವಾದ ಪದಾರ್ಥಗಳೆಂದು) ಬಗೆಯುವುದು ವೀರಶೈವರ ಆಚರಣೆಗೆ ಅಥವಾ ನಂಬಿ ಗೆಗೆ ಹೊರತು.

1402

೨

ಉದಾಹರಣೆಗೆಂದು ಮೇಲೆ ಹೇಳಿದ ಕೆಲವು ಭೇದಗಳಲ್ಲದೆ ಶೈವಕ್ಕೂ ವೀರಶೈವಕ್ಕೂ ಇನ್ನೂ ಹಲವು ಸ್ಥೂಲಸೂಕ್ಷ್ಮ ಭೇದಗಳು ಇರುವುದಾದರೂ ವೀರಶೈವರಲ್ಲಿ ಹಲಕೆಲವು ಶೈವಾಚಾರಗಳು ಅಲ್ಲಲ್ಲಿ ಕಾಣಬರುವುದಕ್ಕೆ ಕಾರಣವೇನೆಂಬ ಪ್ರಶ್ನೆ ಉತ್ಪನ್ನವಾಗುವುದು ಸಹಜವಿದೆ. ಇದಕ್ಕೆ ಸಮಾ ಧಾನವೆಂದು ಒಂದೆರಡು ಮಾತುಗಳನ್ನು ಸಂಕ್ಷಿಪ್ತವಾಗಿಯೆ ಹೇಳಬಹುದು. ವೀರಶೈವವು ಮೂಲತಃ ಶೈವದ ಒಂದು ಶಾಖೆಯಾಗಿರುವದರಿಂದ ಶೈವ ದಿಂದ ವೀರಶೈವಕ್ಕೆ ಬಂದ ಜನಸಾಮಾನ್ಯರಲ್ಲಿ ಶೈವರೂಢಿಗಳು ಹಾಗೆಯೆ ಉಳಿದುಕೊಂಡು ಮುಂದೆ ಪರಂಪರವಾಗಿ ಸಮಾಜದಲ್ಲಿ ಅಲ್ಲಲ್ಲಿ ಹಬ್ಬಿರುವ ಸಂಭವವಿದೆ. ವೀರಭದ್ರ, ಗಣೇಶ, ನಂದಿ ಮುಂತಾದ ಶೈವದೈವಗಳ ಪೂಜೆಯು ವೀರಶೈವರಲ್ಲಿ ಅಲ್ಲಲ್ಲಿ ರೂಢವಾಗಿರುವುದಕ್ಕೂ, ಕೆಲವು ಮನೆ ತನಗಳಲ್ಲಿ ಮದುವೆ ಮೊದಲಾದ ಕಾರ್ಯಗಳ ಕಾಲದಲ್ಲಿ ಗುಗ್ಗುಳವನ್ನು ಮೆರೆಸುವುದಕ್ಕೂ, ಅದಕ್ಕೆ ಬೇಕಾದ ಪುರವಂತಿಗೆಯ ವೃತ್ತಿಯನ್ನು ಕೆಲ

೧. ಬಸವಣ್ಣನವರ ವಚನಗಳು : ಭಕ್ತಜ್ಞಾನಸ್ಥಲ : ೧೪೬-೧೪೯, ೧೬೦, ೧೬೩-೧೬೯ ಪ್ರಾಣಲಿಂಗಿಯ ಪ್ರಸಾದಿಸ್ಥಲ: ೬, ಇತ್ಯಾದಿ.

ವೀರಶೈವ ಮನೆತನಗಳು ಕೈಕೊಂಡಿರುವುದಕ್ಕೂ ಇದುವೆ ಕಾರಣವೆಂದು ಹೇಳಬಹುದು. ಆದರೆ ಇವುಗಳೊಡನೆಯೆ ಜಂಗಮಾರ್ಚನೆ ಪಾದೋದಕ ಪ್ರಸಾದ ಮೊದಲಾದವುಗಳನ್ನು ಇಟ್ಟುಕೊಂಡು ಶೈವರೂಢಿಗಳಿಗೆ ವೀರ ಶೈವದ ಮುದ್ರೆಯನ್ನು ಹಾಕಿರುವುದೂ ಕಂಡುಬರುತ್ತಿದೆ. ವಾರ-ತಿಥಿ, ಹಬ್ಬ-ಹುಣ್ಣಿವೆಗಳನ್ನು ವೀರಶೈವರು ಆಚರಿಸುವುದಕ್ಕೆ ಇದೆ ಸಮಾಧಾನ ವನ್ನು ಹೇಳಬಹುದು. ಮೈಲಾರದ ಬಸವಲಿಂಗ ಶರಣರು ಇಂತಹ ಆಚರಣೆಗಳು ಶುದ್ಧ ವೀರಶೈವಕ್ಕೆ ಸಮ್ಮತವಾಗಲಾರವೆಂದು ಹೇಳಿದ್ದಾರೆ.[೧] ಇನ್ನು ವೀರಶೈವರಾದ ಕೆಲವರು ಶೈವ (ಅಥವಾ ಇನ್ನಿತರ ಗುಡಿಯೊಳಗಿನ) ದೇವರ ಪೂಜೆಯನ್ನು ತಮ್ಮ ವೃತ್ತಿಯಾಗಿ ಕೈಕೊಂಡುದು ಕಂಡುಬರುತ್ತಿದೆ. ಆದರೆ ಇಂತಹ ವೃತ್ತಿಯನ್ನು ಅದು ಒಂದು ಕಾಯಕವೆಂಬ ದೃಷ್ಟಿಯಿಂದ ಕೈಕೊಂಡಿರುವರೆಂದೆ ಹೇಳಬೇಕಾಗುತ್ತದೆ. ಹಾಗೂ ಬಸವಣ್ಣನವರು ತಾವು ಭವಿಬಿಜ್ಜಳನ ಸೇವೆಯನ್ನು ಕೈಕೊಂಡುದಕ್ಕೆ ಹೇಳಿದ ಸಮಾಧಾನ ವನ್ನೆ ಇಲ್ಲಿಯೂ ಹೇಳಬೇಕಾಗುತ್ತದೆ.[೨]

ಹೀಗೆಯೆ ಇನ್ನೊಂದು ವಿಚಾರವನ್ನು ಸಂಕ್ಷಿಪ್ತವಾಗಿಯೆ ಇಲ್ಲಿ ವಿವೇ ಚಿಸಬಹುದು. ವೀರಶೈವವನ್ನು ಪ್ರಸಾರಮಾಡಿ ಒಂದು ಸಮಾಜವನ್ನು ಕಟ್ಟುವ ಕಾರ್ಯದಲ್ಲಿ ನಿರತರಾದ ಆಚಾರ್ಯರೆ ಮೊದಲಾದವರು ಬೇರೆ ವೈದಿಕ ಪಂಗಡದವರೊಡನೆ ವಾದಮಾಡುವಾಗ ತಮ್ಮ ಮತದ ಶ್ರೇಷ್ಠತೆ ಯನ್ನು ಸ್ಥಾಪಿಸುವುದಕ್ಕೂ ತಮ್ಮ ತತ್ತ್ವಗಳನ್ನು ಸಮರ್ಥಿಸುವುದಕ್ಕೂ ನಿಗಮಾಗಮಾದಿಗಳಿಂದ ಆಧಾರಗಳನ್ನು ಕೊಟ್ಟಿರುವುದು ಕನ್ನಡ ಹಾಗೂ ಸಂಸ್ಕೃತದಲ್ಲಿ ರಚಿತವಾದ ಗ್ರಂಥಗಳಲ್ಲಿ ಕಂಡುಬರುತ್ತಿದೆ. ಈ ಮಾತು ವಚನಗ್ರಂಥಗಳಿಗೂ ಅನ್ವಯಿಸುತ್ತದೆ. ಇಷ್ಟರಿಂದಲೆ ವೀರಶೈವರು ವೇದೋ ಪನಿಷತ್ತುಗಳನ್ನು ಮನ್ನಿಸುತ್ತಾರೆಂದು ಹೇಳಲಾಗುವುದಿಲ್ಲ. "ನಿಮ್ಮಲ್ಲಿ ನಮ್ಮ ತತ್ತ್ವಗಳ ಬೀಜಗಳಿವೆ, ಆದರೆ ಆ ತತ್ತ್ವಗಳು ಪೂರ್ಣದಶೆಯನ್ನೈ ದಿರುವುದು ನಮ್ಮಲ್ಲಿ" ಎಂಬ ಯುಕ್ತಿವಾದಕ್ಕೆ ಅಂತಹ ಆಧಾರಗಳು ಅನು ಕೂಲವೆಂದು ಅವುಗಳ ಉಪಯೋಗವನ್ನು ವೀರಶೈವ ಸಮಯಾ ಚಾರ್ಯರು ಮಾಡಿಕೊಂಡಿರಬೇಕೆಂದು ಊಹಿಸಬಹುದು. ವೀರಶೈವರದು

---

೧. ಶಿವಾನುಭವದರ್ಪಣ: ಪದ ೧೬; ಹಾಗೆಯೆ ಬಸವಣ್ಣನವರ ವಚನಗಳು: ಭಕ್ತ ಜ್ಞಾನಿಸ್ಥಲ: ೫೮-೬೧, ಮಹೇಶ್ವರ ಜ್ಞಾನಿ ಸ್ಥಲ: ೮೩, ೯೨, ಇತ್ಯಾದಿ.

೨. ಬಸವಣ್ಣನವರ ವಚನಗಳು: ಮಹೇಶ್ವರನ ಭಕ್ತ ಸ್ಥಲ: ೬.

ಅನುಭವಮಾರ್ಗವಾದುದರಿಂದ, ಗ್ರಂಥಗಳ ಆಧಾರವು ಇವರಿಗೆ ಬೇಕಾಗಿಲ್ಲ. ಅಂತೆಯೆ ವೇದಪುರಾಣಗಳನ್ನು ಅಲ್ಲಗಳೆದ ವಚನಗಳು ಹೇರಳವಾಗಿ ಸಿಕ್ಕುತ್ತಿವೆ.[1] ಹೀಗಿದ್ದರೂ ವೀರಶೈವರೊಳಗೆ ಕೆಲವರಲ್ಲಿ ಮತ್ತೆ ಹಿಂದಕ್ಕೆ ಹೋಗಿ ವೇದಾದಿಗಳಿಗೆ ತೆಕ್ಕೆಬೀಳಬೇಕೆಂಬ ಪ್ರವೃತ್ತಿ ಇತ್ತೀಚೆಗೆ ಹೆಚ್ಚಾಗುತ್ತದೆ. ತಮ್ಮ ಧರ್ಮವು ಎಷ್ಟು ಪುರಾತನವೆಂದು ಸಾಧಿಸಲು ಬರುವುದೋ ಅಷ್ಟು ಶ್ರೇಯಸ್ಕರವೆಂದು ಇವರು ತಿಳಿದುಕೊಂಡಂತೆ ಕಾಣುತ್ತಿದೆ. ಸುಧಾರಣೆಗೆ ಮಹತ್ತ್ವವಿರುವ ಈಗಿನ ಕಾಲದಲ್ಲಿ ಈ ಪ್ರವೃತ್ತಿ ಅಷ್ಟು ಸರಿಯೆನಿಸಲಾರದು. ಶಂಕರ, ರಾಮಾನುಜ, ಮಧ್ವಮತಾನುಯಾಯಿಗಳು ತಾವು ಸನಾತನ ಹಿಂದೂಧರ್ಮವನ್ನೆ ಪಾಲಿಸುತ್ತಿದ್ದರೂ ತಮ್ಮ ಮತಾಚಾರ್ಯರ ಹಿಂದೆ ಹೋಗಲು ಸಿದ್ಧರಿಲ್ಲದಾಗ ಸುಧಾರಣೆಯ ಅತ್ಯುಚ್ಚದಸೆಯನ್ನು ಮುಟ್ಟಿದ ವೀರಶೈವರಿಗೆ ಸನಾತನತ್ವದ ಈ ಲವಲವಿಕೆ ವೃಥಾಯಾಸವೆಂದು ತೋರುವುದಿಲ್ಲವೆ ?

### ೪

ಕರ್ಮ-ಜ್ಞಾನ-ಯೋಗಗಳಂತೆ ಭಕ್ತಿಯೂ ಆತ್ಮೋದ್ಧಾರದ ಒಂದು ಮಾರ್ಗವೆಂದು ಪುರಾತನ ಕಾಲದಿಂದಲೂ ಭರತಖಂಡದಲ್ಲಿ ಅಂಗೀಕೃತವಾಗಿದೆ ಆಯಾ ಮಾರ್ಗವನ್ನು ಪ್ರತಿಪಾದಿಸುವವರು ತಂತಮ್ಮ ಮಾರ್ಗವೇ ಶ್ರೇಷ್ಠವಾದುದೆಂದು ಸಾರುವುದು ಸಹಜವಾಗಿದೆ. ಆದರೆ ಭಕ್ತಿಯ ಶ್ರೇಷ್ಠತೆಯನ್ನು ಪ್ರತಿಪಾದಿಸುವಲ್ಲಿ ನಾರದರು 'ಕರ್ಮಜ್ಞಾನಯೋಗೇಭ್ಯೋಽಧಿಕತರಾ ಫಲರೂಪತ್ವಾತ್'[2], ಎಂದರೆ ಭಕ್ತಿಯು ಬರಿಯ ಸಾಧನರೂಪವಾಗಿರದೆ ಫಲರೂಪವಾಗಿರುವುದರಿಂದ ಶ್ರೇಷ್ಠವಾದುದೆಂದು ಹೇಳಿರುವರು.

ಭಕ್ತಿಮಾರ್ಗಕ್ಕಾದರೂ ವಿಶ್ವಾಂತರ್ಯಾಮಿಯಾದ ಪರಮಾತ್ಮನ ಅನುಸಂಧಾನ (ಅಥವಾ ಅನುಭವ)ವೇ ಅಂತಿಮ ಧ್ಯೇಯ. ಆದರೂ ಅದಕ್ಕೆ ನಿರ್ಗುಣ ಬ್ರಹ್ಮದ ಉಪಾಸನೆಯು—ಕ್ಲೇಶೋಽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಂ ಎಂಬಂತೆ—ಪ್ರಯಾಸಕರವೆಂದೇ ಹೇಳಬಹುದು.

೧. ಉದಾ : ಬಸವಣ್ಣನವರ ವಚನ ಮಹೇಶ್ವರನ ಭಕ್ತಸ್ಥಳ ೧೩; ಮಹೇಶ್ವರನ ಶರಣಸ್ಥಳ ಮತ್ತು ಮಹೇಶ್ವರ ಜ್ಞಾನಿ ಸ್ಥಲ ವ. ೪೪, ೪೬, ಇತ್ಯಾದಿ.

೨. ನಾರದರ ಭಕ್ತಿ ಸೂತ್ರಗಳು ೨೫, ೨೬.

ಆದುದರಿಂದಲೆ ನಾಮರೂಪಗಳ ಹಿಡಿತಕ್ಕೆ ಸಿಕ್ಕುವ ಸಗುಣ ಈಶ್ವರನ ಆರಾಧನೆಯೆ ಭಕ್ತಿಗೆ ಸುಲಭ ಹಾಗೂ ಸಹಜವಾದುದು. ಭಕ್ತನ ಆತ್ಮ ವಿಕಾಸದ ಹಂತಕ್ಕನುರೂಪವಾಗಿ ಆತನು ಆರಾಧಿಸುವ ವಸ್ತುವನ್ನು ಕೆಳಗೆ ಕಾಣಿಸಿದಂತೆ ಬೇರೆ ಬೇರೆಯಾಗಿ ವರ್ಗೀಕರಿಸಿರುತ್ತಾರೆ. (೧) ಶಿವ, ವಿಷ್ಣು ಮೊದಲಾದ ನಾಮರೂಪಗಳುಳ್ಳ ದೇವರು; (೨) ಅಂತಹ ದೇವರ ಪ್ರತೀಕ, ಅಥವಾ ಪ್ರತಿಮೆಯೆಂದು ಯಾವುದಾದರೊಂದು ವಿಗ್ರಹ; (೩) ದೇವ ತಾವತಾರನೆಂದು ಆವನಾದರೊಬ್ಬ ಮಹಾತ್ಮನಾದ ಮನುಷ್ಯ; (೪) ತನ್ನ ಗುರು; (೫) ಯಾವನಾದರೊಬ್ಬ ವ್ಯಕ್ತಿಯನ್ನಾರಾಧಿಸಿದ ಇಡಿಯ ಮಾನವ ಸಮಾಜ; (೬) ಪರಮಾತ್ಮನ ವ್ಯಕ್ತಸ್ವರೂಪವೆಂದು ಇಡಿಯ ಜಗತ್ತು ಅಥವಾ ವಿಶ್ವ; (೭) ವಿಶ್ವವನ್ನು ಪಾಲಿಸುವ ಸರ್ವಾಂತರ್ಯಾಮಿ; (೮) ತನ್ನಲ್ಲಿಯೆ ನೆಲಸಿರುವ ಅಂತರಾತ್ಮ. ಆದರೆ ತನ್ನ ಆತ್ಮವು ಪರಮಾತ್ಮ ನಿಂದ ಬೇರೆ ಅಲ್ಲವೆಂಬ ತಿಳಿವಳಿಕೆ ಭಕ್ತನಲ್ಲಿ ಮೂಡಿದ ಹೊರತು ಆತನಿಗೆ ಪರಾ (ಅಥವಾ ಮುಖ್ಯ) ಭಕ್ತಿಯ ಅನುಭವವು ಉಂಟಾಗಲಾರದೆಂದು ಬಲ್ಲವರ ಮತ. ಇದುವೆ ಆತ್ಮವಿಕಾಸದ ಕೊನೆಯ ಅವಸ್ಥೆ.

ಹೀಗೆ, ಭಕ್ತನು ಆರಂಭದ ದಶೆಯಲ್ಲಿ ತನ್ನ ಉಪಾಸ್ಯದೇವತೆಯನ್ನು ತನ್ನಿಂದ ಬೇರೆಯೆಂದು ಭಾವಿಸಿ ಆತನಲ್ಲಿ—ತನ್ನಲ್ಲಿಲ್ಲದ ತನ್ನಲ್ಲಿರಬೇಕಾದ ಸಕಲ ಸದ್ಗುಣಗಳನ್ನು ಆರೋಪಿಸಿ ಆತನನ್ನು ಭಜಿಸುತ್ತಾನೆ. ಆದುದರಿಂದ ಈ ದೆಸೆಯಲ್ಲಿ ಭಕ್ತನಲ್ಲಿ ದ್ವೈತಭಾವವು ಉಂಟಾಗುವುದು ಸಹಜ ವಾದುದು. ತದನಂತರ ಭಕ್ತನ ಅನುಭವವು ಮುಂದುವರಿದಂತೆ, ಆತನ ಆತ್ಮವಿಕಾಸವು ವರ್ಧಿಸಿದಂತೆ ಆ ಆರಾಧ್ಯ ವಸ್ತುವಿನ ಗುಣಗಳು ಭಕ್ತ ನಲ್ಲಿಯೂ ಅಂಕುರಿಸುವುವು. ಕೊನೆಗೆ ಭಕ್ತನು ತನ್ನ ಆರಾಧ್ಯವಸ್ತುವಿ ನೊಡನೆ ತಾದಾತ್ಮ್ಯವನ್ನು ತಾಳುವನು. "ದೇಹಬುದ್ಧ್ಯಾತು ದಾಸೋಹಂ ಜೀವಬುದ್ಧ್ಯಾ ತ್ವದಂಶಕಃ। ಆತ್ಮಬುದ್ಧ್ಯಾ ತ್ವಮೇವಾಹಮಿತಿ ಮೇ ನಿಶ್ಚಿತಾ ಮತಿಃ॥" ಎಂಬಂತೆ ಭಕ್ತನಲ್ಲಿ ಕೇವಲ ತಾನು ಶರೀರಿ ಎಂಬ ತಿಳಿವಳಿಕೆ ಇರುವವರೆಗೆ ತಾನು ಈಶ್ವರನ ದಾಸನೆಂದೂ, ಜೀವನೆಂಬ ತಿಳಿವಳಿಕೆ ಯುಂಟಾದಾಗ ತಾನು ಈಶ್ವರನ ಅಂಶನೆಂದೂ, ಆತ್ಮನೆಂಬ ಅರಿವುಂಟಾ ದಾಗ ತಾನೂ ಈಶ್ವರನೂ ಒಂದೇ ಎಂಬ ಬುದ್ಧಿ ಭಕ್ತನಲ್ಲಿ ಉಂಟಾಗು ವುದು. ಈ ರೀತಿ ತನ್ಮಯತೆಯನ್ನು ಅನುಭವಿಸಿವ ಭಕ್ತರು ಸಾಮಾನ್ಯ ವಾಗಿ ತಮ್ಮ ವ್ಯಕ್ತಿತ್ವವನ್ನು ಸಂಪೂರ್ಣವಾಗಿ ಕಳೆದುಕೊಂಡು ತಮ್ಮ

ಭಾರವನ್ನೆಲ್ಲ ಪರಮಾತ್ಮನ ಮೇಲೆ ಹಾಕಿ ಆತನನ್ನೆ ಅನನ್ಯಭಾವದಿಂದ ಶರಣು ಹೋಗುತ್ತಾರೆ. ಆದರೆ, ಆರಾಧ್ಯವಸ್ತುವಿನೊಡನೆ ತಾದಾತ್ಮ್ಯವನ್ನು ಹೊಂದಿದ ಅನುಭವವನ್ನು ಪಡೆದರೂ ಕೆಲ ಭಕ್ತರು ತಮ್ಮ ವ್ಯಕ್ತಿತ್ವವನ್ನು ಬೇರೆಯಾಗಿ ಇಟ್ಟುಕೊಳ್ಳಲು ಬಯಸುತ್ತಾರೆ. ಸಕ್ಕರೆಯೊಡನೆ ಬೆರೆಯು ವುದಕ್ಕಿಂತ ಸಕ್ಕರೆಯನ್ನು ಸವಿಯುವುದು ಲೇಸೆಂಬಂತೆ. ಹೀಗೆ ವ್ಯಕ್ತಿತ್ವ ವನ್ನು ಬೇರೆ ಇಟ್ಟುಕೊಳ್ಳುವರಲ್ಲಿ ಕೆಲವರು ಪ್ರಪಂಚಕ್ಕೇ ತಮ್ಮ ಸೇವೆ ಯನ್ನು ಸಲ್ಲಿಸಬೇಕೆಂಬ ಮನೋಬಯಕೆಯುಳ್ಳವರಾಗಿರುತ್ತಾರೆ. ಅಂತು ಭಕ್ತನು ತನ್ನ ವ್ಯಕ್ತಿತ್ವವನ್ನು ಉಳಿಸಿಕೊಳ್ಳಲಿ ಬಿಡಲಿ, ಒಮ್ಮೆ ಆತನಿಗೆ ಪರ ವಸ್ತುವಿನ ಅನುಭವವಾದನಂತರ ಅವನ ವ್ಯಕ್ತಿತ್ವವು ಮೊದಲಿನಂತೆ ಉಳಿ ಯುವುದಿಲ್ಲವೆಂಬುದು ನಿಜ. ಮುಂದೆ ಭಕ್ತನು ಯಾವ ಕಾರ್ಯವನ್ನು ಎಸಗಿದರೂ ಅದರಲ್ಲಿ ಈಶಪ್ರೇರಣೆ ಇದ್ದೇ ಇರುತ್ತದೆ. ಬಾಲಲೀಲೆಯನ್ನು ಮೆರೆದು ಸುಪ್ರಸಿದ್ಧರಾದ ಮುಳಗುಂದದ ಮಹಂತ ಶಿವಯೋಗಿಗಳು :

ಪರವಸ್ತು ನೀನೆಂದುವೊರೆದೆ । ಎನ-
ಗೊರೆದ ಕಾರಣದಿಂದೆ ನಾ ನಿನ್ನರಿದೆ
ಅರಿಯಲೆನ್ನೊಳಗೆ ನೀ ಬೆರೆದೆ । ದೇವಾ
ಬೆರೆದಾಕ್ಷಣವೆ ಎನ್ನ ಭವಬೀಜ ಹುರಿದೆ[೧]

ಎಂದು ಹೇಳಿದುದರಲ್ಲಿ ಈ ಮರ್ಮವು ಹುದುಗಿದೆ. ಭಕ್ತಿ ವಿಷಯದಲ್ಲಿ ವೀರಶೈವರು 'ಲಿಂಗಪತಿ : ಶರಣಸತಿ' ಎಂಬ ತತ್ತ್ವವನ್ನು ಅಂಗೀಕರಿಸಿರು ವರು.[೨] ಲಿಂಗಾಂಗ ಸಾಮರಸ್ಯವು ಸತಿಪತಿಗಳ ಸಾಮರಸ್ಯದಂತೆಯೆ. ಸಾಮರಸ್ಯವಿಲ್ಲದೆ ಪತಿತ್ವವೂ ಅಪೂರ್ಣ, ಸತಿತ್ವವೂ ಅಪೂರ್ಣ. ಆದುದ ರಿಂದ ಸಾಮರಸ್ಯವನ್ನು ಹೊಂದುವುದಕ್ಕೆ ಅಂಗನು ಲಿಂಗನನ್ನು ಬಯಸು ವಂತೆ, ಲಿಂಗನೂ ಅಂಗನನ್ನು ಹಾರೈಸುವನೆಂಬುದು ವೀರಶೈವರ ತಿಳಿವಳಿಕೆ.[೩] ಬೇರೆ ಮತದವರು ಬಯಸುವ ಸಾನ್ನಿಧ್ಯ, ಸಾಲೋಕ್ಯ, ಸಾರೂಪ್ಯ, ಸಾಯುಜ್ಯ ಮೊದಲಾದ ಪದವಿಗಳಿಗಿಂತ ಅವೆಲ್ಲ ಇಹಲೋಕದಲ್ಲಿ ದೊರೆ ಯುವ ಪದವಿಗಳಲ್ಲವಾದುದರಿಂದ ಸಾಮರಸ್ಯವೆ ವೀರಶೈವರ ಧ್ಯೇಯ

೧. ಕೈವಲ್ಯದರ್ಪಣ: ಪುಟ ೮೧.

೨. ಬಸವಣ್ಣನವರ ವಚನಗಳಲ್ಲಿ ಸತಿ ಪತಿ ಭಾವದ ವಚನಗಳು ಬಹಳ ದೊರೆಯು ತ್ತಿವೆ. ಉದಾಹರಣೆಗಾಗಿ: ಭಕ್ತನ ಶರಣಸ್ಥಲದ ವಚನಗಳನ್ನು ನೋಡಬಹುದು.

೩. ಇದನ್ನೇ ಶಿವಕಾರುಣ್ಯವೆಂದೂ ಕೆಲವರು, ಗುರುಕಾರುಣ್ಯವೆಂದು ಕೆಲವರು ನಿರ್ದೇಶಿಸುತ್ತಾರೆ.

ವಾಗಿದೆ. ಮೈಲಾರದ ಬಸವಲಿಂಗ ಶರಣರು ಈ ವಿಷಯವನ್ನು ಬಹು ಕುಶಲತೆಯಿಂದ ಮನದಟ್ಟುವಂತೆ ಷಟ್‌ಸ್ಥಳ ಸಿದ್ಧಾಂತದಲ್ಲಿ ಹೇಳಿದ್ದಾರೆ.[೧]

ಭಕ್ತಿ ಮಾರ್ಗವು ಉಳಿದ ಮಾರ್ಗಗಳಿಗಿಂತ ಸುಲಭವಾದುದೆಂದು ಹೇಳುವದುಂಟು. 'ಅನ್ಯಸ್ಮಾತ್ ಸೌಲಭ್ಯಂ ಭಕ್ತೌ' ಎಂದು ಭಕ್ತಿ ಸೂತ್ರದಲ್ಲಿ ನಾರದರು ಹೇಳಿರುವರು.[೨] ಆದರೆ ಭಕ್ತಿ ಭಂಡಾರಿಯೆಂದು ಹೆಸರಾದ ಬಸವಣ್ಣನವರು: 'ಭಕ್ತಿಯೆಂಬುದ ಮಾಡಬಾರದು. ಕರಗಸದಂತೆ ಹೋಗುತ್ತ ಕೊಯ್ವುದು, ಬರುತ್ತ ಕೊಯ್ವುದು. ಘಟಸರ್ಪನಲ್ಲಿ ಕೈ ದುಡಿಕಿದರೆ ಹಿಡಿವುದ ಮಾಣ್ಬುದೇ ! "[೩] ಎಂದು ಭಕ್ತಿಯ ಘೋರ ಸ್ವರೂಪವನ್ನು ಪ್ರಕಟಿಸಿರುವರು. ಭಕ್ತಿಯು ಭಾವಪ್ರಧಾನವಾದುದರಿಂದ ವಿವೇಕಕ್ಕೆ ಇಂಬುಗೊಟ್ಟಷ್ಟು ಭಕ್ತಿ ಮಾರ್ಗವು ದುಸ್ತರವಾಗುವುದೆಂದು ತೋರುತ್ತಿದೆ.

ವೀರಶೈವರದು ಅನುಭವ ಮಾರ್ಗ. ಅನುಭವಕ್ಕೆ ಭಕ್ತಿ ಮುಖ್ಯವಾದುದರಿಂದ ವೀರಶೈವದಲ್ಲಿ ಭಕ್ತಿಗೆ ಸ್ಥಾನವಿದೆ, ಉನ್ನತವಾದ ಸ್ಥಾನವೇ ಇದೆ. ಆದರೆ ಭಕ್ತಿಯೊಂದಕ್ಕೇ ಸ್ಥಾನವಿರದೆ ಜ್ಞಾನ-ಕ್ರಿಯಾ-ಯೋಗಗಳಿಗೂ ವೀರಶೈವದಲ್ಲಿ ತಕ್ಕ ಎಡೆಇದೆ. ಭಕ್ತಿಯು ಪ್ರೇಮದ ಒಂದು ಸ್ವರೂಪವಾದುದರಿಂದ ಅದು ಭಕ್ತನಲ್ಲಿ ಸಹಜವಾಗಿಯೆ ಉದ್ಭವಿಸಬಹುದು. ಆದರೆ ಜ್ಞಾನದ ಸಹಾಯದಿಂದ ಅದನ್ನು ಸರಿಯಾದ ದಾರಿಯಲ್ಲಿ ಬೆಳೆಸದೆ ಹೋದರೆ, ಅದು ಅಡ್ಡದಾರಿ ಬೀಳಬಹುದು. ಘಾತಕವೂ ಆಗಬಹುದು. ಭಕ್ತಿಯು ಮೇಲ್ಮಟ್ಟದಲ್ಲಿದ್ದಾಗ ಅದು ಪ್ರೇಮಸ್ವರೂಪವೆಂದೂ ಅದರಲ್ಲಿ ದ್ವೇಷಾದಿಗಳಿಗೆ ಎಡೆಯಿಲ್ಲವೆಂದೂ ಹೇಳಬಹುದಾದರೂ ಅದು ಕೀಳ್ಮಟ್ಟದಲ್ಲಿದ್ದಾಗ ದುರಭಿಮಾನ, ಅಸಹಿಷ್ಣುತೆ ಮುಂತಾದುವುಗಳಿಗೆ ಎಡೆಗೊಡುವ ಸಂಭವವು ಹೆಚ್ಚಾಗಿರುತ್ತದೆ. ಜಾತ್ಯಂಧತೆಯು ಈ ಕೀಳ್ಮಟ್ಟದ ಭಕ್ತಿಯ ಪರಿಣಾಮವೆಂದೇ ಹೇಳಬಹುದು. ಗೌಣೀ ಭಕ್ತಿಯಲ್ಲಿ ನಿಷ್ಠೆಯೆ ಮುಖ್ಯವಾದುದರಿಂದ ಈ ಅವಸ್ಥೆಯಲ್ಲಿದ್ದ ಭಕ್ತನು ತನ್ನ ಭಕ್ತಿಗೆ ವಿಷಯವಾದುದನ್ನು ಪ್ರೀತಿಸುವ ಸಂದರ್ಭದಲ್ಲಿ ಇತರ ವಿಷಯಗಳನ್ನು ಕಡೆಗಣಿಸುವುದೂ

೧. ಷ. ಸಿ. ವೀರಶೈವ ಸಿದ್ಧಾಂತ: ಧರ್ಮಾಚಾರ ಪ್ರಕರಣ, ಪದ್ಯ ೨೮ (ಪುಟ ೪೦.)

೨. ಭಕ್ತಿ ಸೂತ್ರಗಳು: ೫೮.

೩ ವಚನಗಳು: ಭಕ್ತ ಜ್ಞಾನ ಸ್ಥಲ: ೯೮.

ದ್ವೇಷಿಸುವುದೂ ಸುಲಭಸಾಧ್ಯವಿದೆ. ಅಜ್ಞಾನದದಸೆಯಲ್ಲಿದ್ದವರಿಗಂತೂ ಈ ಸ್ಥಿತಿ ಸಹಜವೇ ಆಗಿದೆ. ಆದುದರಿಂದ ಮನುಷ್ಯನ ಶೀಲಸ್ವಭಾವಗಳು ಪರಿಪಕ್ವ ದೆಸೆಯನ್ನೈದಬೇಕಾದರೆ ಭಕ್ತಿ-ಜ್ಞಾನ-ಯೋಗಗಳ ಸಮನ್ವಯವು ಆವಶ್ಯಕ. ಹಕ್ಕಿ ಸರಿಯಾಗಿ ಹಾರುವುದಕ್ಕೆ ಎರಡು ರೆಕ್ಕೆಗಳೂ ತೂಕ ಹಿಡಿಯುವುದಕ್ಕೆ ಪುಚ್ಛ (ಬಾಲ)ವೂ ಬೇಕಾಗುವಂತೆ ಭಕ್ತನಿಗೆ ಭಕ್ತಿ-ಜ್ಞಾನಗಳು ಎರಡು ರೆಕ್ಕೆಗಳಾಗಿಯೂ ಯೋಗವು ಚುಕ್ಕಾಣಿಯಾಗಿಯೂ ಪರಿಣಮಿಸಬೇಕಾಗುತ್ತದೆಂದು ಸ್ವಾಮಿ ವಿವೇಕಾನಂದರು ಅಭಿಪ್ರಾಯಪಡುತ್ತಾರೆ.[೧] ಈ ತತ್ತ್ವಕ್ಕನುಸಾರವಾಗಿ ವೀರಶೈವರಲ್ಲಿ ಭಕ್ತಿ-ಜ್ಞಾನ ಹಾಗೂ ಯೋಗ ಇವುಗಳ ಸರಸ ಸಮನ್ವಯವನ್ನೂ ಕಾಣಬಹುದು. ಇದೇ ರೀತಿ ಕರ್ಮದ ವಿಚಾರ. ಭಕ್ತಿಗಾಗಲಿ ಜ್ಞಾನಕ್ಕಾಗಲಿ ನಿಷ್ಕಾಮ ಕರ್ಮವು ಪೂರಕವೆ ಹೊರತು ಅನ್ಯಥಾ ಅಲ್ಲವೆಂಬುದು ವೀರಶೈವರ ತಿಳಿವಳಿಕೆ. ಇದೂ ಅಲ್ಲದೆ ಜ್ಞಾನಕ್ರಿಯೆಗಳೆರಡೂ ಶಿವನಲ್ಲಿ ಸಮವೇತವಾದ ಶಕ್ತಿಯ ತೋರಿಕೆಗಳಾದುದರಿಂದ ಅವುಗಳಿಗೆ ವಿರೋಧವಿರಲಾರದೆಂದೂ ಜ್ಞಾನವು ಪರಿಪೂರ್ಣವಾಗುವುದು ಕ್ರಿಯೆಯಲ್ಲಿಯೆ ಎಂಬುದೂ ಅವರ ನಂಬುಗೆ.[೨]

ಭಕ್ತಿ-ಜ್ಞಾನ-ಕರ್ಮಗಳೂ ಯೋಗವೆಂದೆನಿಸಿಕೊಳ್ಳುವುವಾದರೂ ಬರಿಯ ಯೋಗವೆಂದಾಗ ಅಷ್ಟಾಂಗಯೋಗವೆಂದೇ ಅರ್ಥ. ಈ ಯೋಗದಲ್ಲಿಯೂ ಹಲವು ಭೇದಗಳು ಇರುವುವಾದರೂ ಅವೆಲ್ಲವನ್ನೂ ಹಠಯೋಗ ಮತ್ತು ರಾಜಯೋಗ ಎಂದು ಎರಡು ಮುಖ್ಯ ವಿಭಾಗಗಳನ್ನಾಗಿ ಮಾಡುತ್ತಾರೆ. ನಡುವಿನ (ಅವಾಂತರ) ಭೇದಗಳಾದ ಲಯ, ಧ್ಯಾನ, ಮಂತ್ರ, ತಾರಕ ಮೊದಲಾದುವು—ತಿಳಿದೋ ತಿಳಿಯದೆಯೋ—ಹಠಯೋಗದಲ್ಲಿ ಉಗಮಹೊಂದಿ ರಾಜಯೋಗದಲ್ಲಿ ಕೊನೆಗಾಣುತ್ತವೆ. ರಾಜಯೋಗವು ಆರಂಭವಾಗುವುದು ಹಠಯೋಗವು ಮುಗಿಯುವಲ್ಲಿ. ತತ್ತ್ವ-ವಿಧಾನಗಳು ಹೀಗಿದ್ದರೂ ಹಠಯೋಗದ ನೆರವಿಲ್ಲದೆ ರಾಜಯೋಗವನ್ನು ಸಾಧಿಸಬಹುದೆಂಬುದು ಹಲವು ಯೋಗಿಗಳ ಅನುಭವ. ಅಂತಹರು ಸ್ವಾಭಾವಿಕವಾಗಿ

---

೧. ಭಕ್ತಿಯೋಗದಲ್ಲಿ ಆರಂಭದ ಪ್ರಕರಣವನ್ನು ನೋಡಿರಿ.

೨. ಚೆನ್ನಬಸವಣ್ಣನವರು : "ಕ್ರಿಯೆಯೇ ಜ್ಞಾನವು. ಜ್ಞಾನವೇ ಕ್ರಿಯೆಯು. ಜ್ಞಾನವೆಂದರೆ ತಿಳಿಯುವುದು. ಕ್ರಿಯೆಯೆಂದರೆ ತಿಳಿದಂತೆ ಮಾಡುವುದು. ಪರಸ್ತ್ರೀ ಭೋಗಿಸಬಾರದೆಂಬುದೇ ಜ್ಞಾನ: ಅದರಂತೆ ಆಚರಿಸುವುದೇ ಕ್ರಿಯೆ. ಅಂತು ಆಚರಿಸದಿದ್ದರೆ ಅಜ್ಞಾನ ನೋಡಾ ಕೂಡಲ ಚೆನ್ನಸಂಗಮದೇವಾ." ಎಂದಿದ್ದಾರೆ.

ಹುಟ್ಟಾ ಯೋಗಿಗಳಾಗಿರುತ್ತಾರೆನ್ನಬಹುದು. ಒಟ್ಟಿನಲ್ಲಿ ಹೇಳಬೇಕಾದರೆ ರಾಜಯೋಗವೆ ಯೋಗದ ಪರಿಪೂರ್ಣಾವಸ್ಥೆಯೆಂದು ಬಲ್ಲವರು ಒಪ್ಪಿಕೊಂಡಿದ್ದಾರೆ.

ಇನ್ನು ವೀರಶೈವರು ಲಿಂಗಾನುಸಂಧಾನವನ್ನೇ ಮುಖ್ಯವಾಗಿಟ್ಟುಕೊಂಡಿರುವುದರಿಂದ ಅದಕ್ಕನುಸಾರವಾಗಿ ರಾಜಯೋಗವನ್ನೇ ಮಾರ್ಪಡಿಸಿ ಶಿವಯೋಗವನ್ನಾಗಿ ಮಾಡಿಕೊಂಡಿದ್ದಾರೆ. ಲಿಂಗಪೂಜೆಯು ಶಿವಯೋಗದ ಮುಖ್ಯ ಅಂಗವಾಗಿರುವುದರಿಂದ ಇಷ್ಟಲಿಂಗವಿಲ್ಲದೆ ಶಿವಯೋಗವು ಸಾಧಿಸಲರಿಯದು. "ಇಷ್ಟಲಿಂಗವ ದೃಷ್ಟಿಯಿಂದೆ ಗ್ರಹಿಸಿ, ಪ್ರಾಣಲಿಂಗವ ಮನೋಜ್ಞಾನದಿಂದೆ ಗ್ರಹಿಸಿ, ತೃಪ್ತಿಲಿಂಗವ ಭಾವಜ್ಞಾನದಿಂದೆ ಗ್ರಹಿಸಿ ಈ ಲಿಂಗತ್ರಯುವಿಡಿದು ಆಚರಿಸಿ, ಲಿಂಗದೊಡನೆ ಕೂಡಿ ಲಿಂಗವೇ ತಾನು ತಾನಾಗಿ ವಿರಾಜಿಸುತ್ತಿರ್ಪುದೀಗ ಶಿವಯೋಗ ನೋಡಾ" ಎಂದು ಹೇಳಿದ ತೋಂಟದ ಸಿದ್ಧಲಿಂಗ ಯತಿಗಳ ವಚನವು ಈ ತತ್ತ್ವವನ್ನು ಚೆನ್ನಾಗಿ ಸಾರುತ್ತಿದೆ.[೧] ಬಸವಲಿಂಗ ಶರಣರೂ ಬರಿಯ ಅಷ್ಟಾಂಗಯೋಗವನ್ನು ಅಲ್ಲಗಳೆದು ಶಿವಯೋಗದ ಮಹತ್ತ್ವವನ್ನು ಸ್ಥಾಪಿಸಿದ್ದಾರೆ.[೨] ನಿಜಗುಣಶಿವಯೋಗಿಗಳೂ, ಸರ್ಪಭೂಷಣ ಶಿವಯೋಗಿಗಳೂ ಶಿವಯೋಗವನ್ನು ಯೋಗದ ಕೊನೆಯ ಮೆಟ್ಟಲೆಂದು ತಂತಮ್ಮ ಗ್ರಂಥಗಳ ಯೋಗ ಪ್ರತಿಪಾದನ ಸ್ಥಲದ ಕೊನೆಯಲ್ಲಿ ಹೇಳಿರುವುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಹೀಗೆ ಭಕ್ತಿ, ಜ್ಞಾನ, ಕರ್ಮಯೋಗಗಳ ಸುಂದರ ಸಮನ್ವಯವನ್ನು ವೀರಶೈವದಲ್ಲಿ ಕಾಣಬಹುದು.

೫

ಇದು ವರೆಗೆ ಹೇಳಿದ ವಿಚಾರಗಳ ಹಿನ್ನೆಲೆಯನ್ನಿಟ್ಟುಕೊಂಡು ಮೈಲಾರದ ಬಸವಲಿಂಗ ಶರಣರ ಕೃತಿಗಳನ್ನು ಓದಿದರೆ ಅವುಗಳ ಮಹತ್ತ್ವವೂ ವೈಶಿಷ್ಟ್ಯವೂ ಚನ್ನಾಗಿ ಮನದಟ್ಟಾಗುವುದರಲ್ಲಿ ಸಂದೇಹವಿಲ್ಲ. ವೀರಶೈವದ ಶುದ್ಧ ನಡೆ-ನುಡಿ, ಗೊತ್ತು-ಗುರಿಗಳ ಬಗೆಗೆ ಸರಿಯಾದ ತಿಳಿ

೧. ರಾ. ಬ. ಹಳಕಟ್ಟಿಯವರಿಂದ ಸಂಪಾದಿತವಾದ ವಚನ ಶಾಸ್ತ್ರಸಾರ ಭಾಗ ೧, ಉತ್ತರಾರ್ಧ: ಪುಟ. ೧೩೪.

೨. ಷ. ನಿ. ವೀರಶೈವ ಸಿದ್ಧಾಂತ: ಧರ್ಮಾಚಾರ ಪ್ರಕರಣ, ಪದ್ಯ: ೩೨ ರಿಂದ ಮುಂದೆ ಹಾಗು ಗುರುಕರುಣ ತ್ರಿವಿಧಿ: ೯೩ ರಿಂದ ೧೦೬ ಇತ್ಯಾದಿ.

ವಳಿಕೆಯನ್ನು ಕೊಡುವ ಗ್ರಂಥಗಳು ಕನ್ನಡದಲ್ಲಿ ವಿರಳವಾಗಿರುವುದರಿಂದ ಈ ಕೃತಿಗಳಿಗೆ ವೀರಶೈವ ಧಾರ್ಮಿಕ ಸಾಹಿತ್ಯದಲ್ಲಿ ಒಳ್ಳೆಯ, ಗಣ್ಯವಾದ ಸ್ಥಾನವಿದೆಯೆನ್ನಬಹುದು.

ಷಟ್‌ಸ್ಥಲ ನಿರಾಭಾರ ವೀರಶೈವ ಸಿದ್ಧಾಂತ, ಗುರುಕರುಣ ತ್ರಿವಿಧಿ ಹಾಗೂ ಶಿವಾನುಭವ ದರ್ಪಣ ಈ ಮೂರರಲ್ಲಿಯೂ ವಿವೇಚಿತವಾದ ವಿಷಯುಗಳು ಹೆಚ್ಚು ಕಡಿಮೆ ಒಂದೇ ಆಗಿವೆ. ಆದರ ಮೊದಲಿನ ಕೃತಿಯು ವಾರ್ಧಕ ಷಟ್ಪದಿಯಲ್ಲಿಯೂ ಎರಡನೆಯದು ತ್ರಿಪದಿ ಛಂದಸ್ಸಿನಲ್ಲಿಯೂ, ಮೂರನೆಯದು ವಿಧವಿಧದ ರಾಗಗಳಲ್ಲಿ ಹಾಡುಗಬ್ಬವಾಗಿಯೂ ರಚಿತ ವಾಗಿವೆ. ಭಾಷೆಯು ಆಯಾ ಛಂದಸ್ಸಿಗೆ ತಕ್ಕಂತೆ ಮೊದಲನೆಯದರಲ್ಲಿ ಪ್ರೌಢವಾಗಿಯೂ, ಎರಡನೆಯದರಲ್ಲಿ ಅದಕ್ಕೂ ಸುಲಭವಾಗಿಯೂ, ಮೂರನೆಯದರಲ್ಲಿ ಇನ್ನೂ ಸರಳವಾಗಿಯೂ ಬಳಸಲಾಗಿದೆ. ಕೊನೆಯ ಕೃತಿಯಾದ ಲಿಂಗಪೂಜಾವಿಧಾನದಲ್ಲಿ ಕಂದದ ಛಂದಸ್ಸು ಬಳಸಲ್ಪಟ್ಟಿ ದ್ದರೂ, ಛಂದಸ್ಸಿನ ದೃಷ್ಟಿಯಿಂದ ಬಂಧವು ಬಹಳ ಶಿಥಿಲವಾಗಿದೆ. 'ಪನ್ನೆ ರಡು ಮಾತ್ರೆ ಮೊದಲೊಳ್ ಸನ್ನುತಮಿಪ್ಪತ್ತು ಮಾತ್ರೆ ಎರಡನೆ ಕಡೆಯೊಳ್' ಎಂಬ ಲಕ್ಷಣವನ್ನು ಮಾತ್ರ ಗ್ರಹಿಸಿದಂತೆ ಕಂಡು ಬರುತ್ತದೆ. ಇನ್ನಿತರ ಕಂದ ಲಕ್ಷಣಗಳಾಗಲಿ, ಗಣವಿಭಾಗವಾಗಲಿ, ಕಂದಾರ್ಧದ ಕೊನೆಯ ಅಕ್ಷರ ಲಘುವಾಗಿದ್ದರೂ ಗುರುವೆಂದು ಗ್ರಹಿಸಬೇಕೆಂಬ ನಿಯಮವಾಗಲಿ ಪಾಲಿಸಿದಂತೆ ಕಾಣುವುದಿಲ್ಲ. ಮೇಲಾಗಿ ಮಾತ್ರೆಗಳ ಸಂಖ್ಯೆಯೂ ಅಲ್ಲಲ್ಲಿ ತಪ್ಪುತ್ತದೆ. ಪ್ರತಿಮಾಡಿಕೊಂಡವರ ಹಸ್ತದೋಷಗಳೂ ಉಚ್ಚಾರದೋಷ ಗಳೂ ಬೇಕಾದಷ್ಟು ಸೇರಿಕೊಂಡಿವೆ. ಪಾಠಾಂತರಗಳೂ ವಿಶೇಷವಾಗಿ ಕಂಡುಬರುತ್ತವೆ. ಆದರೆ ಅವುಗಳಲ್ಲಿಯೂ ದೋಷಗಳೆ ಹೆಚ್ಚು ಕಾಣ ಬರುವುದರಿಂದ ಯಾವುವು ಸರಿಯೆಂಬುದನ್ನು ನಿರ್ಧರಿಸುವುದು ಹಲವು ಕಡೆಗೆ ಅಸಾಧ್ಯವೆನಿಸುತ್ತದೆ. ಎಷ್ಟೋ ಕಡೆಗೆ ಇದು ಮೈಲಾರದ ಬಸವ ಲಿಂಗಾರ್ಯರ ಕೃತಿಯಾಗಿರಬಹುದೆ ಎಂಬ ಸಂದೇಹ ಉಂಟಾಗುತ್ತದೆ. ಆದರೂ ಇದರಲ್ಲಿ ಹೇಳಿದ ಲಿಂಗಪೂಜಾವಿಧಾನವು ಹೊಸ ಮಾದರಿಯ ದಾಗಿರುವುದರಿಂಲೂ ಕನ್ನಡದಲ್ಲಿರುವುದರಿಂದಲೂ ಇದನ್ನು ಹೆಚ್ಚು ವ್ಯತ್ಯಾಸ ಮಾಡದೆ ಮುದ್ರಿಸಲಾಗಿದೆ. ಈಗ ಬಳಕೆಯಲ್ಲಿದ್ದ ಹಲವರಿಗೆ ಅರ್ಥ ವಾಗದ, ಎಷ್ಟೋ ಕಡೆಗಳಲ್ಲಿ ವೀರಶೈವಕ್ಕೆ ಒಪ್ಪಿಗೆಯಾದ ಸಂಸ್ಕೃತ ಪೂಜಾವಿಧಾನಕ್ಕಿಂತಲೂ ಇದು ಹೆಚ್ಚು ಅನುಕೂಲವೂ ಸಮ್ಮತವೂ ಆಗಬಹುದೆಂದು ಎಣಿಸಲಾಗಿದೆ.

೬

ಕವಿಯು ಶೈಲಿ ವಿಷಯಾನುಗುಣವಾಗಿ ಸಮರ್ಪಕವಾಗಿದೆ ಎನ್ನ ಬಹುದು. ಶಬ್ದಸಾಮಗ್ರಿ ವಿಪುಲವಾಗಿರದಿದ್ದರೂ ಇದ್ದಷ್ಟಕ್ಕೆ ಅದರ ಮೇಲಿನ ಕವಿಯ ಒಡಿತ ಸರಿಯಾಗಿಯೆ ಇದೆಯೆನ್ನಬಹುದು. ಕವಿಗೆ ಶ್ಲೇಷೆಯ ಮೇಲೆ ಪ್ರೀತಿ ಇದ್ದಂತೆ ತೋರುತ್ತದೆ. ಅದರ ಮೂಲಕವಾಗಿ ಕೆಲಕಡೆಗೆ ತಿಳಿಹಾಸ್ಯವೂ ಸಾಧ್ಯವಾಗಿದೆ.[೧] ಓಗೆಂಯೆ ಊರುಗಳ ಹೆಸರು ಗಳಲ್ಲಿ ಹಾಗು ಪಲ್ಲೆ ಕಾಯಿಗಳ ಹೆಸರುಗಳಲ್ಲಿ ದ್ವಂದ್ವಾರ್ಥವಿಟ್ಟಿರುವುದು ಕವಿಯ ಶ್ಲೇಷ ಪ್ರೀತಿಗೆ ಉದಾಹರಣೆಯೆನ್ನಬಹುದು. ಹಾಡುಗಬ್ಬವಾದ ಶಿವಾನುಭವದರ್ಪಣದಲ್ಲಿ ಕವಿ ಬಳಸಿದ ಶೈಲಿ ನಿಜಗುಣಶಿವಯೋಗಿ ಗಳಂತೆ ಪಾಂಡಿತ್ಯ ಪ್ರೇರಿತವಾದ ಪ್ರೌಢಶೈಲಿಯಾಗಲಿ ಸರ್ಪಭೂಷಣ ಶಿವಯೋಗಿಗಳಂತಹ ಸವಿ ಸೊಬಗಿನ ಶೈಲಿಯಾಗಲಿ ಅಲ್ಲವಾದರೂ ಭಾವ ಗರ್ಭಿತವಾಗಿದೆ, ಇಂಪಾಗಿದೆ. ಒಟ್ಟಿನಲ್ಲಿ ಹೇಳಬೇಕಾದರೆ ಬಸವಲಿಂಗ ಶರಣರು ಧಾರ್ಮಿಕದಂತಹ ನೀರಸವಾದ ವಿಷಯವನ್ನು, ಅದರಲ್ಲಿಯೂ ಬರಿಯ ಆಚಾರದ ವಿಷಯಗಳನ್ನು ಸರಸವಾಗಿ ಓದುಗರ ಬಗೆವೊಗುವ ರೀತಿಯಲ್ಲಿಯೇ ವಿವೇಚಿಸಿದ್ದಾರೆ. ಇದರ ಕೃತಿಗಳಲ್ಲಿ ವಚನಗಳ-ಅದ ರಲ್ಲಿಯೂ ಬಸವಣ್ಣನವರ ವಚನಗಳ-ಮಾರ್ಧನಿ ಬಹಳ ಕಡೆಗೆ ಕೇಳು ವುದು ಒಂದು ವಿಶೇಷವಾಗಿದೆ.

ಮುದ್ರಣದ ದೋಷಗಳಿಲ್ಲದಂತೆ ಈ ಗ್ರಂಥವನ್ನು ಪ್ರಕಟಿಸಬೇಕೆಂಬ ನಮ್ಮ ಗುರಿ ಎಷ್ಟೋ ಕಡೆಗಳಲ್ಲಿ ಸಾಧಿಸದೆ ಹೋದುದಕ್ಕಾಗಿ ನಾವು ವಿಷಾ ದಿಸುತ್ತೇವೆ. ತಪ್ಪಿಲ್ಲದ ಮುದ್ರಣ ಕನ್ನಡದಲ್ಲಿ--ಅದೇಕೆ ಭರತ ಖಂಡ ದಲ್ಲಿಯೆ--ಪ್ರಚಾರಗೊಳ್ಳ ಬೇಕಾದರೆ ಇನ್ನೂ ಹಲಕಾಲ ಸಲ್ಲಬೇಕೆಂದು ತೋರುತ್ತಿದೆ. ಹೀಗೆಂದು ಸದ್ಯಕ್ಕೆ ಸಮಾಧಾನ ಹಚ್ಚಿಕೊಳ್ಳುವ ಗ್ರಂಥವು ಓದುಗರ ಪ್ರೀತಿಗೆ ಪಾತ್ರವಾಗಿ ಹೊಸ ಸಂಸ್ಕರಣವನ್ನು ಹೊರಡಿಸುವ ಸುಯೋಗ ದೊರೆತರೆ ಮುದ್ರಣದ ದೋಷಗಳನ್ನು ಸರಿಪಡಿಸುವ ಸಾಹಸ ಮಾಡಬಹುದಾಗಿದೆ. ಪುನಃ ಸಂಸ್ಕರಣ ಶೀಘ್ರವೇ ಆಗಬಹುದೆಂಬ ಭರ ವಸೆಯೂ ಪ್ರಕಟನಕಾರರಿಗಿದೆ. ಹಿಂದೆ 'ಷ. ಸಿ. ವೀರಶೈವ ಸಿದ್ಧಾಂತದ' ಮುದ್ರಣ ಎರಡಾವರ್ತಿ ಮೈಸೂರ ಪ್ರಾಂತದಲ್ಲಿ ಆದುದೂ, ರಾ. ಬ. ಹಳ ಕಟ್ಟಿಯವರಿಂದ 'ಶಿವಾನುಭವ ದರ್ಪಣವು' ಎರಡು ಸಾರೆ ಮುದ್ರಿತ

೧. ಉದಾ : ಷ. ಸಿ. ವೀರಶೈವ ಸಿದ್ಧಾಂತ, ಧರ್ಮಾಚಾರ ಪ್ರಕರಣ, ಪದ್ಯ ೩೩.

ವಾದುದೂ ಈ ಭರವಸೆಗೆ ಆಧಾರವಾಗಿದೆ. ಹಿಂದಣ ಈ ಮುದ್ರಿತ ಪ್ರತಿಗಳಿಂದಲೂ ಶ್ರೀ ಕೋರಿ ಚನ್ನಮಲ್ಲಪ್ಪನವರು, ಶಿರಾಳಕೊಪ್ಪ ಇವರಿಂದ ಪ್ರಕಟವಾದ ' ಗುರುಕರುಣ ತ್ರಿವಿಧಿ ', ' ಲಿಂಗ ಪೂಜಾ ವಿಧಾನ 'ದ ಪ್ರತಿಗಳಿಂದಲೂ ನಮಗೆ ಬಹಳ ಉಪಕಾರವಾಗಿರುವುದರಿಂದ ಅದನ್ನಿಲ್ಲಿ ನೆನೆಯದಿರಲಾರೆವು. ಇವಲ್ಲದೆ ನಮಗೆ ಬೇರೆ ಬೇರೆ ಕಡೆಗಳಿಂದ ದೊರೆತ ಕೈಬರಹದ ಪ್ರತಿಗಳ ನೆರವೂ ಬಹಳವಾಗಿದೆ. ಆ ಪ್ರತಿಗಳನ್ನು ದೊರಕಿಸಿಕೊಟ್ಟ ಮಹನೀಯರಿಗೆಲ್ಲರಿಗೂ ನಮ್ಮ ಕೃತಜ್ಞತೆಯನ್ನು ಸಲ್ಲಿಸುತ್ತೇವೆ. ಶಿವಾನುಭವ ದರ್ಪಣದ ಮುದ್ರಿತ ಪ್ರತಿಗಳಲ್ಲಿಲ್ಲದ ೧೨ ಹೊಸ ಪದಗಳು ಈ ಸಂಸ್ಕರಣದಲ್ಲಿ ಹೆಚ್ಚಾಗಿವೆ.

ಹಸ್ತ ಪ್ರತಿಗಳನ್ನು ಕೂಡಿಸುವಲ್ಲಿ, ಅಚ್ಚಿಗೆ ತಕ್ಕ ಪ್ರತಿಯನ್ನು ಸಿದ್ಧಪಡಿಸುವಲ್ಲಿ, ಅಚ್ಚಿನ ಕರಡುಗಳನ್ನು ತಿದ್ದುವಲ್ಲಿ, ಅಲ್ಪಕಾಲದಲ್ಲಿಯೆ ಪ್ರಕಟವಾಗಬೇಕಾದ ಪ್ರಸಕ್ತಿ ಬಂದುದರಿಂದ ಎರಡು ಮುದ್ರಣಾಲಯಗಳಿಗೆ ಸಹಾಯ ಸಲಕರಣೆಗಳನ್ನು ಒದಗಿಸುವಲ್ಲಿ, ಕೊನೆಗೆ ಕೃತಿಕರ್ತರ ಜೀವನದ ಬಗೆಗೆ ಆದಷ್ಟು ದಿಟವಾದ ಸಂಗತಿಗಳನ್ನು ಅವರ ಪ್ರಾಂತದಲ್ಲೆಲ್ಲ ಓಡಾಡಿ ಸಂಗ್ರಹಿಸುವಲ್ಲಿ ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿಯ ಸಂಸ್ಥೆಯ ಸಾಹಿತ್ಯ ಸಮಿತಿಯ ಪ್ರಚಾರಕರಾದ ಮಲ್ಲಾಬಾದಿ ವೀರಭದ್ರಪ್ಪನವರ ಸಹಾಯ ಬಹಳವಾಗಿದೆ. ಅವರು ಬರೆದ ಬಸವಲಿಂಗ ಶರಣರ ಜೀವನ ಚರಿತ್ರೆಯನ್ನು ಮುಂದೆ ಮುದ್ರಿಸಲಾಗಿದೆ. ತೋಂಟದಾರ್ಯ ಮುದ್ರಣಾಲಯದ ಅಧಿಕಾರಿಗಳಾದ ಶ್ರೀ ಹರಿಹರ ಶಿವಲಿಂಗಪ್ಪನವರು ಈ ಗ್ರಂಥಕ್ಕೆ ಶಬ್ದ ಕೋಶವನ್ನು ಸಿದ್ಧಪಡಿಸಿಕೊಟ್ಟಿದುದಕ್ಕಾಗಿ ನಾವು ಅವರಿಗೆ ತುಂಬ ಉಪಕೃತರಾಗಿರುವೆವು.

ಮೈಲಾರದ ಬಸವಲಿಂಗ ಶರಣರೂ, ಮುಳಗುಂದ ಮಹಂತ ಶಿವಯೋಗಿಗಳೂ, ಹಾಲವರ್ತಿ ಶ್ರೀ ಚೆನ್ನವೀರ ಶಿವಯೋಗಿಗಳಲ್ಲಿ ಸಹಪಾಠಿಗಳಾಗಿದ್ದರೆಂದೂ ಬಸವಲಿಂಗ ಶರಣರು ಹಿರಿಯರಾಗಿದ್ದುದರಿಂದ ಮಹಂತ ಶಿವಯೋಗಿಗಳಿಗೆ ಪಾಠ ಹೇಳುತ್ತಿದ್ದರೆಂದೂ ಪ್ರತೀತಿಯಿದೆ. ಆದುದರಿಂದ ಈ ಗ್ರಂಥವನ್ನು ಬಾಲಲೀಲಾ ಮಹಂತಶಿವಯೋಗಿಗಳ ಗ್ರಂಥಮಾಲೆಯಲ್ಲಿ ಸೇರಿಸುವುದರಲ್ಲಿ ಒಂದು ಔಚಿತ್ಯವಿದೆ. ಅಥಣಿ ಗಚ್ಚಿನಮಠದ ಲಿಂಗೈಕ್ಯ ಶ್ರೀ ಮುರುಘೇಂದ್ರ ಶಿವಯೋಗಿಗಳು ಮೈಲಾರದ ಬಸವಲಿಂಗ ಶರಣರ ಕೃತಿಗಳನ್ನು ಬಹು ಆದರದಿಂದ ಕಾಣುತ್ತಿದ್ದರಂತೆ. ಆದುದರಿಂದ

ಶ್ರೀ ಶಿವಯೋಗಿಗಳ ಲಿಂಗೈಕ್ಯದ ದಿನವೆ ಈ ಗ್ರಂಥವು ಪ್ರಕಟವಾಗುವುದು ಸಮಯೋಚಿತವೆಂದೇ ಹೇಳಬೇಕು.

ಧಾರವಾಡದ ಮುರುಘಾಮಠದ ಸ್ವಾಮಿಗಳಾದ ಶ್ರೀ. ನಿ. ಪ್ರ. ಸ್ವ. ಮೃತ್ಯುಂಜಯ ಸ್ವಾಮಿಗಳು ಬಾಲಲೀಲಾ ಮಹಂತ ಶಿವಯೋಗಿ ಗ್ರಂಥ ಮಾಲೆಯ ಪ್ರಕಟನೆಯ ಕಾರ್ಯವನ್ನು ಕೈಕೊಂಡು ಇನ್ನೂ ಎರಡು ವರ್ಷಗಳಾಗಿಲ್ಲ. ಇಷ್ಟು ಸ್ವಲ್ಪಾವಧಿಯಲ್ಲಿಯೆ ನಾಲ್ಕು ಉಪಯುಕ್ತ ಪ್ರಕಟನೆಗಳನ್ನು ಯುದ್ಧದಂತಹ ಕಠಿಣ ಪರಿಸ್ಥಿತಿಯಲ್ಲಿಯೆ ಹೊರಡಿಸಿ ಇಡಿಯ ಸಮಾಜಕ್ಕೆ ಘನಸೇವೆ ಸಲ್ಲಿಸಿದ್ದಾರೆ. ಅವರ ಪವಿತ್ರ ಧ್ಯೇಯವು ಶ್ರೀ ಶಿವಯೋಗೀಶ್ವರರ ಕೃಪೆಯಿಂದ ಯಶಸ್ವಿಯಾಗಿ ಈಡೇರುವಲ್ಲಿ ಸಂದೇಹವಿಲ್ಲ.

ಶಿ. ಶಿ. ಬಸವನಾಳ



ಶ್ರೀ ಬಸವಲಿಂಗ ಶರಣರು ವಾಸವಾಗಿದ್ದ ಮನೆಯ ನೋಟ
ಮೈಲಾರ (ಜಿ. ಬಳ್ಳಾರಿ)



# ಮೈಲಾರದ ಶ್ರೀ ಬಸವಲಿಂಗ ಶರಣರ ಜೀವನದ ಬಗ್ಗೆ ಕೆಲವು ಸಂಗತಿಗಳು

## ೧ ಗುರುಗಳು

ಶ್ರೀಮತ್ ಸದಾನಂದ ಜ್ಞಾನ ಪ್ರಕಾಶರು, ಭಕ್ತರಂತಸ್ತಿಮಿರಗಳೆವ ಘನಾಥರು, ಮುಕ್ತಿಮಾರ್ಗವ ತೋರಿ ಮೆರೆವ ಪ್ರಖ್ಯಾತರು, ಮಹಾನುಭಾವ ಪ್ರಕಾಶರು, ವೀರಶೈವ ನಡೆನುಡಿಯೊಂದಾದ ಶಿವಯೋಗ ಬಲ್ಲಿದರಾದ ಲಿಂಗ ಭೋಗೋಪಭೋಗಿಗಳು, ಪರತತ್ತ್ವದಾಚರಣೆಯ ನಿಜ ಮರ್ಮವರಿತು ಮೀರಿದಾಚರಣೆ ಮಾರ್ಗವುಳ್ಳ ವೀರಶೈವವನು ಬೋಧಿಸುವ ಆಚಾರ್ಯರೂ, ಲಿಂಗ ಕಿರಣದೊಬ್ಬುಳಿಯ ಸುಜ್ಞಾನ ಜ್ಯೋತಿ ಸ್ವರೂಪ ಪರಮನಿರಂಜನ ಪ್ರಭು ಷಟ್‌ಸ್ಥಲಾಧೀಶರಾದ ಹಾಲವರ್ತಿ ಶ್ರೀ ಚೆನ್ನವೀರ ಸ್ವಾಮಿಗಳವರು ಗ್ರಂಥಕರ್ತೃಗಳಾದ ಮೈಲಾರದ ಬಸವಲಿಂಗ ಶರಣರ ಗುರುಗಳು.

ಎರಡನೆಯ ಕೈಲಾಸದಂತಿದ್ದ ಹರಪನಹಳ್ಳಿ ಮತ್ತು ಬಾಗಳಿ ದೊರೆ ಸೋಮಶೇಖರನರೇಂದ್ರ, ಅವನರಸಿ ಬಸವಮ್ಮಾಜಿಯ ಸದ್ಭಕ್ತಿಯನ್ನು ಕೈಕೊಳ್ಳುತ್ತಾ ಲಿಂಗಪೂಜಾತಪಸ್ಸಾಮ್ರಾಜ್ಯ ವೈಭವದ ಲೀಲೆಯಲ್ಲಿ ಹರಪನಹಳ್ಳಿ ಸಮೀಪದಲ್ಲಿ ಇರುವ ಗೋಸಾವಿ ಗುಡ್ಡದ ಬದಿಯ ಅರಣ್ಯದಲ್ಲಿ ಹಾಲವರ್ತಿ ಬಳಿ ಇರುವ ವಿರಕ್ತ ಮಠದಲ್ಲಿ ಇರುತ್ತಿದ್ದರು. ಆ ಮಠದ ಸಮೀಪದಲ್ಲಿ ವರತಿಯಂತೆ ಇದ್ದ ಚಿಕ್ಕ ಬಾವಿಯ ನೀರು ಯಾವಾಗಲೂ ನೆಲಸಮವಾಗಿದ್ದು ಹಾಲಿನಂತೆ ಇರುತ್ತಿದ್ದರಿಂದ ಹಾಲವರ್ತಿ ಎಂಬ ಹೆಸರುಂಟಾಯಿತು. ಶಿವಯೋಗ ಬಲ್ಲಿದರಾದ ಚೆನ್ನವೀರ ಸ್ವಾಮಿಗಳು ಭಕ್ತೋದ್ಧಾರಕ್ಕಾಗಿ ಆ ಸ್ಥಳದಿಂದ ಮುಂದಕ್ಕೆ ಹೊರಟು ನಡೆದ ದಾರಿಯನ್ನು ಸತ್‌ಪಥಮಾರ್ಗವೆನಿಸಿ, ಅಡಿ ಇಟ್ಟ ಭೂಮಿಯನ್ನು ಸುಕ್ಷೇತ್ರವೆನಿಸಿ, ಹಾಳುಗುಡಿ ಬೀಳು ಮಂಟಪದಲ್ಲಿ ಒರಗಿ, ಏಳುತಲೆ ಮುಂದೆ ದೇಶಾಂತರವ ಕಡುವಿರಕ್ತಿಯಿಂದ ತಿರುಗಿ ಅದೇ ತಾಲೂಕಿನಲ್ಲಿರುವ ಕಲ್ಲಹಳ್ಳಿಗೆ ದಯಮಾಡಿಸಿದರು. ಪೂಜ್ಯ ಶ್ರೀಗಳಾದ ಶಿವಯೋಗಿಗಳವರ

ಪೂಜ ಯೋಗ ತತ್ತ್ವ ಬೋಧನೆಗಳನ್ನು ಕೇಳಿದ ಆ ಗ್ರಾಮದ ಜನರು ಅಲ್ಲಿಯೇ ಒಂದು ಮಠವನ್ನು ಕಟ್ಟಿಸಿದರು. ನೆರೆಹೊರೆಯ ಗ್ರಾಮದವರು ದರ್ಶನಾಶೀರ್ವಾದಕ್ಕೆ ಪಾತ್ರರಾಗಿ ಧನ್ಯರಾದರು. ಆ ಗ್ರಾಮಸ್ಥರು ವಾಗ್ಗೆ ಹಾಲವರ್ತಿ ಚೆನ್ನವೀರಸ್ವಾಮಿಗಳೆಂದು ಜನರು ಕರೆಯುತ್ತೊಡಗಿದರು. ಅಲ್ಲಿಂದ ಅವರಿಗೆ ಇದೇ ಹೆಸರು ರೂಢ-ನಾಮವಾಯಿತು.

ಕೆಲವು ಕಾಲದನಂತರ ಕಲ್ಲಹಳ್ಳಿ, ಗ್ರಾಮದಿಂದ ಹೊರಟು ಅಲ್ಲಲ್ಲಿ ಸಂಚರಿಸುತ್ತ ಮರಡಿಗಳನ್ನು ದಾಂಟಿ ಬರಬರುತ್ತ ಮಂಜುಳ ರವದಿಂದ ಹರಿಯುತ್ತಿದ್ದ ತುಂಗಭದ್ರಾ ತೀರಕ್ಕೆ ಆಗಮಿಸಿದರು. ಸುತ್ತಲೂ ಪರೀಕ್ಷಿಸಿದರು. ಲೌಕಿಕದ ಗಜಿಬಜಿಗಳು ಪುಗದ ಪ್ರಶಾಂತವಾದ ಪ್ರದೇಶವನ್ನು ಪ್ರವೇಶಿಸಿದ ಮಹದಾನಂದದಲ್ಲಿ ಲಿಂಗಾರ್ಚನೆಗೆ ಕುಳಿತರು. ಸಿರಿವು ಗ್ರಾಮದ ಹರಪಿ ಪುರಾಣಮಠದ ಅಯ್ಯನವರ ಭಕ್ತಿಯು ಸ್ವಾಮಿಗಳನ್ನು ಸ್ವೀಕರಿಸಿ ಅಲ್ಲಿಯೇ ನೆಲಸಿದರು. ಒಡನೆಯೇ ಭಕ್ತಿ-ಮುಕ್ತಿ ಮಂದಿರದಂತಿರುವ ಮಠವು ನಿರ್ಮಾಣವಾಯಿತು. ಶಿವಯೋಗ ಸಾಮ್ರಾಜ್ಯ ವೈಭವದ ಪ್ರಭಾವವು ಸುತ್ತಮುತ್ತಲೂ ಹರಡಿತು. ಇವರು ಮುಂಗನಾಯಕನ ಹಳ್ಳಿಗೆ ಆಗಮಿಸಿದ ಸುದ್ದಿಯು ದಟ್ಟವಾಗಿ ಹಬ್ಬಿತು. ಕಾಯಕಕ್ಕಾಗಿ ತಕ್ಕಡಿ ಹಿಡಿದಿದ್ದರೂ ನಿರಂತರ ನಿಜದೆಚ್ಚರದನುಸಂಧಾನದಲ್ಲಿ ಪರಮಗುರುವನರಸುವ ಹಂಬಲದಲ್ಲಿ ನಿರತರಾಗಿದ್ದ ಬಸವಪ್ಪ ಶೆಟ್ಟರಿಗೂ ಈ ವಾರ್ತೆ ಮುಟ್ಟಿತು. "ಭಾಪು ಭಾಗ್ಯವೆ! ಅರಿವೆ ಕಣ್ದೆರೆದಂತಾಯಿತ್ತು" ಎಂದರು. ಬಾಗೆವಾಡಿಪುರದಿಂದ ಹೊರಹೊಂಟು ಕಪ್ಪಡಿ ಸಂಗಮ ಕ್ಷೇತ್ರಕ್ಕೆ ಬಸವಣ್ಣನವರು ಧಾವಿಸಿ ಬಂದಂತೆ ಮೈಲಾರದಿಂದ ಮುಂಗನಾಯಕನ ಹಳ್ಳಿಗೆ ಬಂದರು.

ಮಂಗಳ ಪ್ರಭಾತ. ಪರಿಮಳದ ಭಾರದಿಂದ ತಂಗಾಳಿ ತೀಡುತಿದೆ. ತಪಸ್ವಿಗಳ ಲಿಂಗಪೂಜೆಗೆ ದನಿಗೊಡುವಂತೆ ತುಂಗಭದ್ರೆಯು ಜುಳುಜುಳು ನಾದದಿಂದ ಹರಿಯುತ್ತಿದ್ದಾಳೆ. ಮಹಾಶಿವಾನುಭಾವ ಭಾನುವು ಉದಯಿಸಿದಂತೆ ಸೂರ್ಯೋದಯವಾಗತೊಡಗಿದೆ.—ಶರಣಸತಿಯ ಮದುವೆಯ ಸಮಾರಂಭ—ಜಂಗಮಮೂರ್ತಿಯ ಪಾದದ ಪ್ರಥಮ ದರ್ಶನ, ಆಹಾ! ಇನ್ನು ಕೇಳಬೇಕೇ ಪರಸ್ಪರ ಒಲುಮೆಯ ಸಂಭಾಷಣೆ. ಭವಮರಣ ಮಾಯಾಪಾಶಕ್ಕೆ ಒಳಗಾದಂತೆ (ಸಂಸಾರಹೇಯ) ಯಾವಾಗಲೂ ನಿನ್ನ ಪಾದ ಸನ್ನಿಧಿಯ ಬಯಸಿ ಮರೆಹೊಕ್ಕು ಬಂದಿರುವೆ ಗುರುವೇ ನೀ ಎನಗೆ

ಕೃಪೆಯಾಗು ಎಂದರು. ಆಗ ಶ್ರೀಗಳು "ಅಪ್ಪಾ, ನೀನು ಅನುಭವಿಯೇ ಇದ್ದೀಯೆ" ಎಂದು ಮುಗುಳುನಗೆಯಿಂದ ಅಪ್ಪಣೆ ಕೊಡಿಸಿದರು. ಅದಕ್ಕೆ "ಸ್ವಾನುಭಾವದ ನೆಲೆಯು ನಾನೇನು ಬಲ್ಲೆನೈ ನೀನೊಳ ಪೊಕ್ಕು ಏನ ನುಡಿಸಿದೊಡದನೆ ಗುಡಿಯಂತೆ, ಗಂಟೆಯಂತೆ ವೀಣೆಯಂತೆ ಜಾಣ ಶ್ರೀ ಗುರುವೆ ನಾ ಮಾಣದಲೆ ನುಡಿವೆ" ಎಂದು ಕುದಿಕುದಿವ ಕರಣಂಗಳಲ್ಲಿ ಬಿನ್ನೈಸಿದರು. ಇದನ್ನು ಕೇಳಿ ಮನ ಮರುಗಿತು. ನಿನ್ನ ಇಷ್ಟಾರ್ಥವೇನು ಕೇಳಿದರು. ಅದಕ್ಕೆ "ಹಲವು ಮಾತೇನು ಗುರುವೇ ನೀನೊಲಿದು ಪಾದವನಿಟ್ಟ ನೆಲವೆ ಸುಕ್ಷೇತ್ರ ಜಲವೆ ಪಾವನ ತೀರ್ಥವಾಗಿದೆ. ಇಲ್ಲಿಯೇ ನೆಲಸಿ ಶಿವಯೋಗವನ್ನು ಬೋಧಿಸಿ ನಮ್ಮನ್ನು ಬದುಕಿಸಬೇಕು" ಎಂದು ಪ್ರಾರ್ಥಿಸಿದರು. ಒಡನೆಯೇ ಬಸವಾ ! ಬಾರೆಂದು ಅನುಗ್ರಹಿಸಿ ಕರೆಯಲು ಬಸವಲಿಂಗವೇ ಆದರು. ಆಗ ಬಸವಪ್ಪ ಶೆಟ್ಟರು ಬಸವಲಿಂಗ ಶರಣರಾದರು. ಮಂಗನಾಯಕನ ಹಳ್ಳಿಯು ಲಿಂಗನಾಯಕನ ಹಳ್ಳಿಯಾಯಿತು. "ಗುರುವೆ ನಿಮ್ಮನುಗ್ರಹದಿಂದ ತತ್ತ್ವದಿರವನರಿದು ನಿತ್ಯ ಸುಖಿಯಾದೆ. ಗುರುಕರೋದ್ಭವನಾದ ಶರಣಗಿನ್ನು ಉಂಟೆ ಪರಿಭವ" ಎಂದು ಲಿಂಗಾಂಗಸಮರಸದ ಸಂಗೀತದಲ್ಲಿ ಮನದ ವೀಣೆಯು ಮಿಡಿಯತೊಡಗಿತು. ಬಸವಲಿಂಗ ಶರಣರ ಕರಮನಭಾವದೊಳು ಪರಂಜ್ಯೋತಿ ರೂಪಾಗಿ, ಮಾನಸ ವಾಚಕ ಕಾಯಕದೊಳು ತಾನೆ ಬೆಳಗಲು ಪ್ರಾರಂಭವಾಯಿತು. ಸುಪ್ರಸನ್ನ ಪ್ರಕಾಶ ಸತ್‌ಕ್ರಿಯಾ ಜ್ಯೋತಿಯಾಗಿ ಸದ್‌ಭಾವ ಪಣಿತೆಯೊಳು ತತ್ತ್ವ ವಿಚಾರ ಸುಸಾರ ಘೃತವನೀಂಟುತ, ಮೀರಿದಾಚರಣೆ ಬತ್ತಿ ಕೊನೆಯೊಳು ಮಹಾಜ್ಞಾನಜ್ಯೋತಿ ಸ್ವರೂಪರಾದ ಚೆನ್ನವೀರ ಸ್ವಾಮಿಗಳು ಲಿಂಗನಾಯಕನ ಹಳ್ಳಿಯಲ್ಲಿ ಕೊನೆಗೊಮ್ಮೆ ನೆಲಸಿದರು.

## ೨. ಗ್ರಂಥಕರ್ತರು

ನಮ್ಮ ಮಹಾಪುರುಷರ ಜೀವನವು ಅನೇಕ ವಿಧವಾದ ಸಾಂಪ್ರದಾಯದ ಕಟ್ಟು ಕಥೆಗಳ ನಿರಾಧಾರವಾದ ಹೊದಿಕೆಯಿಂದ ಮುಸುಕಿಬಿಟ್ಟಿದೆ. ಇತ್ತೀಚೆಗೆ ಐತಿಹಾಸಿಕ ವಿವೇಚನೆಯಿಂದ ಅವರ ನಿಜವಾದ ಚಾರಿತ್ರಿಕ ಮತ್ತು ಆಧ್ಯಾತ್ಮಿಕ ಜೀವನವನ್ನು ಅರಿಯಬೇಕಾದರೆ ಬಹು ಶ್ರಮಪಡಬೇಕಾಗುತ್ತದೆ. ಚಾಲಗಾರನಾದ ಶೋಧಕನು ಆಳವಾದ ಪರಿಶೋಧನೆಯನ್ನು ನಡೆಸಿದರೆ ಸಾಗರದ ತಳಮುಟ್ಟಿ ತೆಗೆದರೆ ಅನರ್ಘ್ಯವಾದ ಮುತ್ತು ರತ್ನಗಳು ಸಿಗುತ್ತವೆ. ಇಲ್ಲವಾದರೆ ಕಪ್ಪೆ, ಚಿಪ್ಪು, ಶಂಖು ಮೊದಲಾದವು

ಗಳು ಕರಗತವಾಗುತ್ತವೆ. ಅದರಂತೆ ಪ್ರಸ್ತುತ ಗ್ರಂಥಕಾರರಾದ ಮೈಲಾರದ ಬಸವಪ್ಪನವರ ವಿಚಾರದಲ್ಲಿ ಇತ್ತೀಚಿಗೆ ನಡೆಯಿಸಿದ ಸಂಶೋಧನೆ ಕಾರ್ಯದಲ್ಲಿ ದೊರೆತ ಅವರ ಜೀವನಕ್ಕೆ ಸಂಬಂಧಪಟ್ಟ ಕೆಲವಂಶಗಳನ್ನು ಮಾತ್ರ ಇಲ್ಲಿ ಬರೆಯುತ್ತೇನೆ. ಮತ್ತೆ ದೊರೆತವುಗಳನ್ನು ಯಥಾವಕಾಶದಲ್ಲಿ ಓದುಗರ ಗಮನಕ್ಕೆ ತರಲು ಅಪೇಕ್ಷೆಪಡುತ್ತೇನೆ.

ಗ್ರಂಥಕರ್ತರು ಬಳ್ಳಾರಿ ಜಿಲ್ಲಾ ಹೂವಿನಹಡಗಲಿ ತಾಲೂಕ ಮೈಲಾರ (ಕ್ಷೇತ್ರ) ಗ್ರಾಮದಲ್ಲಿ ವ್ಯಾಪಾರಮಾಡುವ (ಬಣಜಿಗ) ಕಾಯಕದ ಮನೆತನದಲ್ಲಿ ಜನ್ಮವೆತ್ತಿದರು. ತಾಯಿ-ತಂದೆಗಳ ಹೆಸರು ಗೊತ್ತಾಗಿಲ್ಲ. ಆದರೆ ತಾತ್ವಿಕ ದೃಷ್ಟಿಯಲ್ಲಿ ಗುರುಕರುಣವ ಪಡೆದು ಮಾಂಸ ಶರೀರವಳಿದು ಮಂತ್ರಶರೀರಿಯಾದ ಶರಣನು ಗುರುಸಂಬಂಧವನ್ನಿಟ್ಟುಕೊಳ್ಳುವುದರಿಂದ ತಾಯಿ-ತಂದೆಗಳ ಹೆಸರನ್ನು ಹೇಳದೆ ಗುರುವಿನ ಹೆಸರನ್ನೇ ಹೇಳುವುದು ರೂಢಿಯಾಗಿದೆ. ಬಸವಪ್ಪನವರು ಹಾಲವರ್ತಿ ಚೆನ್ನವೀರ ಸ್ವಾಮಿಗಳವರ ಅನುಗ್ರಹಕ್ಕೆ ಪಾತ್ರರಾಗಿ ಅವರ ಅಂಕಿತದಲ್ಲಿಯೇ ತಮ್ಮ ಕೃತಿಗಳನ್ನು ರಚಿಸಿದರು.

ಮೈಲಾರವು ಅನೇಕ ಕಾಲದಿಂದಲೂ ಕ್ಷೇತ್ರವಾಗಿರುವದು. ಯಾತ್ರಾರ್ಥಿಗಳು ಬಹುಭಾಗದಿಂದ ಬರುತ್ತಿರುವುದರಿಂದ ಅಲ್ಲಿ ಯಾವಾಗಲೂ ವ್ಯಾಪಾರ ಇದ್ದೇ ಇರುತ್ತದೆ. ಮೈಲಾರಲಿಂಗ ದೇವಾಲಯಕ್ಕೆ ಹೋಗುವ ದಾರಿಯ ಎಡಭಾಗಕ್ಕೆ ದೇವಾಲಯಕ್ಕೆ ಸ್ವಲ್ಪ ಹತ್ತಿರದಲ್ಲಿಯೇ ಪೂರ್ವಾಭಿಮುಖವಾಗಿ ಅವರ ಅಂಗಡಿ ಮನೆ ಇದೆ. (ಇದರ ಭಾವ ಚಿತ್ರವನ್ನು ಬೇರೆ ಕಡೆ ಕೊಟ್ಟಿದೆ.) ಈಗ್ಯೂ ಸ್ಮಾರಕದಂತಿರುವ ಅವರ ಮನೆಯನ್ನು ಒಮ್ಮೆ ನೋಡಬೇಕು. ಆಗ್ಗೆ ಅವರ ಜೀವನದ ಅಚ್ಚುಕಟ್ಟುತನದ ಭಾವನೆ ಬರುವುದು. ಅದು ಒಂಬತ್ತು ಅಂಕಣದ ಮನೆ. ಮೊದಲನೆಯ ಮೂರಂಕಣದಲ್ಲಿ ಎಡಗಡೆ ಎರಡಂಕಣ ಅಂಗಡಿ ಇದೆ. ಒಂದಂಕಣ ಓಡಾಡಲು ದಾರಿ. ಇದನ್ನು ದಾಟಿ ಒಳಗೆ ಹೋದರೆ ಎರಡಂಕಣ ನಡುಮನೆ. ಬಲಕ್ಕೆ ಒಂದಂಕಣ ಸರಕಿನ ಕೋಣೆ. ಮೂರನೆಯ ಮೂರಂಕಣದಲ್ಲಿ ಎರಡಂಕಣದ ಸ್ನಾನ, ಅಡಿಗಿ ಮನೆ. ಅದರ ಪಕ್ಕದಲ್ಲಿ—ಸರಕಿನ ಕೋಣೆಯ ಹಿಂದುಗಡೆ—ಲಿಂಗಪೂಜಾ ಕೋಣೆ ಇದೆ. ಪೂಜೆಗೆ ಕುಳಿತರೆ ಹೊರಗಿನ ಶಬ್ದಾದಿಗಳು ಕೇಳುತ್ತಿರಲಿಲ್ಲ ಎಂಬ ವಾಡಿಕೆಯ ಮಾತನ್ನು ಒಪ್ಪಬಹುದು.

ಮೈಲಾರದ ಬಸವಲಿಂಗ ಶರಣರು ಯಾರಲ್ಲಿ ವಿದ್ಯಾಭ್ಯಾಸ ಮಾಡಿದ ರೆಂದು ತಿಳಿಯುವುದಿಲ್ಲ. ಅವರು ಉದ್ದಾಮ ಕನ್ನಡ ಪಂಡಿತರಾಗಿದ್ದರೆಂದೂ ವ್ಯಾಪಾರಕ್ಕೆ ಬಂದವರಿಗೆ ಬೇಕಾದ ಸರಕುಗಳನ್ನು ಯೋಗ್ಯ ಬೆಲೆಗೆ ಸಮಯವಿದ್ದರೆ ಅವರ ಕಷ್ಟಸುಖಗಳನ್ನು ವಿಚಾರಿಸಿ ತಕ್ಕ ನೀತಿ ಧರ್ಮ ಹೇಳಿ ಧೈರ್ಯವನ್ನು ತಂದುಕೊಡುತ್ತಿದ್ದುದರಿಂದ ಜನಾನುರಾಗ ಹೆಚ್ಚಾ ಯಿತು. ಚಿಕ್ಕ ಅಂಗಡಿಯಾದರೂ ವ್ಯಾಪಾರ ಅಧಿಕವಾಗಿ ನಡೆಯತೊಡ ಗಿತು. ಉಳಿದ ವ್ಯಾಪಾರಿಗಳಲ್ಲಿ ಕೆಲವರು ಸಹಿಸದೆ ಏನಾದರೂ ಮಾಡಿ ಬಸವಪ್ಪನವರ ವ್ಯಾಪಾರವನ್ನು ತಗ್ಗಿಸಬೇಕೆಂದು ಹವಣಿಸಿ ಸರ್ಕಾರದ ಉನ್ನತಾಧಿಕಾರಿಗಳು ಬಂದಾಗ್ಗೆ ದೂರಹೇಳಬೇಕೆಂದು ನಿರ್ಧರಿಸಿ ಅವರ ತಪ್ಪನ್ನು ಹುಡುಕಲಾರದೆ ಕೊನೆಗೆ ಬಸವಪ್ಪನವರು ವಿಷ್ಣು ನಿಂದಕರಿದ್ದಾರೆ. ಏನಾದರೂ ಮಾಡಿ ಈ ಗ್ರಾಮವನ್ನು ಬಿಟ್ಟು ಬೇರೆ ಕಡೆ ಕಳಿಸಿಕೊಡ ಬೇಕೆಂದು ಅಧಿಕಾರಿಗಳಿಗೆ ಉಳಿದವರು ತಿಳಿಸಿದರು. ಒಡನೆಯೇ ಬಸವಪ್ಪ ನವರನ್ನು ಕರೆಯಿಸಿ ಬಹು ವಿಧದಿಂದ ವಿಚಾರಿಸಲಾಗಿ ''ನಾನೆಂದಿಗೂ ಅಂಥವನಲ್ಲ'' ಎನ್ನಲು ''ಹಾಗಾದರೆ ನಿಮ್ಮ ಹೇಳಿಕೆಯನ್ನು ಒಂದು ಪದ್ಯ ದಲ್ಲಿ ಬರೆದು ಕೊಡಿರಿ'' ಎಂದರು. ಆಗ ಬಸವಪ್ಪನವರು ಬಹು ಜಾಣ್ಮೆ ಯಿಂದ ಅಧಿಕಾರಿಗಳಾಗಿದ್ದವರ ನಿಷ್ಠೆಯೂ ಕೆಡಬಾರದು. ತನ್ನ ಆಚರ ಣೆಗೂ ಶ್ರದ್ಧೆಗೂ ನಂಬಿಕೆಗೂ ಭಂಗ ಬರಬಾರದೆಂದು ಬಗೆದು ಈ ಕೆಳ ಗಿನ ಪದ್ಯವನ್ನು ರಚಿಸಿದರು.

''ಹರಿಯೆ ಬ್ರಹ್ಮಾಂಡ ಪಿಂಡಾಂಡ ದಶದಿಗ್ ಭರಿತ
ಹರಿಯೆ ತ್ರೈಭುವನ ಅಟ್ಟುಂಬ ಸಕಲ ಜೀವಕ್ಕಾದಿ
ಹರಿಯ ಬಿಟ್ಟರಗಳಿಗೆ ಜೀವಿಸುವರಾರಿಲ್ಲ
ಲೋಕದೊಳಗದು ಸದಾ
ಹರಿ ಭಕ್ತನಹುದು ಹರ ಭಕ್ತನಲ್ಲ ನಾಂ
ನರಸಿಂಹ ಮದುಸೂಧನ ಶಿರಿಯರಸ ವಾ-
ಸರ ಯಂಕಟಾಚಲಾದಿ ಪ್ರಣವ
ಸ್ಮರಣೆಯೊಳಗಿರ್ಪೆಂ ಸದಾ''

ತಕ್ಷಣದಲ್ಲಿ ರಚಿಸಿದ ಈ ಪದ್ಯವನ್ನು ಕೇಳಿ ಆಶ್ಚರ್ಯಭರಿತರಾದರು. ಅಧಿಕಾರಿಗಳು ಆನಂದಹೊಂದಿದರು. ಚಾಡಿಕಾರರು ಹತಾಶರಾದರು. ಬಸವಪ್ಪನವರ ಪಾಂಡಿತ್ಯಕ್ಕೆ ಅಧಿಕಾರಿಗಳು ಮೆಚ್ಚಿ ಗೌರವಿಸಿದರು. ಕುಹ

ಕರು ಇಷ್ಟಕ್ಕೆ ಸುಮ್ಮನಿರದೆ ಇನ್ನೊಂದು ಸಲ ಇದೇ ರೀತಿ ಪೇಚಿಗೆ ಗುರಿ
ಮಾಡಿದರು. ಆಗಲೂ ಸಹ ವ್ಯವಹಾರ ನೀತಿ ಕುಶಲರೂ ಲೌಕಿಕ ಚತುರ
ರಾದ ಬಸವಪ್ಪನವರು ''ಗೋವಿಂದನಾದಿ ಗೋವಿಂದ ನಮ್ಮ ಗೋವಿಂದ
ಲಾದ ಪಾವನ ಪಾಂಡುರಂಗ'' ಎಂಬ ಪ್ರಸಿದ್ಧ ಪದವನ್ನು ರಚಿಸಿ ಧೂರ್ತರ
ಕುಹಕತನವನ್ನು ಹೊರಗೆಡವಿದರು.

ಸಂಸಾರಿಗಳಾದ ಬಸವಪ್ಪನವರು 'ಹೊನ್ನು ಮಾಯೆ, ಹೆಣ್ಣು ಮಾಯೆ,
ಮಣ್ಣು ಮಾಯೆ' ಎನ್ನದೆ ಮನದ ಮುಂದಣ ಆಸೆಯನ್ನು ತೊರೆದು
ಗುರು-ಲಿಂಗ-ಜಂಗಮ ದಾಸೋಹಿಯಾಗಿ ಸಂಸಾರಹೇಯಸ್ಥಲವನ್ನು
ಹೊಂದಿ ಮನೆಗೆ ಐದು ಮೈಲು ದೂರವಿದ್ದರೂ ಮನಕ್ಕೆ ಹತ್ತಿರದಲ್ಲಿಯೇ
ಇದ್ದ ಲಿಂಗನಾಯಕನ ಹಳ್ಳಿಗೆ ಬಂದು ಶ್ರೀ ಚೆನ್ನವೀರ ಸ್ವಾಮಿಗಳಲ್ಲಿಯೇ
ಇರತೊಡಗಿದರು. ಗುರು-ಶಿಷ್ಯರ ಪ್ರಭಾವವು ಅಧಿಕವಾಯಿತು. ಆಗ್ಗೆಯೇ
ಗದಗ ತಾಲೂಕು ಕಲ್ಲು ಮುಳುಗುಂದದ ಬಾಲಲೀಲಾ ಮಹಂತಸ್ವಾಮಿ
ಗಳು, ಬನ್ನಿಮಟ್ಟಿ ಚೆನ್ನಪ್ಪನವರೂ, ಮೈಸೂರು ಪ್ರಾಂತದಿಂದ ಬಂದಿದ್ದ
ಶಿವಬಸವ ಸ್ವಾಮಿಗಳೇ ಮೊದಲಾದ ಅನುಭಾವಿಗಳು ಶಿವಾನುಭವ
ಗೋಷ್ಠಿಯಲ್ಲಿರುತ್ತಿದ್ದರು. ಲಾಂಛನಧಾರಿಗಳಾದ ಹರಗುರುಚರಮೂರ್ತಿ
ಗಳು ಅನೇಕ ಕಡೆಗಳಿಂದ ಬರತೊಡಗಿದರು. ಬಸವಲಿಂಗ ಶರಣರು
ಕಾವಿಲಾಂಛನಧಾರಿಗಳನ್ನು ಕರೆದು ''ತಾವು ವೀರಶೈವ ಶಾಸ್ತ್ರಾಭ್ಯಾಸವನ್ನು
ಎಷ್ಟು ಮಾಡಿದ್ದೀರಿ? ವೇದಾಂತಾಭ್ಯಾಸ ಎಷ್ಟು ಮಾಡಿದ್ದೀರಿ? ಶಿವಾನುವವ
ಶಾಸ್ತ್ರವೆಷ್ಟು ಓದಿದ್ದೀರಿ?'' ಎಂದು ಮುಂತಾಗಿ ಪ್ರಶ್ನೆ ಮಾಡಲು ಅವಕ್ಕೆ
ಅವರು ತಕ್ಕ ಉತ್ತರ ಕೊಟ್ಟರೆ ಸರಿ. ಇಲ್ಲವಾದರೆ ''ಏಕೆ? ಬುದ್ಧಿ ಶಿಷ್ಯರನ್ನು
ಮೋಸಗೊಳಿಸಲು ಏಕೆ ಲಾಂಛನ ಧರಿಸಿದ್ದೀರಿ ? ಭಕ್ತರ ವಿತ್ತಪಹಾರ
ಮಾಡಲು ಏಕೆ ಹೋಗುತ್ತೀರಿ ? ಅವರೇನೋ ಗುರುಗಳು ಬಂದರೆಂದು
ಮುಗ್ಧಭಾವದಿಂದ ಕಾಣಿಕೆ ಕೊಡುತ್ತಾರೆ. ಅದಕ್ಕೆ ಪ್ರತಿಯಾಗಿ ನೀವೇನು
ಕೊಡುವಿರಿ?'' ಎಂದು ಕೇಳಿ ಅವರವರ ಲಾಂಛನ (ಹೊದಿಕೆ) ಗಳನ್ನು ತೆಗೆ
ಸಿಟ್ಟು ಕೆಲವು ತಿಂಗಳ ವರೆಗೆ ಗುರುಚೆನ್ನವೀರೇಶನ ಸೇವೆಯಲ್ಲಿರಿಸಿಕೊಂಡು
ಅವರವರ ಅಂತಸ್ತಿಗೆ ತಕ್ಕಂತೆ ಶಿವಾನುಭವವನ್ನು ಆಚರಣೆಯನ್ನು ಕಲಿಸಿ
ಕೊನೆಗೊಮ್ಮೆ ಪ್ರಶ್ನಿಸಿ ಅದಕ್ಕವರು ಉತ್ತರಕೊಡಲು, 'ಇನ್ನು ನೀವು ಉತ್ತೀರ್ಣ
ರಾದಿರಿ, ಈಗ ನೀವು ಗುರುಗಳಾದಿರಿ ಭಕ್ತೋದ್ಧಾರಕ್ಕೆ ಸಿದ್ಧರಾದಿರಿ ಹೋಗಿ
ಬರ್ರಿ ಬುದ್ಧೀ'' ಎಂದು ನಮಸ್ಕಾರ ಮಾಡಿ ಕಳಿಸಿಕೊಡುತ್ತಿದ್ದರು. ಅಷ್ಟ

ರಿಂದಲೇ ಈ ಪ್ರದೇಶದ ಅನೇಕ ಗ್ರಾಮಗಳಲ್ಲಿ ಶುದ್ಧ ವೀರಶೈವಾಚರಣೆಯು ಇಂದಿಗೂ ಅಚ್ಚಳಿಯದೆ ಉಳಿದಿದೆ. ವೀರಶೈವ ಸಂಸ್ಕೃತಿಗೆ ಅಪಾರವಾದ ಸಂಪತ್ತನ್ನು ಗಳಿಸಿದ ಮೈಲಾರದ ಬಸವಲಿಂಗ ಶರಣರು ಮೈಲಾರದಲ್ಲಿಯೇ ಲಿಂಗೈಕ್ಯರಾದರೆಂದು ತಿಳಿದುಬರುತ್ತದೆ.

## ೩ ಕಾಲ

ನಮಗೆ ದೊರೆತಿರುವ ಕೈಬರಹದ ಪುಸ್ತಕಗಳಲ್ಲಿ ಕವಿಗಳ ಕಾಲದ ಬಗ್ಗೆ ಸರಿಯಾಗಿ ಯಾವ ಸಂಗತಿಯೂ ತಿಳಿದು ಬರುವುದಿಲ್ಲ. ಕೇವಲ ಬಾಹ್ಯ ಪ್ರಮಾಣಗಳಿಂದಲೇ ಸ್ಥೂಲವಾಗಿ ತಿಳಿಯಬೇಕಾಗಿದೆ. ತಾವು ಬರೆದಿರುವ ಚೌಪದದಲ್ಲಿ ಹರಪನಹಳ್ಳಿ ಅರಸು ಸೋಮಶೇಖರ ನರೇಂದ್ರನ ಹೆಸರನ್ನು ಸೂಚಿಸಿದ್ದಾರೆ. ಆ ಅರಸನ ತಂದೆಯಾದ ಮುಮ್ಮಡಿ ಬಸಪ್ಪ ನಾಯಕನು ಉಚ್ಚಂಗಿದುರ್ಗದಧಿದೇವತೆಯಾದ ಉತ್ಸವಾಂಬೆಗೆ ಒಂದು ಘಂಟೆಯನ್ನು ಕಾಣಿಕೆಯನ್ನಾಗಿ ಒಪ್ಪಿಸುವಾಗ್ಗೆ ಅದರ ಮೇಲೆ ಮಿತಿಯನ್ನು ಕೆತ್ತಿಸಿದ್ದಾರೆ. ಅದು "ಸ್ವಸ್ತಿ ಶ್ರೀ ಶಾಲಿವಾಹನ ಶಕೆ ವರ್ಷ ಒಂದು ಸಾವಿರದ ಆರುನೂರು ಮೂವತ್ತು ಸರ್ವಧಾರಿ ನಾಮ ಸಂವತ್ಸರ ಮಾಘ ಶುದ್ಧ ೧೫ ಪೌರ್ಣಿಮೆ ಮಘಾ ನಕ್ಷತ್ರದಲ್ಲಿ * * ಮುಮ್ಮಡಿ ಬಸಪ್ಪನಾಯಕರು ಸಮರ್ಪಿಸಿದ ಘಂಟೆ" ಎಂದು ನವರಂಗದಲ್ಲಿದೆ. ಅಂದರೆ ಈಗ್ಗೆ ೨೩೭ ವರ್ಷಗಳ ಹಿಂದೆ ಎಂದಂತಾಯಿತು. ಅವನ ಮಗ ಸೋಮಶೇಖರನ ಕಾಲಕ್ಕೆ ಸುಮಾರು ೨೫ ವರ್ಷ ಕಳೆದರೂ ಈಗ್ಗೆ ೨೧೨ ವರ್ಷಗಳ ಹಿಂದೆ ಸೋಮಶೇಖರ ನರೇಂದ್ರನ ಸಮಕಾಲಕ್ಕೆ ಹಾಲವರ್ತಿ ಚನ್ನವೀರ ಸ್ವಾಮಿಗಳು ಇದ್ದರೆಂದು ನಿರ್ಧರಿಸಬಹುದು.

ಬಸವಲಿಂಗ ಶರಣರೊಂದಿಗೆ ಕಲ್ಲು ಮುಳಗುಂದದ ಬಾಲಲೀಲಾ ಮಹಂತ ಶಿವಯೋಗಿಗಳು ಸಹಪಾಠಿಗಳಾಗಿಯೂ ಮತ್ತು ಅವರಲ್ಲಿ ಶಾಸ್ತ್ರಾಭ್ಯಾಸ ಮಾಡಿದ್ದರಿಂದಲೂ ಅವರ ಕಾಲವೆಂದರೆ ಕ್ರಿ. ಶ. ೧೮೧೦— ೧೮೩೦. ಅದಕ್ಕಿಂತಲೂ ಹಿಂದೆ ಇದ್ದೇ ಇರಬೇಕು. ಗುರುಗಳಾದ ಚೆನ್ನವೀರ ಸ್ವಾಮಿಗಳಿಗಿಂತಲೂ ವಯದಲ್ಲಿ ಚಿಕ್ಕವರಾಗಿ ಮುಳಗುಂದದ ಶ್ರೀಗಳಿಗಿಂತಲೂ ವಯದಲ್ಲಿ ಹಿರಿಯರಾಗಿರುವುದರಿಂದ ಸುಮಾರು ಹದಿನೆಂಟನೆಯ ಶತಮಾನದ ಕಡೆಯ ಭಾಗವೆಂದರೆ ೧೭೮೦ ರಿಂದ ೧೮೦೦ ಎಂದು ಸಾಮಾನ್ಯವಾಗಿ ಇಟ್ಟುಕೊಳ್ಳಬಹುದು.

## ಉಪಕಾರ ಸ್ಮರಣೆ

ಈ ಪವಿತ್ರ ಕಾರ್ಯಕ್ಕೆ ಆಶೀರ್ವಾದ ಮಾಡಿ ಬೆಂಬಲಕೊಟ್ಟ ಲಿಂಗ ನಾಯಕನಹಳ್ಳಿ ಮಠದ ಈಗಿನ ಮೂರ್ತಿಗಳಾದ ಶ್ರೀ. ಮ. ನಿ. ಪ್ರ. ಚೆನ್ನವೀರ ಸ್ವಾಮಿಗಳವರ ಅಡಿದಾವರೆಗಳಲ್ಲಿ ಕೃತಜ್ಞತೆಯನ್ನು ಸಮರ್ಪಿಸುತ್ತೇನೆ. ಹೊಳಲುಮಠದ ಶ್ರೀ. ಮ. ನಿ. ಪ್ರ. ಮಲ್ಲಿಕಾರ್ಜುನ ಸ್ವಾಮಿಗಳ ಮತ್ತು ಮೊದಲಿನಿಂದಲೂ ವ್ಯಾಳಾರದ ಬಸವಲಿಂಗ ಶರಣರ ಕೃತಿಗಳನ್ನು ಪ್ರಸಾರ ಮಾಡುವ ಕಾರ್ಯದಲ್ಲಿ ನಿರುತ ರಾಗಿದ್ದ ರಾಣೆಬೆನ್ನೂರ ಶ್ರೀಮಾನ್ ಬಸಪ್ಪಣ್ಣ ಮಹಾಲಿಂಗಪ್ಪ ಅಂಕಲ ಕೋಟಿ ಇವರ ಉಪಕಾರವನ್ನು ಸ್ಮರಿಸದೆ ಇರಲಾರೆನು. ಗ್ರಂಥಕರ್ತರ ಮತ್ತು ಗುರುಗಳ ಇತಿಹಾಸದ ಬಗ್ಗೆ ವಿಷಯಸಂಗ್ರಹಕ್ಕೆ ಮತ್ತು ಕೈಬರೆಹದ ಓಲೆಗಳನ್ನು ಅಭಿಮಾನದಿಂದ ಕೊಟ್ಟು ವಿಶೇಷವಾಗಿ ನೆರವಾದ ಹರಪಿ ಪುರಾಣಮಠದ ಶಿವಾನುಭಾವಿಗಳಾದ ಮಾತೋಶ್ರೀ ಶಿವಪಾರ್ವತಪ್ಪನವ ರಿಗೂ ಮತ್ತು ಹರವಿ ಪುರಾಣಮಠದ ಶಿವಲಿಂಗಪ್ಪಯ್ಯನವರು ಅವರ ಪತ್ನಿ ದೇವೀರಕ್ಕನವರಿಗೂ ಮತ್ತು ಲಿಂಗನಾಯಕನಹಳ್ಳಿ ಮಠದ ಸದ್ಭಕ್ತರಾದ ಹರವಿ ತುಮ್ಮಿನಕಟ್ಟಿ ಶ್ರೀಮಾನ್ ರೇವಣಪ್ಪನವರಿಗೂ ಮತ್ತು ಮಡಿವಾಳರ ಶಿವಪ್ಪಣ್ಣನವರಿಗೂ ಅಭಿವಂದನೆಯನ್ನು ಸಲ್ಲಿಸದೆ ಇರಲಾರೆನು. ಇತಿಹಾಸ ಸಂಶೋಧನೆಗೆ ಸಹಾಯವನ್ನು ಒದಗಿಸಿಕೊಟ್ಟ ಉಚ್ಚಂಗಿದುರ್ಗದ ಶ್ರೀಮಾನ್ ಎಮ್. ಮರುಳಸಿದ್ಧನ ಗೌಡರ ಅನಂತ ಉಪಕಾರವನ್ನು ನೆನೆಯದೆ ಬಿಡಲಾರೆನು.

ಧಾರವಾಡ
೨೮-೪-೧೯೫೫ ಮಲ್ಲಾಬಾದಿ ವೀರಭದ್ರಪ್ಪ

# ಒ ಳ ಪಿ ಡಿ

ವಿಷಯಾನುಕ್ರಮಣಿಕೆ ಪುಟ

ವಿಷಯಾನುಕ್ರಮಣಿಕೆ ಪುಟ

ವಿಷಯಾನುಕ್ರಮಣಿಕೆ | ಪುಟ

ಶ್ರೀಗುರುಬಸವಲಿಂಗಾಯ ನಮಃ

# ಮೈಲಾರದ ಶ್ರೀ ಬಸವಲಿಂಗ ಶರಣರ ಕೃತಿಗಳು

## ಷಟ್‌ಸ್ಥಲ ನಿರಾಭಾರಿ

# ವೀರಶೈವ ಸಿದ್ಧಾಂತ

( ವಾರ್ಧಕ ಷಟ್‌ಪದಿ )

ಸೂಚನೆ : ಸೃಷ್ಟಿಯೊಳ್ ಶಿವನಧಿಕವೆಂಬ ಶಾಸ್ತ್ರವನೋದಿ
ಯಷ್ಟಾವರಣವಂಗವಾದ ಸದ್‌ಭಕ್ತರಿಗೆ
ಕಷ್ಟಪರಿಭವಗಳನು ಕಲ್ಪಿಸುವ ಭ್ರಷ್ಟರಿಗೆ ಕೊಡುವ ಮಾರುತ್ತರವಿದು

ಶ್ರೀಗುರುವು ಸ್ಮರಣೆಗೈವರ್ಗೆ ಚಿಂತಾಮಣಿಯು
ಶ್ರೀಗುರುವು ಹರಣದಳಿವಿನೊಳು ಮರುಜೀವಣಿಯು
ಶ್ರೀಗುರುವು ಶರಣರಂಗದೊಳು ಲಿಂಗದ ಮುಖವ
ಕಾಣಿಸುವ ಮುಕುರಮಣಿಯು
ಶ್ರೀಗುರುವು ವೀರಶೈವೋತ್ತಮಕುಲಾಗ್ರಣಿಯು
ಶ್ರೀಗುರುವು ಸದ್‌ಭಕ್ತಗಣಕೆ ಪರುಷದ ಕಣಿಯು
ಶ್ರೀಗುರುವಿನಮಲ ಪಾವನಚರಿತ ಚಾರುಚರಣವು
ನನ್ನ ಹಣೆಗೆ ಹೊಣೆಯು ೧

ಗುರುಮೂರ್ತಿಸ್ಮರಣೆಯಿಂದಧಿಕ ಧ್ಯಾನಗಳಿಲ್ಲ
ಗುರುಪಾದಪೂಜೆಯಿಂದಧಿಕಾರ್ಚನೆಗಳಿಲ್ಲ
ಗುರುವಚನಕಧಿಕಮಂತ್ರಮದಿಲ್ಲ ಗುರುವಿಸಿಂದಧಿಕವಾಗಿಪ್ಪುದಿಲ್ಲ
ಗುರುವಿನ ಕಟಾಕ್ಷದಿಂದಧಿಕ ಮೋಕ್ಷಗಳಿಲ್ಲ
ನಿರುತದಿಂ ನಾಸ್ತಿ ತತ್ತ್ವಂ ಗುರೋಃ ಪರಮೆಂಬ
ಸುರುಚಿರಾಗಮದಿಂದೆ ಗುರುವಧಿಕನಿಂತಪ್ಪ ಗುರುಕರೋದ್ಭವರಧಿಕರು ೨

ಗುರುವೆ ಅಜ್ಞಾನತಿಮಿರಾರ್ಕ ಭವಭಂಜನನು
ಗುರುವೆ ಭಕ್ತಿಜ್ಞಾನವೈರಾಗ್ಯಮಂದಿರನು
ಗುರುವೆ ದೀಕ್ಷೆ ಸುಶಿಕ್ಷೆ ಮೋಕ್ಷ ಕಾರಣಕರ್ತೃವಲ್ಲದಿನ್ನೊರ್ವರಿಲ್ಲ
ಗುರುವಿಸಿಂದಧಿಕ ದೈವಂಗಳಿಲ್ಲೆಂದರಿದು
ಹರನು ನ ಗುರೋರಧಿಕ ವಿದಿತವೆಂದೋದಿದನು
ನಿರುತವಿದು ಕೇಳು ಸದ್ಗುರುವಧಿಕನಿಂತಪ್ಪ ಗುರುಕರೋದ್ಭವರಧಿಕರು ೩

ಪಾವನಾತ್ಮಕ ಸುಪುತ್ರನ ಮಸ್ತಕದೊಳು ಗುರು
ದೇವ ಕರವಾಂತು ಸಾಸಿರದಳದ ಚಿತ್ಕಳೆಯ
ಭಾವದಿಂ ಮನ ಮನದಿ ನೇತ್ರ ನೇತ್ರಂಗಳಿಂ ತೆಗೆದಿಪ್ಪರೂಪುಗೊಳಿಸಿ
ತೀವಿ ತಚ್ಛಿಷ್ಯನಂಗದ ಮೇಲೆ ಧರಿಸಿ ಸಂ
ಜೀವಷಣ್ಮಂತ್ರಲಿಂಗವಿದೆಂದು ತಿಳುಹೆ ಚಿದ್
ಭಾವಕಳೆಯೊಳಗಿಷ್ಟಲಿಂಗವೇ ತಾನಾದ ಲಿಂಗಭಕ್ತನೆ ಶ್ರೇಷ್ಠನು ೪

ಕಂಗಳಾಲಯದ ಚಿಜ್ಜ್ಯೋತಿರೂಪಾದಿಷ್ಟ
ಲಿಂಗವೇ ಪತಿಯಾಗಿ ತಾನೆ ಸತಿಯಾಗಿರ್ಪ
ಮಂಗಳಾತ್ಮಕಗೆ ಸಂಯೋಗವಲ್ಲದೆ ಲಿಂಗಬಾಹ್ಯರಿಗೆ ಯೋಗ್ಯವಹುದೇ
ಅಂಗದೊಳು ಲಿಂಗವಿಲ್ಲದ ನರನೆ ಭವಿ ಎಂಬ
ಇಂಗಿತವನರಿದು ಶಿವ ನುಡಿದಾಗಮವ ಕೇಳು
ಲಿಂಗಬಾಹ್ಯಾತ್ ಪರಂ ನಾಸ್ತಿ ಎಂದುಂಟಾಗಿ ಲಿಂಗಾಂಗಿಗಳ್ ಶ್ರೇಷ್ಠರು ೫

ಲಿಂಗವಾಚಾರ ಗುರು ಶಿವ ಚರ ಸುಶೇಷ ಮಹ
ಲಿಂಗ ಸತ್‌ಕ್ರಿಯೆ ವರಿಷ್ಠ ಜ್ಞಾನ ಸದ್‌ಭಾವ
ಲಿಂಗ ನಿಷ್ಕಳ ಶೂನ್ಯ ವರನಿರಂಜನ ಪರಬ್ರಹ್ಮ ತದ್‌ರೂಪವಾದೀ
ಲಿಂಗವೇ ಭಕ್ತರಂಗದ ವಾಮಕರದೆ ಪಂ
ಚಾಂಗುಲಿಯ ಮಧ್ಯದೊಳು ಪೂಜೆಗೊಂಬುದನು ತಿಳಿ
ದಂಗವಿಸಿ ವೇದಂಗಳತ್ಯತಿಷ್ಠದ್ ದಶಾಂಗುಲವೆಂದು ಪೊಗಳುತಿಹವು ೬

ಮುನ್ನನಾದಿಯ ಪರಾತ್‌ಪರ ನಿರಂಜನ ಶರಣ
ತನ್ನ ಹೃತ್‌ಕಮಲದ ಪರಂಜ್ಯೋತಿಲಿಂಗವನು
ಭಿನ್ನವಿಲ್ಲದೆ ವಾಮಕರಕಂಜದೊಳ್ ಪಿಡಿದು ತನ್ನ ತಾನರ್ಚಿಸುತಿಹ
ಚೆನ್ನ ಸತ್‌ಕ್ರಿಯೆಯ ಸಮ್ಯಕ್‌ಜ್ಞಾನ ಜಂಗಮವ
ಬಿನ್ನಪಂಗೈದು ಬಿಜಯಂಗೈಸಿ ಕೊಂಡೊಯ್ದು
ತನ್ನಿಷ್ಟಲಿಂಗವೆಂದನವರತ ಭಜಿಪ ಸಂಪನ್ನ ಸದ್‌ಭಕ್ತನಧಿಕಂ ೭

ವೇದಶಾಸ್ತ್ರಾಗಮಕತೀತ ಜಂಗಮವು ಚಿ
ನ್ನಾದ ಚಿದ್‌ಬಿಂದು ಚಿತ್‌ಕಳೆಯೆ ಜಂಗಮವು ಭ
ಕ್ತಾದಿ ಮಾಹೇಶ ಪ್ರಸಾದಿಯುಸುಲಿಂಗಿ ಶರಣೈಕ್ಯ ಷಟ್‌ಸ್ಥಲಜಂಗಮಂ
ಸಾಧಿಸುವೆನೆಂಬರಿಗಸಾಧ್ಯವಹ ಜಂಗಮವು
ಭೇದಿಸುವೆನೆಂಬರಿಗಭೇದ್ಯವಹ ಜಂಗಮವು
ಮೂದೇವತಾರಾಧ್ಯಗತ್ತತ್ತ ಜಂಗಮದ ದಾಸೋಹಿ ಭಕ್ತನಧಿಕಂ ೮

ಆದಿಸ್ಥಾವರದ ಮಸ್ತಕಪೂಜೆಯಾಗಲ್ಕ
ನಾದಿಜಂಗಮದ ಪಾದವೆ ಪೂಜೆಯುಹುದು ಸದ್
ಬೋಧಗುರುಲಿಂಗವೆರಡರ ಹರಣ ಜಂಗಮದ ಪಾದವೇ ಪರಬ್ರಹ್ಮವು
ಪಾದವನು ಭಜಿಸಿ ಪರವನು ಕಂಡ ಭಕ್ತಂಗೆ
ವೇದಪದವಿಗಳು ಕೈಜೋಡಿಸಿರ್ಪುದ ಕಂಡು
ಪಾದವನು ಬಿಟ್ಟು ಪರವನು ಕಂಡುದಿಲ್ಲವೆಂಬಾಗಮವ ಶಿವನೋದಿದಂ ೯

ಮಂತ್ರಮಯಚರಲಿಂಗದಡಿಗೆ ಭಕ್ತನು ಕರವ
ಸಂತಸದೊಳಿಟ್ಟು ಪತಿಭಕ್ತಿಯಿಂದುಪಚರಿಸಿ
ಮುಂತೆ ಪರಬ್ರಹ್ಮರಂಧ್ರದೊಳಿರ್ದ ಸತ್ತ್ಯೋದಕವ ಚರಣದಿಂದೆ ಪಡೆದು
ಇಂತೊಗೆದ ಸುಜ್ಞಾನತೀರ್ಥಪುತ್ರನ ಶರಣ
ಸಂತತಿಗಳಾಲಿಂಗಿಸುತಲೆತ್ತಿ ಮುದ್ದಾಡಿ
ಸಂತೈಸುತಾ ಪಾದತೀರ್ಥದಾಚರಣೆಯೊಳಗಿರ್ಪ ಸದ್‌ಭಕ್ತನಧಿಕಂ ೧೦

ಸೃಷ್ಟಿಯೊಳ್ ವೀರಮಾಹೇಶ್ವರರ ಸದುಹೃದಯ
ದಷ್ಟದಳವಾಕಾಶಗಂಗೆ ಪಾದೋದಕದ
ವೃಷ್ಟಿಗರೆಯಲು ಭಕ್ತನಂಗಚಿದ್‌ಭೂಮಿಯೊಳಗಷ್ಟಾವರಣವೃಕ್ಷವು
ಸ್ಪಷ್ಟವಾಗಿಷ್ಟಾರ್ಥಫಲವು ಕೈಸಾರ್ದು ಸಂ
ತುಷ್ಟಿವಡೆದುಂಡುವುಪವಾಸಿಯಾದುದ ಕಂಡು
ಶ್ರೇಷ್ಠವಹ ಪಾದೋದಕವೆ ಪರಬ್ರಹ್ಮವೆಂಬಾಗಮವ ಶಿವನೋದಿದಂ ೧೧

ಸೃಷ್ಟಿಯೊಳಗುಳ್ಳ ಬಹುನದಿಯ ಸ್ನಾನದ ಫಲವು
ಶ್ರೇಷ್ಠವಹ ಸಪ್ತಸಾಗರದ ಜಳಕದ ಫಲವು
ಅಷ್ಟಷಷ್ಟಿಯ ಕೋಟಿ ತೀರ್ಥಯಾತ್ರೆಯ ಮಾಡಿ ಮಿಂದು ಮಡಿಯುಟ್ಟ
ಇಷ್ಟಗುರುಲಿಂಗಜಂಗಮದ ಶ್ರೀಚರಣದಂ [ಫಲವು
ಗುಷ್ಟದಿಂದೊಗೆದ ಜಲಬಿಂದುಸಾಸಿರಭಾಗ
ದಷ್ಟಕೆಣೆಯಲ್ಲವಾ ಫಲವೆಂಬ ಶಿವನ ಶ್ರುತಿ ಸಾರುತಿದೆ ಮೂಜಗದೊಳು ೧೨

ಕಂಡು ತೀರ್ಥವನು ಕೊಳ್ಳದೆಯುಳಿದೊಡಪಶೈವ
ಗಿಂಡಿಯೊಳ್ಮಡಗಿಕೊಂಡಿಹುದು ಶೈವಾಚಾರ
ಖಂಡಿತಾಚರಣೆಯೊಳು ಲಿಂಗೋದಕವ ಮಾಡಿಕೊಂಡೊಡದು ವೀರಶೈವಂ
ಮಂಡೆಬೋಳಾದ ಚರತೀರ್ಥವನುವೊಪ್ಪುತ್ತು
ಕೊಂಡೊಡತಿ ವೀರಶೈವವದು ದಿವರಾತ್ರಿಯೊಳು
ಕೊಂಡೊಡದಖಂಡ ಸದ್‌ವೀರಶೈವಾಚಾರಕೆಣೆಗಾಣೆನೀ ಜಗದೊಳು ೧೩

ಆದಿಸದ್‌ಗುರುಪಾದವಾರಿ ಲಿಂಗೋದಕವ
ನಾದಿಜಂಗಮದ ಚರಣದ ತೀರ್ಥ ಸುಸ್ಪರ್ಶ
ನೋದಕವಧಾನಜಲವಾಪ್ಯಾಯನೋದಕವು ಹಸ್ತ[೧]ಪುಷ್ಕರ[೧]ವುಪರಿಣಾ
ಮೋದಕವು ನಿರ್ನಾಮಸಲಿಲ ಸತ್ಯೋದಕವು
ಈ ದಶವಿಧೋದಕದ ಸಂಬಂಧದಾಚರಣೆ
ಭೇದವರಿದಾಚರಿಸುತಿರ್ಪ ಸದ್‌ಭಕ್ತರತ್ಯಧಿಕರ್ಪೆ ಮೂಜಗದೊಳು ೧೪

ಸಾಧುಸದ್‌ಭಕ್ತರಂತರ್ಯಾಮಿ ಜಂಗಮದ
ಪಾದೋದಕದೊಳಂಗಲಿಂಗದಭಿಷೇಕ ಮೊದ
ಲಾದ ಸದ್‌ವರ್ತನೆಯೊಳಾಚರಿಸಿ ನಡೆದು ನಡೆದಂತೆ ನುಡಿದರ್ ಪ್ರಮಥರು
ಪಾದೋದಕವೆ ಪರಬ್ರಹ್ಮವೆಂಬಾಗಮವ
ನೋದಿ ನುಡಿದಂತೆ ಶಿವ ನಡೆದುದಿಲ್ಲದರಿಂದೆ
ಮೂದೇವತಾರಾಧ್ಯನಿಗೆ ಮಿಗಿಲು ಸದ್‌ಭಕ್ತರೆಂಬುದಿದು ನಿಶ್ಚಯವಲಾ ೧೫

ದೀಕ್ಷೆಯನು ಗುರುವಿನಿಂ ಪಡೆದು ಲಿಂಗವ ಧರಿಸ
ಲಾಕ್ಷಣದೊಳಜಡಾಂಗಶುದ್ಧಪ್ರಸಾದ ಪ್ರ
ತ್ಯಕ್ಷವಾದಿಷ್ಟಲಿಂಗದ ಶಿಕ್ಷೆಯಿಂದೆ ಮನ ಸಿದ್ಧಪ್ರಸಾದವಹುದು
ಮೋಕ್ಷವನು ಜಂಗಮದೊಳಂಗೀಕರಿಸೆ ಭಾವ
ಸಾಕ್ಷಾತ್ ಪ್ರಸಿದ್ಧಪ್ರಸಾದವದು ನಿಶ್ಚಯವು
ದೀಕ್ಷೆ ಶಿಕ್ಷೆಯು ಮೋಕ್ಷದಿಂ ಭಕ್ತನಂಗ ಮನ ಭಾವ ಪ್ರಸಾದಮಯವು ೧೬

ಚಾರುಸದ್‌ಭಕ್ತಿಗೆ ಪ್ರಸಾದ ಜನನಸ್ಥಾನ
ಧೀರಪ್ರಸಾದಕ್ಕೆ ಭಕ್ತಿ ಜನನಸ್ಥಾನ
ವೀ ರೀತಿಯಿಂದೆ ಸದ್‌ಭಕ್ತಿಪ್ರಸಾದಕ್ಕೆ ಬೀಜವೃಕ್ಷನ್ಯಾಯವು
ಧಾರುಣಿಯೊಳವತರಿಸಿ ಬಂದ ಗುರು ಲಿಂಗ ಚರ
ಮೂರಕ್ಕೆ ಮೂಲಚೈತನ್ಯ ಚಿತ್‌ಕಳೆಯಾಗಿ
ತೋರುತಿಹ ಭಕ್ತಿಪ್ರಸಾದವನು ಭೋಗಿಸುವ ಶರಣನೇ ಸಂತೃಪ್ತನು ೧೭

೧ ಜಲವುಂತೆ (ಕ.)

ಕಾರಣಾದರೂಪುರುಚಿ ತೃಪ್ತಿಗಳ ಗುರು ಮುಟ್ಟಿ
ತೋರಿದಿಷ್ಟಪ್ರಾಣಭಾವಲಿಂಗಂಗಳಿಗೆ
ಚಾರುಸದ್ಭಕ್ತಿಯಿಂದಿತ್ತು ತ್ರೈವಿಧಲಿಂಗದಿಂದುಳಿಮೆಯಾಗಿ ಬಂದ
ಸಾರಾಯುಚತುರ್ವಿಧದೊಳಾರೈದು ಬಗೆಯಾಗಿ
ತೋರುತಿಹ ಸುಪ್ರಸಾದವನು ಭೋಗಿಸುತಿರ್ಪ
ವೀರಶೈವಾಚಾರಸದ್ಭಕ್ತಶರಣರಪ್ರತಿಮರೈ ಮೂಜಗದೊಳು ೧೮

ಬಂದ ಜಂಗಮದ ಶೇಷವ ಕೊಂಬುದಾಚರಣೆ
ನಿಂದಲ್ಲಿ ಲಿಂಗಪ್ರಸಾದವನು ಸವಿಯೆ ಸಂ
ಬಂಧವೆನಿಸುವುದುಭಯವರ್ತನೆಯೊಳಿರ್ಪ ಸದ್ಭಕ್ತ ಸಮಯಪ್ರಸಾದಿ
ಇಂದು ನಾಳಿನ್ನದನವರತ ಜಂಗಮವ ಕರೆ
ತಂದುವೊಪ್ಪತ್ತವರ ಪರಮಪ್ರಸಾದವನು
ಚೆಂದದಿಂದುಂಡು ಸಂತೃಪ್ತನಾಗಿರುತಿರ್ಪ ಭಕ್ತ ನಿಚ್ಚಪ್ರಸಾದಿ ೧೯

ಚರಣಜಲಸುಪ್ರಸಾದಕ್ಕಲ್ಲದಿನ್ನು ಬಾಯ್
ದೆರೆಯೆನೆಂಬುವದೊಂದು ವ್ರತವನಂಗೀಕರಿಸಿ
ಗುರುಲಿಂಗಜಂಗಮಕೆ ವಂಚಿಸದೆ ತನುಮನಧನಂಗಳ ಸಮರ್ಪಿಸುತಲಿ
ಇರುಳುಪಗಲೆನ್ನದನವರತ ಜಂಗಮದ ಶ್ರೀ
ಚರಣಭಜನೆಯ ಮಾಡಿ ಕರುಣಾಮೃತವ ಕೊಂಡು
ವರಪ್ರಸಾದವನುಂಡು ತೃಪ್ತನಾಗಿರ್ಪ ಸದ್ಭಕ್ತನಿಚ್ಚಪ್ರಸಾದಿ ೨೦

ಗುರುಲಿಂಗಜಂಗಮದೊಳೊಗೆದು ಶೋಭಿಸುವ ಸು
ಸ್ಥಿರ ಶುದ್ಧ ಸಿದ್ಧ ಪ್ರಸಿದ್ಧವಾಪ್ಯಾಯನವು
ವರಸಮಯ ಪಂಚೇಂದ್ರಿಯರಹಿತಾಂತಃಕರಣ ಚಾತುಷ್ಟಯವು ಓರಂತಾ
ಚಿರಶೇಷ ಸದ್ಭಾವ ಸಮತೆ ಸಮ್ಯಕ್ಜ್ಞಾನ
ಪರಮಾಮೃತೈಕ್ಯ ದತ ಸುಪ್ರಸಾದವೆ ಕಾಯ
ಕರಣ ಭಾವಾರ್ಪಣಗಳರಿದು ಮೆರೆದಿರ್ಪ ಸದ್ಭಕ್ತರಿಗೆ ಚಿತ್ಕಾಯವು ೨೧

ಶುದ್ಧಪ್ರಸಾದಮುಮನುಂಡುಳಿಸದುದೆ ಶ್ರದ್ಧೆ
ಸಿದ್ಧ ಪ್ರಸಾದವನು ಕೊಂಡು ಮರಳದ ನೈಷ್ಠೆ
ನಿರ್ಧರಪ್ರಸಿದ್ಧಪ್ರಸಾದತುಂತುರ್ವನಿಯು ಹಾರದುದೆ ಸಾವಧಾನಂ
೧ಸದ್‌ದ್ರವವನ೧ಂಗಲೇಪನವಾದುಪನುಭಾವ
ವದೃಶ್ಯವಾಗಿ ಖಂಡಿತವಾದುದಾನಂದ
ಚಿದ್ರಸಾಂಬುಧಿಯ ಚಿದ್ರಸಗೂಡಿದಂತೈಕ್ಯವಾದ ಸಮರಸಭಕ್ತನು ೨೨

ಮಿಸುಪ ಸದ್‌ಭಕ್ತರಂತರಶಾಂತಿಚಿತ್‌ಕಳೆಯೆ
ವಸುಧೆಗವತರಿಸಿ ಪಂಚಾಕ್ಷರಿಯನೊಡಗೂಡಿ
ಭಸಿತ ಭೂತಿಯು ಭಸ್ಮಕ್ಷಾರ ರಕ್ಷೆಗಳೆಂಬ ಪಂಚನಾಮವನು ತಳೆದು
ಅಸಮಜಂಗಮದಂಘ್ರಿಜಲಮಿಶ್ರದಿಂದೆ ಶೋ
ಭಿಸುಪಂಗಲಿಂಗಧಾರಣಕೆ ಕಾರಣವಾದ
ಭಸಿತವನು ಧರಿಸುತಿಹ ವೀರಶೈವಾಚಾರಭಕ್ತರಿಂಗೆಣೆಗಾಣೆನು ೨೩

ಅಸಮಾಕ್ಷನಿಂದಧಿಕ ಬಸವನಹುದೆಂಬ ಸಾ
ಹಸಮುಂಟು ನೋಡು ಸಿರದೊಳು ಕೋಡು ಮೂಡಿ ಬಹು
ಜಸವಡೆದು ಧರಣಿಯೊಳು ಗುರುಲಿಂಗಜಂಗಮಕೆ ದಾಸೋಹಿಯೆನಿಸಿ
ಬಸವಾಕ್ಷರತ್ರಯದೊಳೊಗೆದ ತ್ರೈಪುಂಡ್ರವನು [ಮೆರೆದ
ನೊಸಲು ಮೊದಲಾದ ನಾಲ್ವತ್ತೆಂಟು ಸ್ಥಾನದೊಳು
ಬಸವ ಬಸವಾ ಎಂದು ಧರಿಸುತಿಹ ಸದ್‌ಭಕ್ತರಸಮಾಕ್ಷನಿಂದಧಿಕರು ೨೪

ಜ್ಞಾನಕ್ರಿಯಾಚರಣೆಯಿಂದೆ ನಾಲ್ವತ್ತೆಂಟು
ಸ್ಥಾನಂಗಳಲ್ಲಿ ಚಿದ್‌ಭಸಿತ ತ್ರೈಪುಂಡ್ರವನು
ಸ್ನಾನಧೂಳನ ಧಾರಣಂಗಳಿಂದನವರತ ಧರಿಸಿಕೊಂಡಾಚರಿಪುದು
ಧ್ಯಾನ ಮೌನವು ನೇಮ ನಿತ್ಯ ಚತುರ್ವಿಧವೆಂಬ
ಸ್ವಾನುಭಾವದೊಳು ಸನ್ನಿಹಿತವಾಗಿರ್ಪ ಸುಯಿ
ಧಾನಿಗಲ್ಲದೆ ಮಿಕ್ಕಿನಂಗಗುಣಮುಳ್ಳ ದುಃಶೈವಗಿರದಳವಡುವುದೇ ೨೫

---

೧ ಶ್ರದ್ಧೆಯಿಂದ (ಕ.)

ಶಿವನ ಮಾಯಾಂಶಗುಣವೆಂದೆನಿಸಿಕೊಂಡು ತ್ರೈ
ಭುವನವನು ಭವಭವಾಂತರದೊಳಂಡಲೆವುತಿಹ
ತ್ರಿವಿಧತನು ತ್ರಿವಿಧಮನ ತ್ರಿವಿಧಜೀವ ತ್ರಿವಿಧಮಲವೀಷಣತ್ರಯವನು
ತ್ರಿವಿಧಗುಣವರ್ತನೆಯ ಸುಟ್ಟು ಬೊಟ್ಟಿಟ್ಟ ದೃ
ಷ್ಟವ ತೋರಲಾಗಿ ನಾಲ್ವತ್ತೆಂಟು ಸ್ಥಾನದೊಳು
ತ್ರಿವಿಧರೇಖೆಗಳಿಂದೆ ಚಿದ್‌ಭಸಿತವನು ಧರಿಸುತಿರ್ಪರೈ ಸದ್‌ಭಕ್ತರು ೨೬

ಶಿವನಂಗ 'ಧವಲ' ಚಿದ್‌ಭಸಿತ ತಾಂ ನಿಜ'ಧವಲ'
ಶಿವನಿಗೈಮೊಗವು ಚಿದ್‌ಭಸಿತಸರ್ವಾಂಗಮುಖ
ಶಿವವಾಕ್ ಸದರ್ಥ ಮಂಗಲಕೆ ಪೆಸರುಂಟಾಗಿ ಭಸಿತ ಮಂಗಲರೂಪವು
ಶಿವನಿಂದಲಧಿಕವೆಂದೆನಿಪ ಚಿದ್‌ಭಸಿತವನು
ಅವಿರತಾಪಾದ ಮಸ್ತಕದ ಪರ್ಯಂತರವು
ಸುವಿವೇಕಷಣ್‌ಮಂತ್ರಸ್ಮರಣೆಯಿಂದನವರತಧರಿಸುವರು ಸದ್‌ಭಕ್ತರು ೨೭

ರುದ್ರಾಕ್ಷೆ ತಾನೆ ಚಿನ್ನಾದಮಯ ಗುರುರೂಪು
ರುದ್ರಾಕ್ಷಮುಖವೆ ಚಿದ್‌ಬಿಂದುಮಯಲಿಂಗಗಳು
ರುದ್ರಾಕ್ಷವದನಪುಷ್ಪದೊಳೊಪ್ಪುತಿಹ ನಾಳ ಚಿತ್‌ಕಳಾಮಯಜಂಗಮಂ
ರುದ್ರಾಕ್ಷೆಪವಣಿಗೆಯ ಸೂತ್ರ ಚಿನ್ಮಯ ಭಕ್ತ
ನಿರ್ಧರದೊಳಿಂತು ಚತುರ್ವಿಧ ಚಿತ್‌ಸ್ವರೂಪಾದ
ರುದ್ರಾಕ್ಷೆಗಳೆ ಚಿದಂಗಾಭರಣವಾಗಿರ್ಪ ಶರಣರಿಂಗೆಣೆಗಾಣೆನು ೨೮

ಎರಡು ಮುಂಗೈಗಳೊಳಗೀರಾರು ಮಣಿಗಳನು
ಎರಡು ಬಾಹುಗಳೊಳೀರೆಂಟೆಂಟು ಮಣಿಗಳನು
ಕೊರಲೊಳೈಮೊಗದ ಮೂವತ್ತೆರಡು ಮಣಿಗಳನು ಕರ್ಣಗಳೊಳಾರಾರನು
ಸಿರದಲ್ಲಿ ಮೂರು ಸಿರಬಳಿಸಿ ಮುವತ್ತಾರು
ಪರಮಶಿಖಿಗೊಂದು ರುದ್ರಾಕ್ಷೆ ಪರಿವಿಡಿಯಿಂದೆ
ಧರಿಸಿಕೊಂಡಾಚರಿಸುತಿರ್ಪ ಸದ್‌ಭಕ್ತರಪ್ರತಿಮರೈ ಮೂಜಗದೊಳು ೨೯

---

ಹರನು ತಾನೊಂದು ರುದ್ರಾಕ್ಷೆಯನು ಪಣೆಯಲ್ಲಿ
ಧರಿಸಲ್ಕೆತಾನದರ ಮಹಿಮಾತಿಶಯದಿಂದೆ
ಮರಣವಿರಹಿತನಾಗಿ ಹರಿವಿರಂಚಿಗಳಿಂದೆ ವಂದನೆಯ ಕೊಳುತಿರ್ಪನು
ಗುರುವಿನ ಕಟಾಕ್ಷಮಾಲೆಗಳೆಂಬ ರುದ್ರಾಕ್ಷೆ
ಸರವ ಕರ ಸಿರ ಕರ್ಣ ತೋಳ್ ಕಂಠದೊಳ್ ತಾಳ್ದ
ಶರಣರಾ ಹರನಿಂದಮಧಿಕವಾದತಿಶಯುವನುಸುರಲೆನ್ನಳವಲ್ಲವು ೩೦

ಶ್ರೀಪರಮಗುರುವಿನ ಕರಾಬ್ಜದಿಂದೊಗೆದ ಚಿದ್
ರೂಪಮಾದಿಷ್ಟಲಿಂಗದ ನಾಮವೆನಿಪ ನಿರ್
ಲೇಪಪ್ರಣವಾದಿ ಪಂಚಾಕ್ಷರಂಗಳ ಮರೆಯದೆಚ್ಚರದೊಳುಚ್ಚರಿಪೊಡೆ
ಸ್ತ್ರೀಪುರುಷರುಭಯ ಪೆಸರರಿದುಸುರಬಾರದತಿ
ಗೋಪ್ಯಮಾನಸದೊಳಿರ್ಪಂತೆ ಲಿಂಗದ ಚಿತ್ಕ
ಳಾಪಷಣ್ಮಂತ್ರವತಿಗೋಪ್ಯದಿಂದುಚ್ಚರಿಸುತಿಹ ಶರಣಗೆಣೆಗಾಣೆನು ೩೧

ಪಂಚಕರ್ಮೇಂದ್ರಿಯ ನಕಾರಪಂಚಾಕ್ಷರವು
ಪಂಚವಿಷಯಂಗಳು ಮಕಾರಪಂಚಾಕ್ಷರವು
೧ಪಂಚವಿಧವಾದ ಬುದ್ಧೀಂದ್ರಿಯಂಗಳು೧ ವರತಿಕಾರಪಂಚಪ್ರಣವವು
ಪಂಚವಾಯುಗಳಲಿ ವಕಾರಪಂಚಾಕ್ಷರವು
ಪಂಚಕರಣಗಳಲಿ ಯಕಾರಪಂಚಾಕ್ಷರವು
ಪಂಚವಿಂಶತಿತತ್ತ್ವದಲ್ಲಿ ಪಂಚಾಕ್ಷರವನರಿದರಾ ಸದ್ಭಕ್ತರು ೩೨

ಪಂಚಭೂತಂಗಳಳಿದುಳಿದ ಪಂಚಾಕ್ಷರವು
ಸಂಚಿತಾಕ್ಷರಗಳನು ತೊಡೆದ ಪಂಚಾಕ್ಷರವು
ವಂಚನೆಯನತಿಗಳೆದ ಪರಮಪಾವನ ನಿಷ್ಪ್ರಪಂಚಪಂಚಪ್ರಣವವು
ಮುಂಚೆ ಮೂಲಪ್ರಣವದಂಗ ಪಂಚಾಕ್ಷರವು
ಸಂಚುವರಿದವರಂಗ ಲಿಂಗ ಪಂಚಾಕ್ಷರವು
ಪಂಚಾಕ್ಷರವೆ ಪ್ರಾಣವಾದ ಸದ್ಭಕ್ತರಪ್ರತಿಮರ್ಕೈ ಮೂಜಗದೊಳು ೩೩

---

೧ ಪಂಚವಿಧವಾಗಿ ಶೋಭಿಸುವ ಭುದ್ಧೀಂದ್ರಿಯಯು (ಗ. ಚ.)

ಅಷ್ಟಾವರಣವೆ ಭಕ್ತರಷ್ಟಮಹದೈಶ್ವರ್ಯ
ಶಿಷ್ಟ ಮಾಹೇಶಗಣಿಮಾದ್ಯಷ್ಟ ಸಿದ್ಧಿಗಳು
ಸೃಷ್ಟಿಯೊಳು ಬಹುಸಾವಧಾನಿ ಪ್ರಸಾದಿಗಳಿಗಷ್ಟಮಹಭೋಗಂಗಳು
ಅಷ್ಟವರಣವೆ ಪ್ರಾಣಲಿಂಗಿಗಷ್ಟಾರ್ಚನೆಯು
ನಿಷ್ಠೆ ಶರಣರ್ಗಷ್ಟವರಣ ವಂದಿಷ್ಟಾಗಿ
ಇಷ್ಟಲಿಂಗೈಕ್ಯ ಸದ್ಭಕ್ತರಂತರ್ಬಾಹ್ಯದಾಚರಣೆ ಸಂಬಂಧವು ೩೪

ಗುರುಕೃಪೆಯು ಪಡೆದಿಷ್ಟಲಿಂಗಪೂಜೆಯ ಮಾಡಿ
ಹರುಷದಿಂ ಜಂಗಮಾರ್ಚನೆಗೈದು ಬಳಿಕವರ
ಚರಣತೀರ್ಥವ ಕೊಂಡು ಸುಪ್ರಸಾದವನುಂಡು ಚಿದ್ಭಸಿತ ರುದ್ರಾಕ್ಷೆಯಿಂ
ವರಚಿದಂಗ[1]ಕ್ಕ[1]ಲಂಕರಿಸಿ ಪಂಚಾಕ್ಷರಿಯ
ಸ್ಮರಿಸುವೀ ಪರಿಯೊಳಷ್ಟಾವರಣದಾಚರಣೆ
ಶರಣಗಲ್ಲದೆ ಹರನಿಗಿಲ್ಲವಾದುದರಿಂದೆ ಹರನಿಗಿಂದಧಿಕ ಶರಣಂ ೩೫

ಅರಿವೆ ಗುರುವಾಗಿ ಪ್ರಾಣವೆ ಲಿಂಗವಾಗಿ ಮ
ತ್ತಿರದೆ ಸುಜ್ಞಾನ ಜಂಗಮವಾಗಿ ಬಳಿಕವರ
ಚರಣಜಲ ಜಿಹ್ವೆಯೊಳು ಶೇಷ ನಾಸಿಕದಲ್ಲಿ ಚಿದ್ಭಸಿತ ತ್ವಕ್ಕಿನಲ್ಲಿ
ಪರಮರುದ್ರಾಕ್ಷೆ ನೇತ್ರದಲಿ ಪಂಚಾಕ್ಷರಿಯು
ವರಶ್ರೋತ್ರದಲ್ಲಿಯೀಪರಿಯೊಳಷ್ಟಾವರಣ
ಶರಣನೊಳು ಸಂಬಂಧವಾದಂತೆ ಹರನಿಗಿಲ್ಲದರಿಂದೆ ಶರಣನಧಿಕಂ ೩೬

ಶಕ್ತಿವಿರಹಿತನ ನಿರ್ಗುಣಲೀಲೆ ಮುಗಿಯಲ್ಕೆ
ಭಕ್ತಿಹಿತವಾಗಿರ್ಪ ಷಟ್ಶಕ್ತಿಯೊಡಗೂಡಿ
ಭಕ್ತಮಾಹೇಶ ಪ್ರಸಾದಿಯಸುಲಿಂಗಿ ಶರಣೈಕ್ಯ ಷಟ್ಸ್ಥಲಬ್ರಹ್ಮಿಯು
ಯುಕ್ತಿಯಿಂ ಸಗುಣರೂಪವ ಧರಿಸಿ ಧರೆಯೊಳ್ ವಿ
ರಕ್ತಿಯಿಂದಾಚರಿಸಿ ನಡೆನುಡಿಗಳೊಂದಾದ
ಭಕ್ತಿಚಾರಿತ್ರವನು ತೋರಿ ಸಲಹಿದ ಚೆನ್ನವೀರಮದ್ಗುರು ಜಯಜಯಾ
೩೭

೧ ಗದೊಳ (ಕ)

ಇಂತೀ ಷಟ್‌ಸ್ಥಲ ನಿರಾಭಾರ ವೀರಶೈವ ಸಿದ್ಧಾಂತದೊಳ್
ಅಷ್ಟಾವರಣಮಹತ್ವಂನಾಮ
ಪ್ರಥಮ ಪ್ರಕರಣಂ
ಸಂಪೂರ್ಣಂ

# ಪಂಚಾಚಾರ ಪ್ರಕರಣಂ

ಸೂಚನೆ : ಪಂಚಮುಖ ಶಿವನಧಿಕವೆಂಬ ಶಾಸ್ತ್ರವನೋದಿ
ಪಂಚವಿಧದಾಚಾರ ಪ್ರಾಣವಾಗಿಹ ನಿಷ್ಠ
ಪಂಚಸದ್ಭಕ್ತರನು ನರರೆಂಬ ದುರುಳಂಗೆ ೧ಕೊಡುವ ಪ್ರತ್ಯುತ್ತರವಿದು

ಸತ್ಯಸದ್ಗುರುವಿನ ಕರಾಬ್ಜದಿಂದೊಗೆದ ಪರ
ತತ್ತ್ವಮೂಲಬ್ರಹ್ಮ ಷಣ್ಮಂತ್ರರೂಪಾಗಿ
ವೃತ್ತ ಕಟಿ ವರ್ತುಳ ಸುಗೋಮುಖೋನ್ನತನಾಳ ಪೀಠ ಷಟ್ಕಲೆಯು
ಸತ್ತುಚಿತ್ತಾನಂದ ನಿತ್ಯಪೂರ್ಣಾದ್ಯಖಂ [ಸಾಂತು
ಡತ್ವವೆಂಬಾರು ಸಲ್ಲಕ್ಷಣವ ತಳೆದೊಪ್ಪಿ
ದುತ್ತಮಾಚಾರ ಗುರು ಶಿವ ಚರ ಸುಶೇಷ ಮಹಲಿಂಗಕಾನತನಪ್ಪೆನು ೧

ಮಂಗಳಾತ್ಮಕ ಮಹಾಗುರುವರೇಣ್ಯನ ಕೃಪಾ
ಪಾಂಗದೃಷ್ಟಿಯೆ ಸೂಸಿ ಸದ್ರೂಪವಾದಿಷ್ಟ
ಲಿಂಗವನು ಪಿತ ಮಾತೆ ಸತಿ ಸುತ ಸಹೋದರರು ಮಿತ್ರ ಬಾಂಧವರೆಲ್ಲರು
ಅಂಗಲಿಂಗಕ್ಕೆ ಕಿಂಚಿನ್ಮಾತ್ರ ಸೂತ್ರ ಹೆರ
ಹಿಂಗದಂತನವರತ ಧರಿಸಿಕೊಂಡಿರುತಿರ್ಪ
ಲಿಂಗದಾಚಾರ ಸದ್ಭಕ್ತಗಲ್ಲದೆ ಶಿವನಿಗುಂಟಾದರುಸುರು ಮರುಳೆ ೨

ಅಂಗವೇ ಲಿಂಗ ಲಿಂಗವೆಯಂಗವಾಗಿ ಮಹ
ಲಿಂಗನಡೆ ಲಿಂಗನುಡಿ ಲಿಂಗಸುಖ ಲಿಂಗಮುಖ
ಲಿಂಗತನು ಲಿಂಗಮನ ಲಿಂಗಭಾವಂಗಳಿಂದನವರತವಾಚರಿಸುತ
ಲಿಂಗಾಂಗಸಂಗ ಸದ್ಭಕ್ತರೆಂದೆನಿಸುತಿಹ
ಮಂಗಳಾತ್ಮಕರ ಲಿಂಗಾಚಾರವನು ಕಂಡು
ಹಿಂಗದೋದಿದನು ೩ಶಿವ ಲಿಂಗಸಂಗವೆ ತದಂತಗ್ರಹಣವೆಂಬ ಶ್ರುತಿಯಿಸಾ ೩

---

೧ ಕೊಡುವೆಮಾರುತ್ತರವನು (ಕ.), ಕೊಡುವ ಪ್ರತ್ಯುತ್ತರ (ಚ.). ೨ ಕೃತಿ (ಕ. ಚ.)
೩ ಶಿವನುರೆ ಲಿಂಗಸಂಗಪರ ವೇದಾಂತಗ್ರಹಣಶ್ರುತಿಯು (ಕ)

ಚೆನ್ನ ಶ್ರೀಸದ್ಗುರುಕರಾಬ್ಜದಿಂದೊಗೆದ ಪ್ರ
ಸನ್ನವಾದಾಚಾರಲಿಂಗವನು ಶ್ರದ್ಧೆಯೊಳು
ತನ್ನಯ ಸುವಾಮಕರಪೀಠಸಜ್ಜೆಯೊಳು ಧಾರಣಗೈವ ಪರಿಯೆಂತೆನೆ
ಕುನ್ನಿಮಾನವರಂತೆಯೊಡಲಾಸೆಯಿಂದೆ ಬಹು
ಮನ್ನಣೆಯ ಕೊಡದ ಠಾವಿಗೆ ಪೋಗಿ ದೇಹಿಯೆಂ
ದನ್ಯರಿಗೆ ಕೈಯಾಂತು ಬೇಡದಿಹ [1]ವ್ರತವು ಭಕ್ತಂಗೆ[1] ಲಿಂಗಾಚಾರವು ೪

ಕರುಣಾನಿಧಿಯೆನಿಪ ಸದ್ಗುರುನಾಥನೊಲಿದಿತ್ತ
ಪರಮಸತ್ಕ್ರಿಯೆ ಸಚ್ಚರಿತ್ರ ಗುರುಲಿಂಗವನು
ವರನಿಷ್ಠೆಯಿಂದೆ ಕಕ್ಷಸ್ಥಾನದೊಳ್ ಧರಿಸುವಾಚರಣೆಯುಂಟಾದೊಡಂ
ಬರಲುಳ್ಳ ಸುಖವನತಿಗಳೆದು ಬಾರದ ಸುಖವ
ನರಸಿ ಮುಂಬರಿವ ಪಂಚೇಂದ್ರಿಯಂಗಳ ಮುಖ
ಕ್ಕೆರಗದನವರತ ಲಿಂಗಾಣತಿಯೊಳಿರೆ ಮಹೇಶಂಗೆ ಲಿಂಗಾಚಾರವು ೫

ಹರನು ಮುನಿಯಲ್ಕೆ ಗುರುಕಾಯ್ವ ಗುರುಮುನಿಯಲ್ಕೆ
ಹರಕಾಯಲರಿಯನೆಂತಪ್ಪ ಸದ್ಗುರುವಿತ್ತ
ಪರಮಶಿವಲಿಂಗವನು ಉರಸಜ್ಜೆಯೊಳ್ ಧರಿಸುವಾಚರಣೆವಿಡಿದ ಬಳಿಕ
ನರರಂತೆ ಕಾಮವೈಕಾರದುನ್ಮತ್ತದಿಂ
ಪರಸತಿಯರನು ಕಂಡು ತಕ್ಕೈಸಲೊಲ್ಲದತಿ
ವಿರತಿಯಿಂದವಧಾನಭಕ್ತಿಯುಳವ[2]ಡಲು ಶೇಷಂಗೆ[2] ಲಿಂಗಾಚಾರವು ೬

ಮತ್ತೆ ಕೋಹಂ ಸೋಹಮೆಂಬ ನಾಹಂಭಾವ
ಮಿಥ್ಯವೆಂ[3]ದುಳಿದು[3] ದಾಸೋಹಚರಲಿಂಗವನು
ತಥ್ಯವೆಂದನವರತಮುತ್ತಮಾಂಗದೊಳೊಲಿದು ಧರಿಸುತಿಹ ಕ್ರಮವೆಂತೆನೆ
ಕರ್ತೃಗುರು ಲಿಂಗ ಜಂಗಮಕಲ್ಲದುಳಿದ ಜಡ
[4]ಮರ್ತ್ಯರಿಂಗಡಿವರ್ಗವಾಗಿ[4] ತಲೆವಾಗದಿಹ
ಸತ್ಯಶೀಲವ್ರತಾಚಾರವೇ ಪ್ರಾಣಲಿಂಗಿಗದು ಲಿಂಗಾಚಾರವು ೭

---

೧ ಭಕ್ತಂಗೆ ನೋಡೆ. ೨ ಡೆಪ್ರಸಾದಿಗದು (ಕ).
೩ ದರಿದು (ಚ.) ವಿಂತೆಂದು (ಕ.) ೪ ಮರ್ತ್ಯರ್ಗೆ ಡಿಂಗರಿಗನಾಗಿ (ಕ.)

ಅಸಮಸದ್ಗುರುವಿನ ಕರಾಂಬುರುಹದಿಂದೊಗೆದ
ಮಿಸುಪ ಸಗುಣಾನಂದವಹ ಶೇಷಲಿಂಗವನು
ಸಸಿನೆಯಿಂದನವರತ ಮುಖಸೆಜ್ಜೆಯೊಳ್ ಧರಿಸುತಿರ್ಪ ಕ್ರಮವೆಂತೆಂದೊಡೆ
ಪಿಸುಣಹಿಂಸೆಯನುಳ್ಳ ಜೀವಮಾನವರಂತೆ
ಪುಸಿನುಡಿಯು [೧]ಕುಚಿತ ಕುಹಕಪಶಬ್ದ ಮೊದಲಾಗಿ[೧]
ರಸನೆಯಿಂದುಚ್ಚರಿಸಿ ನುಡಿಯಬಾರದುದೆ ಶರಣಂಗೆ ಲಿಂಗಾಚಾರವು ೮

ಶಶಿಯ ಶೀತಳದಂತೆ ಶಾಂತಿಯನು ತಳೆದೊಪ್ಪಿ
ವಸುಧೆಗವತರಿಸಿದಪ್ರತಿಮ ಗುರುಕರರುಹದ
ಮಿಸುಪ ಮಹಲಿಂಗವನು ಸಮರಸದೊಳಮುಳೈಕ್ಯದೊಳ್ ಧರಿಸಲುಂಟಾದೊಡೆ
ವ್ಯಸನವೇಳೆಂಟು ಮದವಾರರಿಗಳುಂ ಭೂತ
ವಸುಕರಣ[೨]ಗು[೨]ಣಗಳಿಲ್ಲವು ಲಿಂಗಮಯವಾಗಿ
ಜಸವಡೆದು ಲೋಕದೊಳಗಿದ್ದುರ್ಮಿಲ್ಲದ ಸಿಜ್ಜೈಕ್ಯಂಗೆ ಲಿಂಗಾಚಾರವು ೯

ಚಾರುಸತ್ಕ್ರಿಯೆಯು ಸಮ್ಯಕ್ಜ್ಞಾನವಹ ಸದಾ
ಚಾರ ಗುರು ಶಿವ ಚರ ಸುಶೇಷ ಮಹಲಿಂಗವನು
ಶೂರಶ್ರದ್ಧೆಯು ನಿಷ್ಠೆಯವಧಾನವನುಭಾವವಾನಂದ ಸಮರಸದೊಳು
ಧೀರಕರ ಕಕ್ಷವುರ ಶಿರ ವದನವಮಳೈಕ್ಯ
ವಾರು ಸ್ಥಾನದೊಳಿಷ್ಟಲಿಂಗಧಾರಣಕ್ರಮದ
ಮೀರಿದಾಚರಣೆ ಶರಣರ್ಗಲ್ಲದಾ ಹರನಿಗುಂಟಾದೊಡುಸುರು ಮರುಳೇ ೧೦

ಸದಮಲಾತ್ಮಕ ಶರಣಲಿಂಗ ದಂಪತಿಗಳಿಗೆ
ಮುದದಿಂದೆ ಗುರು ಚರ ಸುಭಕ್ತಗಣಮಧ್ಯದೊಳು
ಮದುವೆಯಾದಿಷ್ಟಲಿಂಗವನಗಲದನವರತವಂಗದಲಿ ಧರಿಸಿ ಬಳಿಕ
ಮದಡಮಾನವರಂತೆ ಭೂಮಿಯೊಳು ನೆಲಸಿಪ್ಪರ್
ಅಧಮಭವಿಶೈವ[೩]ದೈವಕ್ಕೆರಗಿ[೩] ವಂದಿಸದೆ
ಹೃದಯದೊಳು[೪]ದೃಢ[೪]ನಿಷ್ಠೆ ಕರಿಗೊಂಡ ಸದ್ಭಕ್ತಗಿಷ್ಟಲಿಂಗಾಚಾರವು ೧೧

---

೧ ಕುಹಕಾಪಶಬ್ದ ಮೊದಲಾದವಂ (ಕ.)
೨ ಗ (ಕ.) ೩ ದೈವಂಗಳಿ (ಕ.) ೪ ವ್ಯಢ (ಕ.)

ಗುದ ಲಿಂಗ ನಾಭಿ ಹೃದ್ಗಳ ಭ್ರುಕುಟಿ ಚಕ್ರಗಳ
[೧]ದ್ವಿದಳ ಷೋಡಶದಳ ದ್ವಾದಶದಳವು ಷಟ್ ಚ[೧]
ತುರ್ದಳ ಮಧ್ಯಚಾರ ಗುರು ಶೈವಚರಶೇಷ ವರಮಹಾಲಿಂಗಂಗಳಾ
ವದನ ಘ್ರಾಣವು ಜಿಹ್ವೆ ಕಣ್ ತ್ವಕ್ಕು ಶ್ರೋತ್ರ ಹೃದ
ಯದ ತೃಪ್ತಿ ಶಬ್ದ ಸ್ಪರ್ಶನ ರೂಪ ರಸ ಗಂಧ
ಮುದದಿ ಷಡ್ವಿಧಲಿಂಗಕರ್ಪಿಸುವ ಭಕ್ತಂಗೆ ಪ್ರಾಣಲಿಂಗಾಚಾರವು ೧೨

ಹೆಪ್ಪಿನೊಳು ಹಾಲಡಗಿದಂತೆಯೊಂದಾನೊಂದು
ನೆಪ್ಪಿನೊಳಗರಿವು ಮರವೆಗಳಡಗಿದಂತೆ ಕಣ್
ಕಪ್ಪಿನೊಳು ಸೂರ್ಯಚಂದ್ರಾಗ್ನಿಪ್ರಕಾಶಂಗಳಡಗಿ ಕಾಣಿಸದಂದದಿ
ಮುಪ್ಪಿನೊಳು ಬಾಲ್ಯಯೌವನವಡಗಿದಂತಿರದೆ
[೨]ಅರ್ಪಿತವಧಾನ ವೊದಲಾದ ಕ್ರಿಯೆಗಳೆಲ್ಲ[೨]
ನಿಷ್ಪತಿಯನೈದಿ ನಿಜವಾದ ಸದ್ಭಕ್ತರಿಗೆ ಭಾವಲಿಂಗಾಚಾರವು ೧೩

ಅಷ್ಟಾವರಣವಿಷ್ಟಲಿಂಗದ ಚಿದಂಗ ಪ್ರ
ತಿಷ್ಠ ಪಂಚಾಚಾರವಿಷ್ಟಲಿಂಗದ ಪ್ರಾಣ
ವಷ್ಟವಿಧವಹ [೩]ಸಕೀಲಗಳ[೩]ಇಷ್ಟಲಿಂಗಕ್ಕೆ ಪ್ರತ್ಯಂಗವೆನಿಸುತಿಹುವು
ಇಷ್ಟೊಂದು ರೂಪವಹ ಲಿಂಗಮುಮನನಿಮಿಷದ
ದೃಷ್ಟಿಯಿಂ ನೋಡ ನೋಡಲು ತಾನು ತಾನಾದ
ನಿಷ್ಠೆ ಸದ್ವೀರಮಾಹೇಶಗಲ್ಲದೆಯೀಶಗುಂಟಾದೊಡುಸುರು ಮರುಳೇ೧೪

ಸೃಷ್ಟಿಯೊಳ್ ಗೋವಿನೊಡಲೊಳಗಮೃತಮುಂಟು ಸಂ
ತುಷ್ಟಿವಡೆದಿಹುದೆಂದು ಮೇಸಿ ನೀರ್ಗುಡಿಸುವುದ
ಬಿಟ್ಟಬಳಿಕಾ ಗೋವು ಜೀವಿಸುವ ಪರಿಯೆಂತು ಮರುಳೆಕೇಳಾ ಪರಿಯೊಳು
ಎಷ್ಟೊಂದು ಜ್ಞಾನವುಳ್ಳವನಾದೊಡಂ ತುದಿಗೆ
ಇಷ್ಟಲಿಂಗಾರ್ಚಕಗೆ ಸರಿಯಲ್ಲವದರಿಂದೆ
ಇಷ್ಟಲಿಂಗಾಚಾರ ಶರಣನತ್ಯಧಿಕನಲ್ಲದೆ ಹರನದೆಂತಧಿಕನು ೧೫

೧ ದ್ವಿದಳ ಷೋಡಶವು ದ್ವಾದಶದಶವು ಷಟ್ಚತುರ್ವಿಂದದಳಕುಂದಳ......(ಗ. ಜ.)
೨ ಅರ್ಪಿತವುಮುಮಪಥಾನಮುಖ್ಯಕ್ರಿಯೆಗಳನೆಲ್ಲ. ೩ ಸಕಲವಿ (ಕ.)

ಭೂಮಿಯನು ಗುರುಲಿಂಗೆ ಮಠವ ಕಟ್ಟಿಸಿಕೊಟ್ಟು
ಕಾಮಿನಿಯ ಲಿಂಗಕ್ಕೆ ಭೋಗಸೌಖ್ಯಕ್ಕಿತ್ತು
ಹೇಮವನು ಜಂಗಮಾರ್ಚನೆಗೆ ಸಲಿಸುತ್ತಿಹುದು ವಿಹಿತವಹುದಂತಲ್ಲದೆ
ಹೇಮಮಂ ಗುರುಲಿಂಗೆ ೧ಚರಕೆ೧ ಕಾಮಿನಿಯನುಂ ಸಲೆ
ಭೂಮಿಯನು ಲಿಂಗಕ್ಕೆ ಕೊಡುವುದಕ್ಕದರಿಂದೆ
ನೇಮದಿಂದವರವರವೊಡೆಯರೊಡವೆಯನು ಕೊಡಲ್ ಭಕ್ತಂಗೆ ಸದಾ
ಚಾರವು ೧೬

ಗುರುಕರುಣವನು ಪಡೆದು ಲಿಂಗಪೂಜೆಯ ಮಾಡಿ
ಚರ ಲಿಂಗವೆಂದೆಂಬ ಸ್ಥಿರಬುದ್ಧಿ ಕರಿಗೊಂಡು
ಹರುಷದಿಂ ೨ಹೊರೆಯೇರಿ ಶರಣಸಂತತಿಗೆಂದು ಷಟ್ಕೃಷಿಯ ವ್ಯಾಪಾರವ೨
ಸರಸದಿಂ ಮಾಡಿ ಸಂಗ್ರಹಿಸಿದರ್ಥವನೆಲ್ಲ
ಗುರು ಲಿಂಗ ಜಂಗಮ ಸುಭಕ್ತಗಣಾತಿಥಿಗಳಿಗೆ
ಪರಶ್ರದ್ಧೆಯಿಂದೆ ದಾಸೋಹವನು ಮಾಡಲದು ಭಕ್ತನ ಸದಾಚಾರವು ೧೭

ಪರಸತಿಗೆ ಪರಧನಕೆ ಪರನಿಂದೆ ಪರದೈವ
ಕೆರಗಿಯನ್ಯರ ಜೀವಹಿಂಸೆಗಳ ಮಾಡುತಿಹ೩
ದುರಿತ ಮಹಪಂಚಪಾತಕವೆಂದು ಗುರುಮುಖದೊಳರಿದವಕ್ಕಿಚ್ಛೈಸದೆ
ಗುರುಕರಾಂಬುಜದೊಳೊಗೆದಿಷ್ಟಮಹಲಿಂಗವನು
ಸರಸಸಂಯೋಗಸಮರಸಭಾವದಿಂದಪ್ಪಿ
ಹೆರಹಿಂಗದಂತಪ್ಪ ನಿಷ್ಠೆ ಸದ್ವೀರಮಾಹೇಶನ ಸದಾಚಾರವು ೧೮

ರೂಪು ರುಚಿ ತೃಪ್ತಿ ತ್ರೈವಿಧ ಪದಾರ್ಥವನು ಚಿದ್
ರೂಪಮಿಷ್ಟ ಪ್ರಾಣ ಭಾವಲಿಂಗಕ್ಕೆಯಾ
ರೋಪಿಸಲ್ಕಾ ರೂಪು ಶುದ್ಧ ರುಚಿ ಸಿದ್ಧ ಸಂತೃಪ್ತಿ ಪ್ರಸಿದ್ಧವಹ ನಿರ್
ಲೇಪ ೪ತ್ರಿವಿಧ ಪ್ರಸಾದವೆ ಏಕದಹ ಚಿತ್ಕಳೆ೪
ಲಾಪ ಪ್ರಸಾದ ಲಿಂಗಾಂಗಭಾಜನಭರಿತ
ವೀ ಪ್ರಸಾದವ ಸಾವಧಾನದಿಂ ಮುಗಿವುದು ಪ್ರಸಾದಿಯ ಸದಾಚಾರವು ೧೯

---

೧ ಜಂಗಮಕೆ (ಕ) ೨ ತುಂಬಿದರ್ಥ ಶರಣಸಂತತಿಗೆಂತು ಬೋಳ್ಕೃಷಿಯ ವ್ಯಾಪಾರವು (ಕ.)
೩ ವುದು (ಕ.) ೪ ವಹ ತ್ರಿವಿಧಪ್ರಸಾದವೇ ಪರಚಿತ್ಕ (ಕ.)

ಕರಪೀಠಲಿಂಗವನು ಹೃದಯಪೀಠದೊಳಿರಿಸಿ
ಹರಣ ಮೊದಲಾದ ದಶವಾಯುಗುಣಗಳ ಕೆಡಿಸಿ-
ಯರಿ-ಮಿತ್ರರಣು-ಮಹತು ದೊರೆ-ಬಡವರಿಹ-ಪರವಸುಖ-ದುಃಖ
ಸರಿಗಂಡು ನಡೆದು ನಡೆದಂತೆ ನುಡಿ ಸಮನಿಸುವ ಸ್ತುತಿ-ನಿಂದೆಯಂ
ಚರಿತಸಂಯುತನಂಗ ಲಿಂಗ ಮನ ಮಂತ್ರವನ-
ವರತ ಲಿಂಗಾನುಭವಗೋಷ್ಠಿಯೊಳಿರೆ ಪ್ರಾಣಲಿಂಗಿಗೆ ಸದಾಚಾರವು ೨೦

ಪರಮಪಂಚಾಕ್ಷರಾತ್ಮಕವೆನಿಸುವಾಚಾರ
ಗುರುವು ಶಿವ ಚರ ಶೇಷ ಪಂಚಲಿಂಗಂಗಳನು
ವರಘ್ರಾಣ ಜಿಹ್ವೆ ನೇತ್ರಂ ತ್ವಕ್ಕು ಶ್ರೋತ್ರ ಪಂಚೇಂದ್ರಿಯದೊಳನುಬಂಧಿಸಿ
ಬರಲುಳ್ಳ ಗಂಧ ರಸ ರೂಪು ಸ್ಪರ್ಶನ ಶಬ್ದ
ವರುಹಿನಿಂದನವರತ ಲಿಂಗಾರ್ಪಿತವ ಮಾಡಿ
ಶರಣಸತಿ ಲಿಂಗಪತಿಯಾಗಿಯಾನಂದಿಪುದು ಶರಣನ ಸದಾಚಾರವು ೨೧

ಶತ್ರುವರ್ಗಗಳಾರು ಮಿತ್ರಬಾಂಧವರಾಗಿ
ಮತ್ಯ್ರರಾರೂರ್ಮಿಗಳು ಹತ್ತೆಸಾರದೆ ಪೋಗಿ
ನಿತ್ಯಲಿಂಗಾರ್ಚನೆಯೊಳಷ್ಟವಿಧ ಪೂಜೆಗಳ ಫಲಕಾಂಕ್ಷೆಯಿಂ ಮಾಡದೆ
ಹತ್ತುರಿವ ಜ್ಯೋತಿ ಕರ್ಪುರವನೊಳಕೊಂಡಂತೆ
ಯುತ್ತಮಚಿದಂಗ ಚಿದ್‌ಘನಲಿಂಗದೊಳಡಗಿ
ಚಿತ್ತ ಪರತತ್ತ್ವದೇಕತ್ವವೆ ಸಮರಸವಾದ್ವೈಕ್ಯನ ಸದಾಚಾರವು ೨೨

ಸುವಿಚಾರಭಕ್ತ ಮಾಹೇಶ ಪ್ರಸಾದಿಯೆ
ಪ್ಪುವ ಪ್ರಾಣಲಿಂಗಿ ಶರಣೈಕ್ಯ ಷಟ್‌ಸ್ಥಲ ಮಾರ್ಗ-
ದವಿರಳಾಚರಣೆವಿಡಿದಣುಮಾತ್ರ ಕೊರತೆ ಬಾರದ ಪರಿಯೊಳಾಚರಿಪುದು
ಅವಧೂತಮಾರ್ಗವಿಡಿದಾಚರಿಸುವಪಶೈವ
ಶಿವನೊಳೀ ವೀರಶೈವಾಚಾರವಿಲ್ಲಾಗಿ
ಭುವನತ್ರಯಂಗಳೊಳು ಶಿವನಿಂದಮಧಿಕ ಭಕ್ತಾದಿ ಷಟ್‌ಸ್ಥಲಬ್ರಹ್ಮಿಯು ೨೩

ಸೃಷ್ಟಿಯೊಳು ಪದ್ಮಾಸನವ ಬಲಿದು ಕುಳಿತುಕೊಂ-
ಡಿಷ್ಟಲಿಂಗಾರ್ಚನೆಯ ಮಾಡುತ್ತಲನಿಮಿಷದ
ದೃಷ್ಟಿ ನೆರೆನಟ್ಟು ಮನಮುಟ್ಟಿ ಭಾವಜ್ಯೋತಿಯಪ್ರತಿಮಸಂಯೋಗದೊಳ್
ನಿಷ್ಠೆ ಕರಿಗೊಂಡು ಲಿಂಗಾಂಗಸಂಯೋಗಿಯ ವಿ-
ಶಿಷ್ಟ ಪ್ರಸಾದವನು ಹಾರೈಸಿಕೊಂಡಿರ್ಪ
ಶ್ರೇಷ್ಠ ಸದ್ಭಕ್ತರವರಾಳೆಂಬುದದೆ ಪ್ರಸಾದಿಯ ಸುಭೃತ್ಯಾಚಾರವು ೨೮

ಲಿಂಗಮೋಹಿಗಳಾದುದಕ್ಕೆ ಕುರುಪಾವುದೆನೆ
ಜಂಗಮವು ಮನೆಗೆ ಬಂದಾಕ್ಷಣವೆ ತಾಂ ಮಾಳ್ಪ
ಲಿಂಗಪೂಜೆಯ ಬಿಟ್ಟು ಜಂಗಮಕೆ ಪೊಡೆಮಟ್ಟು ಪಾದಪೂಜೆಯನು ಮಾಡಿ
ಲಿಂಗಮುಖಜಂಗಮಕೆ ಬೇಡಿದ ಪದಾರ್ಥವನು
ಸಂಗ್ರಹಿಸಿ ಸಂತೃಪ್ತಿವಡಿಸುತಿಹ ಭಕ್ತರಿಗೆ
ಡಿಂಗರಿಗನಾಗಿ ಬಾಳುವೆನೆಂಬ ಪ್ರಾಣಲಿಂಗಿಗೆ ಸುಭೃತ್ಯಾಚಾರವು ೨೯

ಅಂಗವನು ನಿರ್ವಂಚನೆಯೊಳು ಗುರುವಿಂಗಿತ್ತು
ಹೊಂಗಿ ಮನವನು ತಂದು ಲಿಂಗದೊಳು ನೆಲೆಗೊಳಿಸಿ
ಪಿಂಗದಾತ್ಮನ ಜಂಗಮಕೆ ಸಲಿಸಿ ಬಳಿಕ ಗುರುಲಿಂಗ-ಜಂಗಮದೊಳೊಗೆದ
ಮಂಗಳಪ್ರಸಾದವಿಷ್ಟ ಪ್ರಾಣ ಭಾವ ತ್ರೈ-
ಲಿಂಗದಾರೋಗಣೆಯ ಮಾಳ್ಪರಡಿದಾವರೆಗೆ
ಭೃಂಗನಂತೆರಗುತಿಹರಾಳಿನಾಳೆಂಬ ಶರಣಂಗೆ ಭೃತ್ಯಾಚಾರವು ೩೦

ಮುಕ್ತಿಕೋಶಂಗಳೆಂದೆನಿಸಿಕೊಳುತಿರ್ಪ ಸದ್-
ಭಕ್ತ ಗುರು ಲಿಂಗ ಜಂಗಮ ಪ್ರಸಾದವೆ ಪಂಚ-
ವಕ್ತ್ರದಲಿ ಪಂಚಾಕ್ಷರಾತ್ಮ ಕಾಚಾರಾದಿ ಪಂಚಲಿಂಗಂಗಳು ವಿ-
ರಕ್ತಿಯಿಂದವಧರಿಸಿ ಕೊಂಡೆನೆಂಬುವ ಮನದ
ಯುಕ್ತಿ ನಿಷ್ಪತಿಯಾಗಿ ನಿಜವನೊಡಗೊಂಡಿರ್ಪ
ಭಕ್ತರಿಗೆ ತೊತ್ತಾಗಿ ಬಾಳ್ವೆನೆಂಬುದು ನಿಜೈಕ್ಯಂಗೆ ಭೃತ್ಯಾಚಾರವು ೩೧

ಪದುಳದಿಂದಿಂತು ಷಟ್‌ಸ್ಥಲದ ಭೃತ್ಯಾಚಾರ
ಹೃದಯದೊಳು ತಳಿಗೊಂಡು ವೀರಶೈವೋಕ್ತಮದ
ಪದಸೇವೆ ಸಮತೆ ನಿರಹಂಕಾರ ಭಯಮುಳ್ಳ ಶರಣಸಂತತಿಗಳಂತೆ
ಮದನಹರನೆಂದೆಂಬ ಬಲಿಯ ಬಿರುದಂಕ ಶಿವ
ಪದುಳವಾಚಾರವಂತನಲ್ಲದರಿಂದೆ
ಸದುವಿನಯಮುಳ್ಳ ಸದ್ಭಕ್ತರಾ ಹರನಿಂದಮಧಿಕರೈ ಮೂಜಗದೊಳು ೩೨

ಗುದದೊಳೆಸೆವಾಧಾರ ಚಕ್ರಮಧ್ಯದೊಳಿರ್ಪ
ಸದಮಳಾಚಾರಲಿಂಗಕ್ಕೆ ಘ್ರಾಣೇಂದ್ರಿಯದ
ಸದನದಿಂ ಬೇರು ಮರ ಪತ್ರೆ ಪುಷ್ಪವು ಫಲಗಳಿಂತಿವರ ಸದ್ಗಂಧವಂ
ಮುದದಿಂದಮಿತ್ತು ಸಂತುಷ್ಟಿವಡೆದಾ ಲಿಂಗ-
ವದನದಿಂದೊಗೆದ ಶೇಷಪ್ರಸಾದವ ಕೊಂಡೊ-
ಡದಕೆ ಶಿವನಿಂದಧಿಕನೆನಿಸಿಕೊಳುತಿರ್ಪ ಸದ್ಭಕ್ತನ ಶಿವಾಚಾರವು ೩೩

ಆದಿಸ್ವಾಧಿಷ್ಠಾನ ಚಕ್ರಮಧ್ಯದೊಳಿರ್ಪ-
ನಾದಿಗುರುಲಿಂಗಕ್ಕೆ ಜಿಹ್ವೇಂದ್ರಿಯಾಸ್ಯದೊಳು
ಸ್ವಾದುಮೊಗರುಂ ಕಾರವಾಮ್ಲ ಕಹಿ ಲವಣಗೂಡಿಸಿತು
ಸೋದದಿಂದಿತ್ತು ಬಳಿಕಾ ಲಿಂಗದಿಂದುಳಿದು. ಷಡ್ರುಚಿಗಳನು ವಿ-
ಯಾದ ಪ್ರಸಾದವನು ಚಪ್ಪರಿದು ಸಲಿಸುವುದು
ಮಾದೇವತಾರಾಧ್ಯನಿಂದಧಿಕ ವೀರಮಾಹೇಶನ ಶಿವಾಚಾರವು ೩೪

ಓತು ಮಣಿಪೂರಕ ಸುಚಕ್ರಮಧ್ಯದೊಳಿರ್ಪ
ಜಾತಶಿವಲಿಂಗಕ್ಕೆ ನೇತ್ರವೆನಿಪಾಸ್ಯದೊಳ್
ಶ್ವೇತ ಪೀತ ಹರಿತ ಮಾಂಜಿಷ್ಠ ಕಾಪೋತ ಮಾಣಿಕ್ಯ ಸದ್ರೂಪ ಸಂ-
ಪ್ರೀತಿಯಿಂದಿತ್ತು ಬಳಿಕಾ ಲಿಂಗಮುಖದಿ ಸಂ-
ಜಾತ ಚಿದ್ರೂಪ ಪ್ರಸಾದವನು ಭೋಗಿಪುದು
ಭೂತನಾಥಂಗಿಂದಮತ್ಯಧಿಕನೆನಿಪ ಪ್ರಸಾದಿಯ ಶಿವಾಚಾರವು ೩೫

ಖ್ಯಾತಿವಡೆದನಹತ ಸುಚಕ್ರಮಧ್ಯದೊಳಿಹ ಪು-
ನೀತ ಚರಲಿಂಗಕ್ಕೆ ತ್ವಙ್ಮುಖದೊಳನವರತ
ಶೀತೋಷ್ಣ ಮೃದು ಕಠಿಣ ಧಾತು ಸಮನಾದ ಸುಸ್ಪರ್ಶನವ ತನು
ಈ ತೆರದೊಳಿತ್ತು ಬಳಿಕಾ ಲಿಂಗಮುಖದ ಚಿಜ್- ಸೋಂಕದೆ
ಜ್ಯೋತಿಸ್ವರೂಪಪ್ರಸಾದವನು ಭೋಗಿಸುವ
ನೀತಿಯಿದು ವೀರಶೈವ ಪ್ರಮಥರೊಳ್ ಪ್ರಾಣಲಿಂಗಿಯ ಶಿವಾಚಾರವು ೩೬

ಮತ್ತೆ ಕೇಳಲೊ ವಿಶುದ್ಧಿಯ ಚಕ್ರಮಧ್ಯದೊಳು
ತಥ್ಯವಾಗಿಹ ಶೇಷಲಿಂಗಕ್ಕೆ ಶ್ರೋತ್ರಮುಖ-
ದತ್ತ ಭೇರಿ ಮೃದಂಗ ಕಹಳೆ ಘಂಟೆಯು ತಾಳ ವೇಣು ಸಂಗೀತ ಶಬ್ದ-
ವಿತ್ತು ಬಳಿಕಾ ಲಿಂಗದಿಂದುಳಿಮೆಯಾದ ಬಹು
ಸತ್ಯಪ್ರಸಾದವನು ಬಿಡದೆ ಭೋಗಿಸುತೆ ಸನ್-
ಮರ್ತ್ಯಕೈಲಾಸವಾಸಿಗಳಾಗಿ ಶೋಭಿಪುದು ಶರಣನ ಶಿವಾಚಾರವು ೩೭

ಘನತರದೊಳೆಸೆವಾಜ್ಞೆಚಕ್ರಮಧ್ಯದೊಳಿರ್ಪ
ಚಿನುಮಯಾತ್ಮಕ ಮಹಾಲಿಂಗಕ್ಕೆ ಹೃದಯಮುಖ-
ದನುವರಿದು ಗಂಧ ರಸ ರೂಪು ಸ್ಪರ್ಶನ ಶಬ್ದ ತೃಪ್ತಿ ಷಡ್ವಿಧ ಪದಾರ್ಥ
ವನು ಸಮರ್ಪಿಸಿ ಬಳಿಕಲಾ ಮಹಾಲಿಂಗದಿಂ-
ದನುಪಮಪ್ರಸಾದವನು ಪಡೆದು ಸಂಪ್ರೀತಿಯಿಂ-
ದನವರತಮನುಭವಿಸುತಿರ್ಪುದದು ಲಿಂಗಾಂಗದೈಕ್ಯನ ಶಿವಾಚಾರವು ೩೮

ಅನಘ ಸದ್ಭಕ್ತ ಮಾಹೇಶ ಪ್ರಸಾದಿ ಚಿದ್-
ಘನಪ್ರಾಣಲಿಂಗಿ ಶರಣೈಕ್ಯ ಷಟ್‌ಸ್ಥಲಬ್ರಹ್ಮ-
ದನುಭವದ ನುಡಿಯಂತೆ ನಡೆಯುತಿಹ ವೀರಶೈವೋತ್ತಮಶಿವಾಚಾರವು
ಧನಪತಿಗೆ ಸಖನಾಗಿ ಮನೆಮನೆಯ ತಿರಿದುಂಬು-
ತನವರತ ಶಿವನೆನಿಸಿಕೊಂಬವನೊಳಿಲ್ಲಾಗಿ
ಚಿನುಮಯಾತ್ಮಕ ಭಕ್ತನಲ್ಲದಪಶೈವನೆಂದೆನಿಪ ಶಿವನೆಂತಧಿಕನು ೩೯

ಭಕ್ತಿಪಿಡಿದಲ್ಲಿ ಸದ್ಭಕ್ತನೆಂದೆನಿಸಿದ ವಿ-
ರಕ್ತಿವಿಡಿದಲ್ಲಿ ಮಾಹೇಶನೆಂದೆನಿಸಿದನು
ಮುಕ್ತಿಸ್ವರೂಪರುಭಯತರು ಭೃತ್ಯಕಾಂತಿಸ್ವಸ್ವಾಮಿದಿಂತೇಕವಾದ
ಭಕ್ತಮಾಹೇಶರಂಗವೆ ಲಿಂಗಮಯವೆಂಬ
ಯುಕ್ತಿಯನು ತಿಳಿದು ಶಿವ ನುಡಿದಾಗಮವ ಕೇಳು
ಭಕ್ತದೇಹಿಕದೇವನೆಂಬ ಶ್ರುತಿಯನವರತ ಸಾರುತಿದೆ ಮೂಜಗದೊಳು ೪೦

ಗುರುಕರಸುಜಾತರೆಂದೆನಿಸುತಿಹ ಸದ್ಭಕ್ತ-
ಶರಣರೊಳ್ ಪೂರ್ವಕುಲ ಗೋತ್ರ ಜಾತ್ಯಾದಿ ಮದ-
ನರಸಿ ನೋಡದೆ ಭಕ್ತ ಜಂಗಮವೆ ಘನವೆಂದು ನೆರೆನಂಬಿ ಬಳಿಕವರ
ಚರಣಸೇವೆಯನು ಮನ ವಚನ ಕಾಯಕವು ತ್ರಿ-
ಕರಣಶುದ್ಧತೆಯಿಂದೆ ಮಾಡಿ ಭಕ್ತಿಯೊಳವರ
ಕರುಣಪ್ರಸಾದವನು ಭೋಗಿಸುವ ಪ್ರಮಥರ ಶಿವಾಚಾರಕೆಣೆಗಾಣೆನು ೪೧

ಪರಮಲಿಂಗಾಚಾರ ವರಸದಾಚಾರ ಸಚ್-
ಚರಿತಭೃತ್ಯಾಚಾರ ನಿಷ್ಕಳಶಿವಾಚಾರ
ಪರತರಗಣಾಚಾರಗೂಡಿ ಪ್ರಮಥರ ಪ್ರಾಣಿಸಿದ ಪಂಚಾಚಾರವಂ
ದುರಿತ ದುರ್ಮದವು ತಲೆಗೇರಿದಜ್ಞಾನಿಗಳು
ಜರಿದು ಝುಂಕಿಸಿ ನೀತಿಗಳೆದು ದುರ್ನುಡಿಯಿಂದೆ
ಬರಿ ದೂಷಣೆಯ ಮಾಡಲದಕೆ ಕಿವಿಗೊಡದಿಹುದೆ ಭಕ್ತನ ಗಣಾಚಾರವು ೪೩

ಸತ್ಯ ಸತ್ಕ್ರಿಯೆಯಿಷ್ಟವದುವೆ ದೀಕ್ಷಾಗುರುವು
ಚಿತ್ತದರಿವಿನ ಮಹಾಮಂತ್ರವೇ ಶಿಕ್ಷೆಗುರು.
ವೃತ್ತಮಾಂಗದ ಗೊತ್ತಿನೊಳಗಣಪರಬ್ರಹ್ಮದಿರವೆ ತಾಂ ಮೋಕ್ಷಗುರುವು
ಮತ್ತೆ ಕೇಳಿಂತು ಸದ್ಗುರುವರೇಣ್ಯನ ಕಂಡು
ಮರ್ತ್ಯಲೋಕದ ಮನುಜನೆಂದೊದರಿ ಬಗುಳುತಿಹ
ಕತ್ತೆ ಶುನಿಮನುಜರಪಶಬ್ದ ಪಾಲಿಸದುದೆ ಮಹೇಶನ ಗಣಾಚಾರವು ೪೪

ಅಂಗವೇ ಲಿಂಗ ಲಿಂಗವನುವೊಳಕೊಂಡಿರ್ಪ
ಕಂಗಳೇ ಪ್ರಾಣ ಪ್ರಾಣವನುವೊಳಕೊಂಡ ಭಾ-
ವಂಗಳೆಲ್ಲವು ಲಿಂಗಮಯವಾಗಿ ತಾನು ತಾನಾದ ನಿರುಪಮಚಿದ್‌ಘನ-
ಲಿಂಗಕ್ಕೆ ಶಿಲೆಯ ಭಾವವನು ಕಲ್ಪಿಸಿ ನುಡಿವ
ಮಂಗ ದುರ್ಜನರ ದೂಷಣೆಯ ದುಃಶಬ್ದವನು
ಅಂಗವಿಸದನವರತ ನಿಷ್ಠೆಯಿಂದಿರ್ಪುದು ಪ್ರಸಾದಿಯ ಗಣಾಚಾರವು ೪೪

ಜಂಗಮವು ತಾನು ಸದ್‌ಭಕ್ತಿವಿಡಿಯಲ್ಕೆ ಸ್ವಯ
ಜಂಗಮವು ಭಕ್ತಿ ಸುಜ್ಞಾನವಿಡಿಯಲ್ಕೆ ಪರ
ಜಂಗಮವು ಸದ್‌ಭಕ್ತಿ ಸುಜ್ಞಾನ ವೈರಾಗ್ಯವಿಡಿಯಲ್ಕೆ ಪರಕೆ ಪರವು
ಹಿಂಗಿದಿಂತಪ್ಪ ಸ್ವಯ ಚರ ಪರ ಸುಜಂಗಮದೊ-
ಳಿಂಗಿತವನರಿಯದತಿಗಳೆದು ನಿಂದಿಸುತಿರ್ಪ
ಭಂಗಿತರ ಶಬ್ದವ ವಿಡಂಬಿಸುವುದೇ ಪ್ರಾಣಲಿಂಗಿಯ ಗಣಾಚಾರವು ೪೫

ಶ್ರೇಷ್ಠಸದ್‌ಗುರುಮುಖದೊಳೂಗೆದ ಶುದ್ಧಪ್ರಸಾ-
ದಿಷ್ಟಲಿಂಗದೊಳೊಗೆದ ಸಿದ್ಧಪ್ರಸಾದವು ವಿ-
ಶಿಷ್ಟಜಂಗಮದ ವಕ್ತ್ರದೊಳೊಗೆದ ಸುಪ್ರಸಿದ್ಧ ಪ್ರಸಾದತ್ರಯವನು-
ಚ್ಛಿಷ್ಠವೆನುತಲಿ ಹಳಿದು ನಿಂದಿಸುತೆ ಗುಡಿಯ ಪ್ರ-
ತಿಷ್ಠ ಭವಿಶೈವದೈವಂಗಳೆಂಜಲ ತಿಂಬ
ಭ್ರಷ್ಟಮಾನವರ ಮಸ್ತಕಶೂಲವಾಗಿಹುದು ಶರಣನ ಗಣಾಚಾರವು ೪೬

ಪರಮಪಂಚಾಚಾರ ಗುರುವಿನೊಳಗೈಕ್ಯ ಸದ್-
ಗುರು ಲಿಂಗದೊಳಗೈಕ್ಯ ಲಿಂಗ ಜಂಗಮದ ಶ್ರೀ-
ಚರಣದೊಳಗೈಕ್ಯ ಜಂಗಮ ಪ್ರಸಾದದೊಳೈಕ್ಯ ಶೇಷ ಭಕ್ತನೊಳೈಕ್ಯವು
ಧರಣಿಯೊಳಗಿಂತಪ್ಪ ಪರಮಸದ್‌ಭಕ್ತರಿಗೆ
ನರ ಮನುಜನೆಂದು ಕಲ್ಪಿಸಿ ಬಗುಳುತಿರ್ಪ ಪಾ-
ಮರಶ್ವಾನಮನುಜರದೆದಲ್ಲಣವದಾಗಿಹುದದೈಕ್ಯನ ಗಣಾಚಾರವು ೪೭

ಸ್ಫುರಿತವಿಲ್ಲದ ಭಕ್ತ ಚರಿತವಿಲ್ಲದ ಮಹೇ-
ಶ್ವರ ಶರಿರವಿಲ್ಲದಚ್ಛಪ್ರಸಾದಿಯು ಹರಣ-
ವಿರಹಿತಸುಲಿಂಗಿ ದುಷ್ಕರುಣವಿಲ್ಲದ ಶರಣ ಮರಣವಿಲ್ಲದನೈಕ್ಯನು
ಪರತತ್ತ್ವಮೂರ್ತಿ ಷಟ್‌ಸ್ಥಲಬ್ರಹ್ಮಿಯಾಗಿಯೆ-
ಚರಿಸುತಿಹ ಪರಮಪಂಚಾಚಾರವರ್ತನಾ-
ಚರಣೆ ಶ್ರೀವೀರಶೈವಾಚಾರಸದ್ಭಕ್ತಗಲ್ಲದಪಶೈವಗುಂಟೆ ೪೮

ಅಷ್ಟಾವರಣವಂಗವಾಗಿ ಪಂಚಾಚಾರ-
ದಿಷ್ಟಲಿಂಗವೆ ಪ್ರಾಣವಾಗಿ ಲಿಂಗಾಂಗದ ವಿ-
ಶಿಷ್ಟಶ್ರೀವೀರಶೈವಾಚಾರಮಾರ್ಗದೊಳ್ ನಡೆಯು ನಡೆದಂತೆ ನುಡಿದು
ನಿಷ್ಠೆಯಿಂದದಿಗೆರಗಿ ಬಂದ ಸದ್ಭಕ್ತರಿಗ-
ಭೀಷ್ಟಸಿದ್ಧಿಯನಿತ್ತು ಪಾಲನೆಯ ಮಾಡುತಿಹ
ಶ್ರೇಷ್ಠ ಷಟ್‌ಸ್ಥಲದೀಶ ಸಾರ್ವಭೌಮನೆ ಚೆನ್ನವೀರ ಮದ್ಗುರು
ಜಯಜಯಜಯಾ ೪೯

ಇಂತೀ ಷಟ್‌ಸ್ಥಲ ಸಿರಾಭಾರಿ ವೀರಶೈವ ಸಿದ್ಧಾಂತದೊಳ್
ಪಂಚಾಚಾರಂ ನಾಮ
ದ್ವಿತೀಯ ಪ್ರಕರಣಂ
ಸಮಾಪ್ತಂ

ಶ್ರೀ ಚೆನ್ನ ವೀರಪ್ರಭವೇ ನಮಃ

# ಧರ್ಮಾಚಾರ ಪ್ರಕರಣಂ

**ಸೂಚನೆ :** ಪರಮಶ್ರೀವೀರಶೈವಾಚಾರ ಸದ್‌ಭಕ್ತ
ಶರಣರಿಗೆ ಪರಿಭವಗಳುಂಟವರು ನರರೆಂಬ
ಮರುಳೆ ನೀಂ ಕೇಳ್ ಶಿವನಿಗತ್ಯಧಿಕ ಸದ್‌ಭಕ್ತ ಶರಣಜನರಹುದೆಂಬುದ

ಜಂಗಮವೆ ಪರಮಸುಜ್ಞಾನ ಪ್ರಕಾಶಾಂಗ
ಜಂಗಮವೆ ನಿರುತ ಸತ್‌ಕ್ರಿಯೆಯು ಜ್ಯೋತಿರ್‌ಲಿಂಗ
ಜಂಗಮವೆ ಕರದಿಷ್ಟಲಿಂಗವನಿಮಿಷಕಂಗಳುಭಯಕೂಡಲಸಂಗನು
ಜಂಗಮವೆ ಪರತತ್ತ್ವಮೂರ್ತಿ ಮಹಿಮೋತ್ತುಂಗ
ಜಂಗಮವೆ ಶರಣಹೃನ್‌ಮಂದಿರವು ಹೆರಹಿಂಗ
ಜಂಗಮದ ಶ್ರೀಪಾದಪದ್ಮಗಂಧಕ್ಕೆ ಮನ್‌ಮಾನಸವೆ ಚಿದ್‌ಭೃಂಗವು ೧

ಜಾತಿ ಜನನೋಚ್ಛಿಷ್ಟ ಪ್ರೇತವು ರಜಸ್ಸೈದು
ಸೂತಕದ ಸೀಮೆ ಮೀರೆಯು ಮುಟ್ಟದಿರ್ಪ ಪೌ-
ನೀತ ಪಂಚಾಚಾರವರ್ತನೆಯೊಳಿಹುದು ಭಕ್ತಂಗೆ ಧರ್ಮಾಚಾರವು
ಸೂತಕಗಳೆಂಬ ಪಾತಕದೊಳಗೆ ಮುಳುಗಿರ್ಪ
ಜಾತಿ ಹದಿನೆಂಟು ನೂರೊಂದು ಕುಲದಲ್ಲಿಯವ-
ಧೂತಮಾರ್ಗದೊಳು ಕೂಡುಂಡು ಬಾಳುತ್ತಿರ್ಪಶಿವನಿಗಾವಾಚಾರವು ೨

ಅಷ್ಟಾಂಗಯೋಗದಿಂದನವರತ ಸದ್‌ಭಕ್ತ
ಕಷ್ಟಬಡಬಾರದೆಂದಿಷ್ಟಲಿಂಗವನಿತ್ತ
ಶ್ರೇಷ್ಠಸದ್‌ಗುರುಸೇವೆಮಾಳ್ಪ ಮಾಹೇಶನಿಗೆ ನಿತ್ಯ ಧರ್ಮಾಚಾರವು
ಧೃಷ್ಟತನದಿಂದೆ ಸಾವಿರ ತೋಳ ಕಳಕೊಂಡ
ಭೃಷ್ಟ ಬಾಣಾಸುರನ ದಾರವಟ್ಟಿಪ ಕಾಯ್ದು
ಸೃಷ್ಟಿಯೊಳು ಶಿವ ಕರ್ತನೆನಿಸಿ ಭೃತ್ಯನ ಸೇವೆ ಮಾಳ್ಪುದಾವಾಚಾರವು ೩

ತ್ಯಾಗ ಭೋಗವು ಯೋಗಮಾರ್ಗದಿಂ ತನುತ್ರಯವ
ನೀಗಿದಿಷ್ಟಪ್ರಾಣ ಭಾವ ತ್ರೈಲಿಂಗವನು
ಶ್ರೀಗುರುಪಿಸೊಲುಮೆಯಿಂ ಧರಿಸಿಕೊಂಡಿಹುದು ಪ್ರಸಾದಿ ಧರ್ಮಾ
ಆಗಮದೊಳಪತ್ಯೈವಪತಿಗಳಿದ ಬಳಿಕ ಭೂ- ಚಾರವು
ಭಾಗದೊಳ್ ವೀರಶೈವೋತ್ತಮೋತ್ತಮವೆಂದು
ನಾಗಚರ್ಮವನುಟ್ಟು ನಾಗಭೂಷಣದೊಟ್ಟ ಶಿವನಿಗಾಪಾಚಾರವು ೪

ತಿಂಗಳನ ಶಾಂತಿಷೋಡಶಕಳಾಭರಿತ ನಿಜ-
ಜಂಗಮವೆ ಮತ್ಪ್ರಾಣಕಾಂತನೆಂದನವರತ
ದಿಂಗರಿಗನಾಗಿ ಸತ್ಕರಿಸುತಿಹ ಪ್ರಾಣಲಿಂಗಿಯು ಸುಧರ್ಮಾಚಾರವು
ಬಿಂಗದೊಲು ತನ್ನ ಸೇವಕನ ಹಡಪವ ಹೊತ್ತು
ಸಂಗ್ರಹಿಸಿ ತಂದು ಪದಿಹೊನ್ನಳೆದು ಕೊಟ್ಟವೆ(-
ಶ್ಯಾಂಗನೆಯನೊಲಿಸಿ ಕೊಡುವುದಕೆ ಕುಂಟಣಿಯಾದ ಶಿವನಿಗಾಪಾಚಾರವು
೫

ಪರಮಸದ್ಭಕ್ತ ಸದ್ವೀರಮಾಹೇಶ್ವರರ
ಚರಣಜಲಸುಪ್ರಸಾದವನು ಬಿಡದನವರತ
ಕರದಿಷ್ಟಲಿಂಗಸಹಿತವೆ ಭೋಗಿಸುವುದು ಶರಣಂಗೆ ಧರ್ಮಾಚಾರವು
ಹರ ತಾನು ಸರಸಿಜೋದ್ಭವನೂರ್ಧ್ವಶಿರಸುಮಂ
ಕರದಲ್ಲಿ ಪಿಡಿದುಕೊಂಡನವರತ ಮನೆಮನೆಯ
ತಿರಿದು ತತ್ಪಾತ್ರೆಯೊಳಗುಂಡುಂಡು ಮಸಣವನು ಕಾಪ್ವದಾಪಾಚಾರವು
೬

ವರಸದಾಚಾರ ಗುರು ಲಿಂಗ ಜಂಗಮ ಶೇಷ-
ದಿರವೆ ಮತ್ಕರದಿಷ್ಟಲಿಂಗವೆಂದನವರತ
ಸರಸಸಂಯೋಗಸಮರತಿಯಿಂದಮಿರ್ಪುದೈಕ್ಯಂಗೆ ಧರ್ಮಾಚಾರವು
ಧರೆಯೊಳಿಹ ಗಾರುಡಿಗನಂತೊರ್ಮೆ ಶಬರ ನರ
ಸುರ ಕುವರ ದೊರೆ ಬಡವ ಭವಿ ಭಕ್ತವೇಷವನು
ಮರಮರಳಿ ಕ್ಷಣಕೊಂದು ರೂಪುದೋರಡಗುವುದು ಶಿವನಿಗಾಚಾರವು ೭

ನೇಮದಿಂ ತ್ರಿಕಾಲಲಿಂಗಪೂಜೆಯ ಮಾಡಿ-
ಯಾ ಮಹಾಲಿಂಗ ತನ್ಮುಖವೆನಿಪ ಜಂಗಮಕೆ
ಪ್ರೇಮದಿಂ ಸತ್ಕಾಯಕವ ಮಾಡಿ ತಂದು ದಾಸೋಹವನು ಮಾಡುತಿಹ ನಿಃ
ಸೀಮ ಸದ್ಭಕ್ತನಂಗವೆ ಪರಮಕೈಲಾಸ-
ವಾ ಮಹಾತ್ಮನ ಲೋಚನವೆ ಮಹಾಮಂದಿರವು
ವಾಮಕರಪೀಠಸಿಂಹಾಸನವದಲ್ಲಿರ್ಪ ಲಿಂಗವೆ ಪರಬ್ರಹ್ಮವು ೮

ಭಕ್ತರಾಚರಿಸುತಿಹ ವೀರಶೈವಾಚಾರ
ಯುಕ್ತಿಚಾರಿತ್ರವನು ಕಂಡು ಶಿವ ಸಕಲಾಗ-
ಮೋಕ್ತಶ್ರುತಿವಾಕ್ಯಂಗಳನು ಪುರಾತನರ ನಡೆಗಂಡು ನುಡಿದಿಹನಲ್ಲದೆ
ಭಕ್ತರತಿವೀರಶೈವರು ಶೈವ ನುಡಿದಾಗ-
ಮೋಕ್ತಿವಿಡಿದಾಚರಿಸುತಿರ್ಪರೆಂಬುದು ಸಟೆಯು
ಭಕ್ತಿಯಿಂದಲ್ಲದಾಗಮದಿಂದೆ ಮುಕ್ತಿಯಿಲ್ಲದರಿಂದೆ ಭಕ್ತನಧಿಕಂ ೯

ಭಕ್ತಿಯಿಲ್ಲದ ಗುರುವು ನರನಿಂದೆ ಕರಕಷ್ಟ
ಭಕ್ತಿಯಿಲ್ಲದ ಲಿಂಗ ಶಿಲೆಯಿಂದಮತಿಕಠಿಣ
ಭಕ್ತಿಯಿಲ್ಲದ ಜಂಗಮವು ಮನುಜನಂತೆ ಜಡಜೀವಿಯೆಂದೆನಿಸುತಿಹನು
ಭಕ್ತಿಯಿಲ್ಲದ ಪಾದತೀರ್ಥ ಜಡನೀರಹುದು
ಭಕ್ತಿಯಿಲ್ಲದ ಪ್ರಸಾದವೆಯೆನ್ನವೆನಿಸುವುದು
ಭಕ್ತಿಯಿಲ್ಲದ ಮೇಲೆ ಮುಕ್ತಿಗಾಸ್ಪದವಿಲ್ಲವಾಗಿ ಸದ್ಭಕ್ತನಧಿಕಂ ೧೦

ಜ್ಯೋತಿಯು ಪ್ರಕಾಶಕ್ಕೆ ತೈಲವೇ ಜೀವನವು
ಪ್ರೀತಿಯುಹ ಷಡ್ರುಚಿಗೆ ಲವಣವೇ ಕಾರಣವು
ಮಾತು ಮನಸಿಂಗಾತ್ಮ ಜೀವಾಳವಾತ್ಮಗನ್ನದ ರಸವೇ ಜೀವಾಳವು
ಭೂತಳದ ಬೆಳೆದ ಬೆಳೆಗಳಿಗೆ ಮಳೆ ಜೀವನವ-
ದೀ ತೆರದೊಳಿಂತವಕೆ ಜೀವನಗಳಾದಂತೆ-
ಯೋತು ಗುರು ಲಿಂಗ ಜಂಗಮ ಪ್ರಸಾದಕ್ಕೆ ಸದ್ಭಕ್ತನೇ ಜೀವನವಲಾ ೧೧

ಪರಶಿವಾತ್ಮನಿಂದಮಹೇಶ್ವರೀಶ್ವರನಿಂದೆ
ಸ್ಫುರಿತರುದ್ರನು ರುದ್ರನಿಂದೆ ಹರಿ ಹರಿಯಿಂದೆ
ವಿರುತಪಜನಜನಿಂದೆ ನರಲೋಕಮುತ್ಪತ್ತಿಯಾಗಲ್ಕೆಘೋರಸೃಷ್ಟಿಯು
ಪರಾಪಸಿಗಧಿಕ ಗುರು ಗುರುವಿಗಿಮ್ಮಡಿ ಲಿಂಗ
ಗುರುಲಿಂಗವೆರಡರ ಸಾಕ್ಷಿತನ್ನ ಜಂಗಮವು
ಪರಿಪೂರ್ಣಜಂಗಮದ ಚಿತ್ಕಳೆಯು ಸದ್ಭಕ್ತನಯುದಯಂದೂರ್ಧ್ವಸೃಷ್ಟಿ ೧೩

ನಿರುಪಮಸಾಧ್ಯಮುಪರಬ್ರಹ್ಮನಿಜವಿರವೆ ತಾಂ
ಗುರು ಲಿಂಗ ಜಂಗಮ ಸುತೀರ್ಥ ಪ್ರಸಾದ ಪಾ.
ಪರಭಸಿತ ರುದ್ರಾಕ್ಷಿ ಷಣ್ಮಂತ್ರವೆನಿಸುವಷ್ಟಾವರಣ ಶರಣಸಂಗಂ
ಧರೆ ಜಲಾಗ್ನಿಯು ಮರುತ ನಭವಾತ್ಮ ತರಣಿ ಶಶಿ
ಪರಿಕಿಸಲ್ಕಷ್ಟತನುಮೂರ್ತಿ ಹರನೆನಿಸುತಿಹ
ಹರನ ತನು ಜಡ ಶರಣಸಂಗವಜಡವಿರ್ದುದೊಳಗಧಿಕರಾರಿದ ಪರಿಕಿಸಾ ೧೪

ಶರಣನಿಹ ಮರ್ತ್ಯವನು ಹರನ ಕೈಲಾಸವನು
ಒಂದು ಕಿರಿದಿನ ಹೂಣಿಯಿಂದೆ ಪ್ರಮಥರ್ಗೂಡಿ
ಪರಿಕಿಸಲ್ಬೇಕೆಂದು ನವಸೂತ್ರ ಧರ್ಮಚಿಂತಾಲಿನಿಂ ತೂಗಲೊಡನೆ
ಶರಣನಿಹ ಮರ್ತ್ಯವೀ ಧರೆಯು ಬಿಟ್ಟೇಳದಿರೆ
ಹರನ ಕೈಲಾಸ ಮೇಲಕೆ ಪೋದುದದರಿಂದೆ
ಧರೆಗೆನ್ನ ಕೈಲಾಸ ಸರಿಯಾಗಲಿಲ್ಲೆಂಬ ವಾಂಛೆಯಿಂದಾಗ ಶಿವನು ೧೫

ಧರೆಯ ಸೃಷ್ಟಿಸುವಂದು ಮೊದಲಿಂದು ಕಡೆಯಾಗಿ
ದುರಿತಮಹಪಂಚಪಾತಕ ದೋಷದಿಂದೆ ಯಮ.
ಪುರದೊಳಿಪ್ಪತ್ತೆಂಟುಕೋಟಿ ನಾಯಕನರಕದೊಳಗಿರ್ದ ಪ್ರಾಣಿಗಳನು
ತ್ವರಿತದಿಂ ಸಾನಂದಗಣನ ಮುಖವಚನದಿಂ
ಹರನು ಕರತರವೇಳ್ವನೆಂದು ನರಕಾಂಶಿಗಳ
ಕರೆದು ಕೈಲಾಸವನು ತುಂಬಿತೂಕವನೋಡಲದಕೆ ಸರಿಬಾರದಿರಲು ೧೬

ಪಂಚಮುಖ ದಶಭುಜಗಳನಲಾಕ್ಷಿಗಳುಳಿದು ಪ್ರ-
ಪಂಚಭಾವದ ಕಪಟವೇಷಜಂಗಮನಾಗಿ
ಕಾಂಚಿಪುರದೇಳುಕೇರಿಯ ಮಧ್ಯಮಂದಿರದ ಸಿರಿಯಾಳಚಂಗಳೆಯರ
ಮುಂಚೆ ಪುಟ್ಟಿದ ಮಗನ ಕುತ್ತಿಗೆಯ ಕೊಯ್ಸಿ ಬಹು-
ವಂಚನೆಯೊಳಾ ಮಾಂಸಭಕ್ಷಣೆಯ ಮಾಡಲ್ಕೆ
ವ್ಲೇಂಥೆಯಾಚಾರವನು ವೀರಶೈವೋತ್ತಮ ಹಲಾಯುಧರು ಕೇಳಿ ಬಳಿಕ ೧೬

ಕೊಂದು ಬಾಣಸವ ಮಾಡಿದವನಾತ್ಮದ್ರೋಹಿ
ತಿಂದೊಡಲ ಹೊರೆದುಕೊಂಡವನೆ ಭಕ್ತದ್ರೋಹಿ
ಎಂದಿರ್ವರೇಳುಕೇರಿಗಳೆಲ್ಲ ಹೊರಗೆನಲ್ಕಾ ನೆವದೊಳಾಗ ಶಿವನು
ಕುಂದಿಲ್ಲದೇಳುಕೇರಿಗಳ ಕೈಲಾಸಕ್ಕೆ
ತಂದು ತೂಕವ ಮಾಡಲದಕೆ ಸರಿಬಾರದಿರ-
ಲಂದು ಮೊದಲಿಂದು ಕಡೆಯಾಗಿ ಶಿವ ಮರ್ತ್ಯಕ್ಕೆ ಮೋರೆದೋರದೆ
ಪೋದನು ೧೭

ಅಣಿಮಾದಿಯಷ್ಟಸಿದ್ಧಿಗಳ ಮಹಿಮೆಗಳಿಂದೆ
ಮಣಿದು ಬಂದಜಹರಿ ಸುರಾಸುರರ ಪಾಲಿಸುತೆ
ಬಣಿಸುವಗಣಿತ ಮಹಾಮಹಿಮೆಗಳ ಮೆರೆದು ತೋರುವ ಹರನ-
ಅಣಿಮಾದಿಯಷ್ಟಸಿದ್ಧಿಯ ತೃಣಕೆ ಕಡೆನುಡಿದು ದೇನಧಿಕನೋ
ಪ್ರಣವಷಣ್ಮಂತ್ರಕರದಿಷ್ಟಸಿದ್ಧಿಯ ಪಡೆದು-
ವೆಣಿಕೆಹಾಗದ ಕಾಯಕದೊಳು ದಾಸೋಹವನು ಮಾಳ್ಪ ಸದ್ಭಕ್ತನಧಿಕ
೧೮

ನರಬೊಂಬೆಗಳಿಗೆ ಮಾಯಾಸೂತ್ರವನು ರಚಿಸಿ
ಹರನು ತಾಂ ಪಿಡಿದು ಮರವೆಯ ಪರದೆಯೊಳು ನಿಂದು
ಧರಣಿಯೊಳು ಪುಣ್ಯಪಾಪಗಳೆಂಬ ತಾಳಮೇಳಂಗಳಿಂದಾಡಿಸುವನು
ಪರಮಸ್ವತಂತ್ರರೀ ಪರತಂತ್ರಬೊಂಬೆಗಳ
ಪರಿಪರಿಯ ಕುಟಿಲನಟನಾಟಕವ ಪರಿಕಿಸುತೆ
ಹರನು ಬಹುತಂತ್ರಪ್ರವೀಣನೆಂದತಿ ಮೆಚ್ಚಿ ಶರಣರುಚಿತವನೀವರು ೧೯

ಸುಲಭಶ್ರೀವೀರಶೈವಾಚಾರಸದ್ಭಕ್ತ
ಚೆಲುವ ಚಿದ್ಭಸಿತ ರುದ್ರಾಕ್ಷಿಮಾಲೆಯ ಧರಿಸಿ
ಯೊಲಿದಿಷ್ಟಲಿಂಗಪೂಜೆಯ ಜಂಗಮಾರ್ಚನೆಯ ಮಾಡುತಿಹ ತತ್ಕಾಲದಿ
ಪುಲಿದೊವಲನುಟ್ಟು ಗಜಚರ್ಮವಂಗದೆ ಪೊದ್ದು
ವೆಲುಮಾಲೆ ರುಂಡಮಾಲೆಗಳ ಕೊರಲೊಳ್ ಧರಿಸಿ
ತಲೆಯೋಡ ವಿಡಿದು ಬರಲಪಶೈವನಾದ ಶಿವನೊಳ್ಕೊಂಬ ಪರಿಯದೆಂತೋ
೨೦

ಅಂಗದೊಳು ಪರಮಪಂಚಾಚಾರ ಸತ್ಕ್ರಿಯೆಗ
ಲಿಂಗವನು ಧರಿಸಿರ್ಪ ಸದ್ಭಕ್ತದಾಸೋಹಿ
ಯಂಗಳವೆ ಕೈಲಾಸವೆಂಬ ಶ್ರುತಿಯುಂಟಾಗಿ ಭಕ್ತನಪ್ಪಿತಿರುತಿಪನು
ಕಂಗಳತ್ರಯದ ಮಂದನಂಗಳೈದುಳ್ಳ ಧವ
ಳಾಂಗ ಶಿವನಾದೊಡೆಯು ಲಿಂಗವೊಂದಿಲ್ಲದಿರ
ಲಂಗವಿಸಲೊಲ್ಲರವನಂಗಭವಿಯೆಂದನಘಲಿಂಗಾಂಗಸದ್ಭಕ್ತರು ೨೧

ಅಂಗವಲ್ಲಭನಲ್ಲದಿನ್ನೊರ್ವ ಚೆಲುವ ಪುರು
ಷಂಗೆ ರತಿಮನಗುಡದ ಪತಿವ್ರತಾಂಗನೆಯಂತೆ
ಮಂಗಳವಿವಾಹವಾದಿಷ್ಟಲಿಂಗಪ್ರಾಣ ವಲ್ಲಭಗೆ ಶರಣಸತಿಯಾ
ಲಿಂಗರತಿಯಿಂದೆ ಲಿಂಗವನಪ್ಪಿ ಸರ್ವಾಂಗ
ಲಿಂಗಮಯವಾಗಿ ತನಗನ್ಯನಾದುಮೆವರಗೆ
ಕಂಗಳು ಕರಂಗಳು ಮುಖಂಗಳಿಸಿತಿದೊರ್ದೇನೊಲಿದು ಮನಗುಡ
ಶರಣನು ೨೨

ಈಶ ತನ್ನಾಭರಣವೆಂದೆನಿಸುತಿರ್ಪ ಮಹ
ಶೇಷಪ್ರಸಾದವನು ಸವಿದು ಮರಣಕ್ಕಂಜಿ
ದೇಶವರಿಯಲು ಕಂಠದೊಳಗಾಂತುಕೊಂಡಿಹುದ ಶಾಶ್ವತಕೆ ಪೊಗಳು
ಶೇಷವೇ ತನಗಂಗವಾಗಿ ಸದ್ಭಕ್ತ ಮಹ ತಿಹುದು
ಶೇಷಪ್ರಸಾದವನು ಸವಿದು ತೃಪ್ತಿಯನೈದಿ
ಮೋಸವಿಲ್ಲದೆ ಬಾಳುತಿರ್ಪನದರಿಂದೆ ಸದ್ಭಕ್ತ ಶಿವನಿಂದಧಿಕನು ೨೩

ತಾಮಸಾಂಗವೆ ಮಂದರಾದ್ರಿ ರಾಜಸತನುವೆ
ಹೇಮಗಿರಿ ಸಾತ್ತ್ವಿಕಾಂಗವೆ ರಜತಪರ್ವತವು
ಶ್ರೀಮಹಾಸದ್ಭಕ್ತನಂಗವೇ ಕೈಲಾಸ ಲಿಂಗವೇ ಸಾಕ್ಷಾತ್ ಶಿವಂ
ಈ ಮರ್ಮವರಿಯದಪಶೈವಶಾಸ್ತ್ರವನೋದಿ
ಭೂಮಿಯೊಳಗಿರ್ದು ಕೈಲಾಸ ಬೇರುಂಟೆಂಬ
ಕಾಮಿತಾರ್ಥಿಗಳೆಲ್ಲರಗಣಿತಭವಾಂತರದೊಳರಸಿ ಕಾಣದೆ ಪೋದರು ೨೪

ಭಕ್ತನಂಗದ ಹೊದಪು ಸತ್ವಗುಣ ಬಿಳಿದೆಲೊ ವಿ-
ರಕ್ತನಂಗದ ಹೊದಪು ರಾಜಸಗುಣವೆ ಕಾವಿ
ಭಕ್ತಮಾಹೇಶರೀರ್ವರ ತಮೋಗುಣ ಪಾದರಕ್ಷೆಯಾಗಿರ್ಪುವೆಂಬ
ಯುಕ್ತಿಯನು ತಿಳಿಯಲರಿಯದೆ ಜಂಗಮದ ಕಾವಿ
ರಕ್ತರಕ್ಕಸನಂಗದೊವಲೆಂದು ಬಗುಳುತಿಹ
ಯುಕ್ತಿಹೀನನ ಶಾಸ್ತ್ರಶೈವವಲ್ಲದೆ ವೀರಶೈವವೆಂತಹುದು ಮರುಳೇ ೨೫

ಶಿವನಡದೊಳೋಲೈಪ ವಿಷ್ಣುವಿಗೆ ಹತ್ತು ಭವ
ಶಿವನ ಬಲದೋಲಗದ ಬ್ರಹ್ಮಂಗನಂತ ಭವ
ಶಿವನ ಮುಂದೆಸೆಯೊಳೋಲೈಸುತಿಹ ದೇವೇಂದ್ರನಂಗವೇ ಭವದ ಬೀಡು
ಭವಿಗಳನವರತ ಶಿವನೋಲಗದೊಳಿರ್ದೊಡೆಯು
ಭವದ ಕಲ್ಪನೆಯು ಬಿಡಲಿಲ್ಲವದರಿಂದೆ ತ್ರೈ-
ಭುವನದೊಳು ಭವಿಗೆ ಭವಮುಂಟಲ್ಲದಸಮಸದ್ಭಕ್ತರಿಗೆ ಭವಗಳುಂಟೇ ೨೬

ಭವಿಗಳಿಂದನವರತವೋಲೈಸಿಕೊಂಡವರ
ಭವವೆನಗೆ ಸೋಂಕಿತೆಂದಂಜಿ ಕಲಿಗಣನಿಂದೆ
ಶಿವದೀಕ್ಷೆವಡೆದು ಭವನೆನಿಸಿಕೊಂಡವನಿಗವತರಿಸಿರ್ಪ ಪರಿಯೆಂತೆನೆ
ಶಿವಶರಣನಾಗಿ ಭವಮರಣಗಳ ನೆರೆನೀಗಿ
ಶಿವಲಿಂಗವನು ಧರಿಸಿಕೊಂಡು ನಿಜಜಂಗಮಕೆ
ಶಿವಭಕ್ತನಾಗಿ ನಿಜಮುಕ್ತನೆನಿಸಿದ ಪರಿಯ ಜಡಮರ್ತ್ಯರೆತ್ತರಿವರು ೨೭

ಪುರುಷ ಮಂಚದ ಮೇಲೆ ಸತಿಯು ಕೆಳಗೊರಗಿರಲು
ಸರಸಸಂಯೋಗ ಸಮರತಿಯಪ್ಪುಂಟೆ ಎಲೆ ಮರುಳೆ
ಧರಣಿಯೊಳಗಿರ್ದು ಕೈಲಾಸದಲ್ಲಿಹ ಶಿವನ ಪೂಜಿಸುವ ಪರಿಯದೆಂತೋ
ಶರಣನಂತಲ್ಲ ತನ್ನಯ ಶಿರದ ಚಿತ್ಕಳೆಯು
ಗುರುಮುಖದೊಳವತರಿಸಿಕೊಂಡು ಮಹಲಿಂಗವನು
ಕರ ಮನಸು ಭಾವದೊಳು ಧರಿಸಿ ತ್ರೈಕರಣದಿಂದನವರತ ಭಜಿಸುತಿಹನು
೩೮

ಲೋಕದಜ್ಞಾನಜಡಜೀವಿ ಮಾನವರಂತೆ
ಕಾಕುಶಾಸ್ತ್ರವ ಕೇಳ್ದನೇಕದೈವವ ಭಜಿಸಿ
ಮೂಕೊರೆಯ ಜನರ ಸಟೆಕುಟಿಲ ಮಹಿಮೆಂಗಳಿಗೆ ಭ್ರಾಂತಿಸಿಂ ಪುರು
ಸ್ವೀಕರಿಸಿ ಮನ ಭಾವ ಕರಣ ಹರಣಗಳು ತ. ಾಗದೆ
ನ್ನಾಕಾರವಾದಿಷ್ಟಲಿಂಗವೊಂದನೆ ಭಜಿಸಿ
ಏಕಮೇವ ಪರಬ್ರಹ್ಮ ನ ದ್ವಿತೀಯನೆಂದೇಕವಾಗಿಹ ಶರಣನು ೩೯

ನರರಜನ ಸೃಷ್ಟಿಯಿಂ ಪರಿಭವಗಳಲಿ ಬಂದು
ಹರಿಯ ಸ್ಥಿತಿಯಿಂ ಬಹುನರಕಗಳನನುಭವಿಸಿ
ಮರಮರಳಿ ರುದ್ರನಿಂ ಲಯವಾಗುತಿರ್ಪರೆಂದೆಂದಿಗಾದರು ಋಷಿಗಳು
ಶರಣಸದ್‌ಗುರುವಿನ ಕರಾಬ್ಜದಿಂದುತ್ಪತ್ತಿ
ಕರದಿಷ್ಟಲಿಂಗಪ್ರಸಾದಭೋಗಸ್ಥಿತಿಯು
ಪರತತ್ತ್ವಮೂರ್ತಿ ಜಂಗಮದಂಘ್ರಿಯೊಳಗೈಕ್ಯರನವರತ ಸದ್‌ಭಕ್ತರು ೪೦

ಬಹುಪುಣ್ಯವಶದಿಂದ ಸ್ವರ್ಗದೈವತಜನ್ಮ
ಬಹುಪಾಪವಶದಿಂದ ನರಕಸೂಕರಜನ್ಮ
ಬಹುಪುಣ್ಯಪಾಪವೆರಡರ ಸಮಾನತ್ವದಿಂ ವಿದಿತಮಾನುಷಜನ್ಮವು
ಅಹುದು ಈ ಪರಿಭವಗಳನವರತ ಜೀವರಿಗೆ
ಸಹಜಸದ್‌ಭಕ್ತರಿಗೆ ಪುಣ್ಯಪಾಪಗಳಿಲ್ಲ
ಇಹಪರದ ಬಂಧಮೋಕ್ಷಂಗಳಿಚ್ಛೆಯನಿಚ್ಛೆಯೆರಡನುಳಿದಿರ್ಪರಾಗಿ ೪೧

ಯಮಯೋಗ ಸಲ್ಲ ಸದ್ಭಕ್ತಗೆ ಮಹೇಶ್ವರ ನಿ-
ಯಮ ಮಾಡ ಸಲ್ಲ ಪ್ರಸಾದಿಗಾಸನ ಸಲ್ಲ
ಕ್ರಮವಲ್ಲವಸುಲಿಂಗಿಗಸುಯಾಮ ಶರಣಂಗೆ ಪ್ರತ್ಯಹಾರವು ಸಲ್ಲದು
ವಿಮಳೈಕ್ಯನಿಗೆ ಧ್ಯಾನ ಧಾರಣ ಸಮಾಧಿ ಬಹು-
ಶ್ರಮದಿಂದೆ ಮಾಡಲದು ಯೋಗ್ಯವಲ್ಲದರಿಂದೆ
ಭ್ರಮಣೆಯಿಂದಷ್ಟಾಂಗಯೋಗವನು ಮಾಳ್ಪರಿಗೆ ಲಿಂಗಾಂಗ
ಯೋಗವಿಲ್ಲಾ ೩೨

ಮನ ಲಿಂಗವಾಗಿ ಲಿಂಗವ ನೆನೆಯಲದು ಧ್ಯಾನ
ತನು ಲಿಂಗವಾಗಿ ಧರಿಸುವುದೆ ಧಾರಣಯೋಗ-
ವನಿಮಿಷದೊಳಾ ಲಿಂಗ ಲಿಂಗವನಿಮಿಷದೆ ಸಮರಸವಾಗಲದು ಸಮಾಧಿ
ಇನಿತಲ್ಲದಷ್ಟಾಂಗಯೋಗದೊಳಗಿರುತಿರ್ಪ
ತನುಗುಣದ ಧ್ಯಾನ ಧಾರಣ ಸಮಾಧಿಯ ಮಾಳ್ಪ
ಮನುಜರಾಚರಣೆ ದುಃಶೈವವಲ್ಲದೆ ವೀರಶೈವವೆಂತಹುದೊ ಪುರುಳೆ ೩೩

ಆಸನವ ಬಲಿದು ಕಳಿತುಭಯಕರವೆರಳಿನಿಂ-
ದೀ ಶರೀರದ ನವದ್ವಾರಗಳ ಬಂಧಿಸಲು
ಸೂಸುತಿಹವರವಾಯು ತಡೆಯಲುಬ್ಬಸಗೊಂಡು ಕಳವಳಿಸಿ ಕಷ್ಟಪಡುತ
ಈಶಪದವಿಯೆ ನಮಗಿದೆಂದು ಭಾವಿಸಿ ಬಳಿ-
ಕ್ಕಾಸೆ ರೋಷಗಳು ಕಾಮೋದ್ರೇಕವಾಗಿ ಭವ-
ಪಾಶದೊಳು ಬಿದ್ದು ಹೊರಳುವ ನರಕಜೀವಿಗಳಿಗೆಂತಹುದೊ ವೀರಶೈವಂ
೩೪

ಪರತತ್ತ್ವಮೂರ್ತಿಯಷ್ಟಾವರಣರೂಪದಿಂ
ಧರೆಯೊಳವತರಿಸಿ ಷಟ್ಸ್ಥಲವೆಂಬ ಕ್ಷೇತ್ರದೊಳು
ಪರಮಪಂಚಾಚಾರಮಾರ್ಗವಿರುತಿಹುವಲ್ಲಿ ನಡೆದು ನಡೆದಂತೆ ನುಡಿದು
ಹರನ ಶೈವಾಚಾರವರ್ತನೆಯನತಿಗಳೆದು
ಸಿರುತದಿಂ ವೀರಶೈವದ ಪ್ರತಿಷ್ಠೆಯ ಮಾಳ್ಪ
ಶರಣರೇ ಶ್ರೇಷ್ಠರೆಂದೊರೆದ ಮದ್ಗುರು ಚೆನ್ನವೀರ ಪಾಲಿಸುಗೆಮ್ಮನು ೩೫

# ಗುರುಕರುಣ ತ್ರಿವಿಧಿ

ಶ್ರೀ ಗುರುವೆ ಸತ್ಕ್ರಿಯೆಯಾಗರವೆ ಸುಜ್ಞಾನ-
ಸಾಗರವೆ ಎನ್ನ ಮತಿಗೆ ಮಂಗಳವಿತ್ತು
ರಾಗದಿಂ ಬೇಗ ಕೃಪೆಯಾಗು ೧

ಗುರುವೆ ಭಕ್ತರ ಕಲ್ಪತರುವೆ ಸಜ್ಜನಮನೋ-
ಹರವೆ ನಿಜಭಕ್ತಿ ಜ್ಞಾನ ವೈರಾಗ್ಯಮಂ-
ದಿರವೆ ಮದ್ಗುರುವೆ ಕೃಪೆಯಾಗು ೨

ದೇಶಿಕನೆ ಅನುಭಾವೋಲ್ಲಾಸಕನೆ ಸಂಕಲ್ಪ-
ನಾಶಕನೆ ಆಣವಾದಿ ತ್ರೈಮಲದೊಳ್ ನಿ-
ರಾಶಕನೆ ಎನಗೆ ಕೃಪೆಯಾಗು ೩

ಕಾರ್ಯಕಾರಣಭಕ್ತಿ ತೂರ್ಯತಾಮಸದ ಚಿತ್-
ಸೂರ್ಯ ಎಡರಿಂಗೆ ಧೈರ್ಯವಾಗಿಹ ಗುರು-
ವರ್ಯ ನೀನೆನಗೆ ಕೃಪೆಯಾಗು ೪

ಸಾಧ್ಯ ಸದ್ಭಕ್ತರ್ಗೆ ವೇದ್ಯ ಲಿಂಗೈಕ್ಯರ್ಗೆ
ಭೇದ್ಯ ಸತ್ಪ್ರಮಥಗಣನಿಕರವೆಲ್ಲಕಾ-
ರಾಧ್ಯ ನೀನೆನಗ ಕೃಪೆಯಾಗು ೫

ನಗುರೋರಧಿಕವೆಂದು ಜಗದಲ್ಲಿ ಸಾರುತಿಹ
ನಿಗಮ ಶ್ರುತಿಗೇಳಿ ಗುರುವೆ ನಾನಿಮ್ಮ ಪದ-
ಯುಗವ ಬಣ್ಣಿಪೆನು ಕೃಪೆಯಾಗು ೬

ಹರನಿಂದಲಧಿಕ ಸದ್ಗುರುವೆಂಬುದನು ಕೇಳಿ
ಗುರುವೆ ನಾನಿಮ್ಮ ಚರಣವನು ನುತಿಸುವೆನು
ಕರುಣದಿಂದೆನಗೆ ಕೃಪೆಯಾಗು ೭

ಎಲ್ಲ ದೈವಕೆ ನಿಮ್ಮ ಮೊಜ್ಜುಟಿಯೆ ಘನವೆಂದು
ಸೊಲ್ಲಿಗೊಮ್ಮೊಮ್ಮೆ ನುತಿಪೆನಾಂ ಗುರುರಾಯ
ಸಲ್ಲೀಲೆಯಿಂದೆ ಕೃಪೆಯಾಗು ೮

ನರಜೀವಿಗಳಿಗೊರ್ವ ಹರನೆ ಕಾರಣಕರ್ತ
ಶರಣಸಂತತಿಗೆ ಗುರುವೆ ನೀ ಕರ್ತನೆಂ-
ದೆರಗಿರ್ಪೆನಡಿಗೆ ಕೃಪೆಯಾಗು ೯

ಶಿವನ ಸನ್ನಿಧಿಯರ್ಗೆ ಭವ ಮರಣವುಂಟೆಂದು
ತವೆ ನಿನ್ನ ಪಾದಸನ್ನಿಧಿಯ ಬಯಸಿ ಬಂ-
ದವನೆನಗೆ ಗುರುವೆ ಕೃಪೆಯಾಗು ೧೦

ಘಂಟೆಯಂ ಪಿಡಿದೊರ್ವ ಟೆಂಟೆಣಿಸುತಿರೆ ನಾದ-
ಮುಂಟಲ್ಲದುಳಿದು ತಾನಾಗಿಯೆ ನುಡಿಯುವು-
ದುಂಟೆ ಶ್ರೀ ಗುರುವೆ ಕೃಪೆಯಾಗು ೧೧

ವೀಣಾನೂತನಶಬ್ದ ಪಾಣಿಯಿಂದೊಗೆವಂತೆ
ಜಾಣ ಶ್ರೀ ಗುರುವೆ ನೀಂ ನುಡಿಸಿದಂತೆ ನಾಂ
ಮಾಣದೆಲೆ ನುಡಿವೆ ಕೃಪೆಯಾಗು ೧೨

ಗುಡಿ ಮಾತಿಗೊಮ್ಮೆ ಮಾರ್ನುಡಿಯ ತಾ ಕೊಡುವಂತೆ
ಒಡೆಯ ನೀ ಪೊಕ್ಕು ನುಡಿಗೊಟ್ಟ ಪರಿಯೊಳಾಂ
ನುಡಿವೆನೈ ಗುರುವೆ ಕೃಪೆಯಾಗು ೧೩

ಯಂತ್ರವಾಹಕಸ ಹಸ್ತಾಂತ್ರ ಬೊಂಬೆಯು ಪರ-
ತಂತ್ರದಿಂದಾಡುವಂತೆನ್ನನಾಡಿಸುವ ಸ್ವ
ತಂತ್ರ ಶ್ರೀಗುರುವೆ ಕೃಪೆಯಾಗು ೧೪

ಸ್ವಾನುಭಾವದ ನೆಲೆಯ ನಾನೇನ ಬಲ್ಲೆನೈ
ನೀನೆ ಒಳವೊಕ್ಕು ಏನ ನುಡಿಸಿದೊಡದನೆ
ನಾ ನುಡಿವೆ ಗುರುವೆ ಕೃಪೆಯಾಗು ೧೫

ಪರಕೆ ಪರವಾಗಿರ್ದ ಪರತತ್ತ್ವಮೂರ್ತಿಯು ನಿಜ-
ದಿರವೆ ರೂಪಾಗಿ ಧರೆಯೊಳಗೆ ಚರಿಸುತಿಹ
ಪರಮಶ್ರೀಗುರುವೆ ಕೃಪೆಯಾಗು ೧೬

ಪಿಂಡವನೊ ಧರಿಸಿ ಬ್ರಹ್ಮಾಂಡವಳಕೊಂಡು
ಪಿಂಡಬ್ರಹ್ಮಾಂಡಪರಿಪೂರ್ಣನೆನಿಸಿದ-
ಖಂಡ ಶ್ರೀಗುರುವೆ ಕೃಪೆಯಾಗು ೧೭

ಪದಿನಾಲ್ಕು ಭುವನತುಂಬಿದಿದೊಂದು ಬ್ರಹ್ಮಾಂಡ-
ವದರಂತೆ ತೋರ್ಪುವಗಣಿತ ಬ್ರಹ್ಮಾಂಡ-
ಕ್ಕಧಿಕಾರಿ ಗುರುವೆ ಕೃಪೆಯಾಗು ೧೮

ನಾದಬಿಂದುಗಳೇಕವಾದ ವಸ್ತುವಿಗೆ ನೀ-
ನಾದಿಚೈತನ್ಯನಾಗಿ ಶೋಭಿಸುತಿರ್ಪ-
ನಾದಿಶ್ರೀಗುರುವೆ ಕೃಪೆಯಾಗು ೧೯

ವಸುಧಾಕೃತ್ಯವ ಮಾಳ್ಪ ಶಶಿಭಾನುಜ್ಯೋತಿಯಿಂ-
ದೆಸೆವ ಬೆಳಗಿಂಗೆ ಮೂಲಕಳೆಯಾಗಿ ಶೋ-
ಭಿಸುವ ಶ್ರೀಗುರುವೆ ಕೃಪೆಯಾಗು ೨೦

ಜಾತಿಭೇದವನಳಿದು ನೀತಿಮಾರ್ಗವ ಪೇಳಿ
ಓತು ತ್ರೈಭುವನದಾರಾಧ್ಯನೆನಿಸಿದ ಅ-
ಜಾತಶ್ರೀಗುರುವೆ ಕೃಪೆಯಾಗು ೨೧

ಜೀವಜಾಲಂಗಳೊಳಗಾವನಾದೊಡೆ ನೀವು
ಕೈಪಿಡಿದಡವನೆ ಪಾವನಾತ್ಮಕನು ಗುರು-
ದೇವ ನೀನೆನಗೆ ಕೃಪೆಯಾಗು ೨೨

ಹಲವು ಮಾತೇನು ನೀನೊಲಿದು ಪಾದವನಿಟ್ಟ
ನೆಲವೆ ಸುಕ್ಷೇತ್ರ, ಜಲವೆ ಪಾವನತೀರ್ಥ
ಸುಲಭ ಶ್ರೀಗುರುವೆ ಕೃಪೆಯಾಗು ೨೩

ಇನ್ನುಳಿದ ಮಾತೇನು ನಿನ್ನ ನೀನೊಲಿದು ನೀ
ಮನ್ನಿಸಿದಡವನೇ ಧನ್ಯನಾಗುವನು ಪ್ರ-
ಸನ್ನಶ್ರೀಗುರುವೆ ಕೃಪೆಯಾಗು ೨೪

ಧೊರೆಗೊಲಿದ ಬಡವಂಗೆ ಧರೆಯ ಮನ್ನಣೆಯುಂಟು
ಗುರುವೆ ನೀನೊಲಿದ ಶರಣಂಗೆ ಸರಿಯುಂಟೆ
ಕರುಣಿ ನೀನೆನಗೆ ಕೃಪೆಯಾಗು ೨೫

ಕೊರಡು ಕೊನರುವುದು ಬಲುಬರಡು ಹಯನಾಗುವುದು
ಕುರುಡಂಗೆ ಕಣ್ಣು ಬಹುದು ನಿನ್ನೊಲುಮೆ ಎಂ-
ದರಿದೆನ್ನೈ ಗುರುವೆ ಕೃಪೆಯಾಗು ೨೬

ಎರವ ಮಾಡದೆ ನಿಮ್ಮ ಗುರುಪುತ್ರರೊಳಗೆನ್ನ
ಕಿರಿಯ ಮಗನೆಂದು ಗುರುವೆ ನೀ ಕರಪಿಡಿದು
ಹರುಷದಿಂದೆನಗೆ ಕೃಪೆಯಾಗು ೨೭

ಮಾಯಪಾಶವ ಹರಿದು ಕಾಯೊ ನೀನೆನ್ನುವನು
ತಾಯಿ ಜನ್ಮದೊಳು ಬೇಡಿದಿಷ್ಟವನು ಗುರು-
ತಾಯಿ ನೀನೆನಗೆ ಕೃಪೆಯಾಗು ೨೮

ಕಂದ ಬಾ ಎಂದು ದಯದಿಂದೆ ನೀನೊಲಿದು ಕರೆ-
ತಂದೆ ಬಸವಾದಿಪ್ರಮಥರಾ ಪದಕೆನ್ನ
ತಂದೆ ಶ್ರೀ ಗುರುವೆ ಕೃಪೆಯಾಗು ೨೯

ಜನಿಸಿದಾ ಕ್ಷಣವೆನಗೆ ಕೆನೆವಾಲುಸಕ್ಕರೆಯು
ಎನೆ ತೀರ್ಥಶೇಷವನುವೂಡಿ ಪೊರೆದ ಮ-
ಜ್ಜನನಿ ಶ್ರೀಗುರುವೆ ಕೃಪೆಯಾಗು ೩೦

ತಥ್ಯಮಿಥ್ಯವನಳಿದ ಸತ್ಯಶರಣರಿಗೆ ನೀ-
ಭೃತ್ಯನಾಗೆಂದು ಮರ್ತ್ಯಲೋಕದೊಳೆನ್ನ
ಪೆತ್ತಯ್ಯ ಗುರುವೆ ಕೃಪೆಯಾಗು ೩೧

ಶೈವಮಾರ್ಗದ ಭವದ ನೋವ ತಾರಿಸಿ ವೀರ-
ಶೈವಾಮೃತಮೊಲೆಯುಣಿಸಿ ಪೊರೆದೆನ್ನ ಹೆ-
ತ್ತವ್ವ ಶ್ರೀಗುರುವೆ ಕೃಪೆಯಾಗು ೩೨

ಉಪ್ಪು ನೆಲ್ಲಿಯ ಕೂಡಿ ಒಪ್ಪಿ ರುಚಿಗೊಡುವಂತೆ
ತಪ್ಪದೆಂದೆಂದು ಅಗಲುವಿಕೆಯಿಲ್ಲದೆ-
ನ್ನಪ್ಪ ಶ್ರೀ ಗುರುವೆ ಕೃಪೆಯಾಗು ೩೩

ಮಜ್ಜೀವ ನಿಮ್ಮ ಪಾದಾಬ್ಜಭವರಮಲಹ-
ಸ್ತಾಬ್ಜದೊಳ್ ಜನಿಸಿ ಸಜ್ಜೀವವಾದುದೆ-
ಮ್ಮಜ್ಜಯ್ಯ ಗುರುವೆ ಕೃಪೆಯಾಗು ೩೪

ಮತ್ತೆ ನಾ ನಿಮ್ಮ ಸತ್‌ಪುತ್ರನಾತ್ಮಜನಣುಗ
ಪೆತ್ತವನ ಮಗನ ಭೃತ್ಯನೈ ನೀನೆನ್ನ
ಮುತ್ತಯ್ಯ ಗುರುವೆ ಕೃಪೆಯಾಗು ೪೫

ತಾತಾ ಎಂದರೆ ಕೊಡುವದಾತ ತ್ರೈಭುವನ ಪ್ರ-
ಖ್ಯಾತ ಸದ್‌ಭಕ್ತಿಪ್ರೀತನಾದಿಯೊಳೆನ್ನ
ತಾತ ಶ್ರೀಗುರುವೆ ಕೃಪೆಯಾಗು ೪೬

ಸುಳಿವ ಸೋದರರಮಾವನಳಿಯನಗ್ರಜ ಭಾವ
ಗೆಳೆಯ ನೀನೆನ್ನ ಹಳೆನೆಂಟ ಕುಲಕೋಟಿ
ಬಳಗ ಶ್ರೀಗುರುವೆ ಕೃಪೆಯಾಗು ೪೭

ಬಂದೆಡರಿಗಂಜಬೇಡೆಂದು ಧೈರ್ಯವದಿತ್ತು
ಹಿಂದೆಮುಂದೆನ್ನ ಕಾದಿರ್ಪ ಭಕ್ತಜನ-
ಬಂಧು ಶ್ರೀಗುರುವೆ ಕೃಪೆಯಾಗು ೪೮

ಭಕ್ತಿ ದಾಸೋಹಂ ವಿರಕ್ತಿ ಧೃಢ ಛಲ ನೇಮ
ಭಕ್ತಿಯನೆ ನಡೆಸಿ ಕೊಡುವಲ್ಲಿ ಗುರುವೆ ನೀ
ಭಕ್ತವತ್ಸಲನೆ ಕೃಪೆಯಾಗು ೪೯

ಯುಗ ನಾಲ್ಕುವೊಂದಾದ ಜಗದೊಳಗೆ ತಾನಿರ್ಪ
ಬಗೆಯನಾ ಜಗದೊಳೊಗೆದ ಕಣ್ಣಲಿ ನೋಡಿ
ನಗುವ ಶ್ರೀ ಗುರುವೆ ಕೃಪೆಯಾಗು ೫೦

ನಡುಮಧ್ಯ ಮಾವಂತ ಎಡಬಲದೆಯಾನೆಗಳ
ಒಡಗೂಡಿ ನೋಡಿ ಎಡರುಕಂಟಕಲಿಪಿಂಪು
ತೊಡೆಯಯ್ಯ ಗುರುವೆ ಕೃಪೆಯಾಗು ೫೧

ದಾಕ್ಷಿಣ್ಯ ಪುರವರ್ಗ ಮೋಕ್ಷಹೀನಾಚಾರ್ಯ
ಶಿಕ್ಷೆಗೊಳಗಾಗಿ ಈ ಕ್ಷಿತಿಗೆ ಬಂದೆನ್ನೈ
ಈ ಕ್ಷಣದಿ ಗುರುವೆ ಕೃಪೆಯಾಗು ೪೨

ಧರ್ಮ ನಾಮವ ತಾಳಿ ಎಮ್ಮೆಮಗನೊಯ್ಯಾಳಿ
ಕರ್ಮದಾ ಕೇಳಿಯಿಂ ಮೆರೆವನುಪಟಾಳಿ-
ಗಮ್ಮೆನ್ನೈ ಗುರುವೆ ಕೃಪೆಯಾಗು ೪೩

ಕರಿಯ ಕಬ್ಬಿನ ಬಿಲ್ಲು ಅರಳು ಮಲ್ಲಿಗೆ ಬಾಣ-
ದುರುವಣಿಗೆ ಲೋಕ ಉರುಳಲ್ಕೆ ನಾ ನಿಮ್ಮ
ಮರೆಬಿದ್ದೆ ಗುರುವೆ ಕೃಪೆಯಾಗು ೪೪

ಬೀನಾದ ಬಲೆಯೊಳಗೆ ಕಾಸಿಮೀಸೆಯ ಮೃಗವು
ತಾ ಸೋತು ಬಿದ್ದು ಘಾಸಿಯಾಗಲು ನಿಮ್ಮ
ನಾಸಾರೆ ಗುರುವೆ ಕೃಪೆಯಾಗು ೪೫

ಅರಣ್ಯದೊಳು ಹಣ್ಯನಾರಿ ಮಾನವಮಾರಿ
ದಾರಿಗೊಂಡವರ ಸೂರೆಗೊಂಬಳು ಗುರುವೆ
ಸೇರಿದೆನು ನಿಮ್ಮ ಕೃಪೆಯಾಗು ೪೬

ಚಿಕ್ಕ ವ್ಯಾಧನ ಬಲೆಗೆ ಸಿಕ್ಕಿದಣ್ಣಗಳೆಲ್ಲ
ರಕ್ಕಸಿಯ ಮನೆಯ ಮಕ್ಕಳಹರು ಗುರುವೇ
ಚಕ್ಕನೆ ಎನಗೆ ಕೃಪೆಯಾಗು ೪೭

ಹುಲ್ಲ ಮೇಯಲು ಬಂದ ಹುಲ್ಲೆ ಕರುವನೂ
ಹುಲ್ಲೆ ಹುಲಿಯಾಗಿ ಮೆಲುವುದನು ಬಲ್ಲೆ ನಾ-
ನೊಲ್ಲೆನ್ನೈ ಗುರುವೆ ಕೃಪೆಯಾಗು ೪೮

ಹುಲಿಹುಲ್ಲೆಗಳು ತಮ್ಮ ಕೊಲುವ ವ್ಯಾಧರ ಶಲೆಯು
ಸಲೆನುಂಗಿ ಮುಂದ ಸುಳಿದಾಡುವುದ ಕಂಡು
ಅಲಸಿದೆನು ಗುರುವೆ ಕೃಪೆಯಾಗು ೪೯

ಬೇರಾಗಸಕೆ ಬೆಳೆದ ನಾರಿಕೇಳದ ಕುಜವ.
ನಾರ ಹಂಗಿಲ್ಲದೇರಿದೆನು ನಾನಿಳಿಯು-
ಲಾರೆನ್ನೆ ಗುರುವೆ ಕೃಪೆಯಾಗು ೫೦

ಶಶಿಸೂರ್ಯಬಿಂಬದಾ ರಸ ಬಲಿದ ಪರ್ವತವ
ಶಿಶುವಾಗಿ ಹತ್ತಿ ಪಶುವಾಗಿ ಸುಳಿದೆನ್ನೆ
ಅಸಮಶ್ರೀಗುರುವೆ ಕೃಪೆಯಾಗು ೫೧

ಕರಿಯ ಬಣ್ಣದ ಪಕ್ಷಿ ಗರಿಯ ಗಾಳಿಯ ಕೂಡಿ
ತಿರುಗಿ ನಾ ಸೋತು ಸಿರಬಾಗಿ ನಿಮ್ಮಂಘ್ರಿ-
ಗೆರಗಿದೆನು ಗುರುವೆ ಕೃಪೆಯಾಗು ೫೨

ಸರಿ ಬಿತ್ತಿ ಬೆಸನೊಗೆದ ಮರದ ಶಾಖೆಯೊಳು ವಾ-
ನರರಾಜ ಕುಳಿತು ಧರೆಮೂರನಾಳ್ವನೆಂ-
ದರಿದೆ ಶ್ರೀಗುರುವೆ ಕೃಪೆಯಾಗು ೫೩

ಹದ್ದು ಹಾವನು ಕಚ್ಚಿ ಬದ್ಧವಿಷ ತಲೆಗೇರಿ
ಬಿದ್ದೆನ್ನೆ ನೆಲಕೆ ಮದ್ದುಮಂತ್ರವ ಬಲ್ಲ
ಸಿದ್ಧ ಶ್ರೀಗುರುವೆ ಕೃಪೆಯಾಗು ೫೪

ಸುರಲೋಕದರಸುತಾ ನರಲೋಕವಾಳಲ್ಕೆ
ಸುರಲೋಕವೆಲ್ಲ ನರಲೋಕದೊಳಗಾದ
ಪರಿಗಂಡೆ ಗುರುವೆ ಕೃಪೆಯಾಗು ೫೫

ಭೂಮಿಬೀಜವ ಬಿತ್ತಿ ಭೂಮಿಯನು ಬೆಳೆದೊಕ್ಕಿ
ಭೂಮಿ ತೂರಲ್ಕೆ ಭೂಮಿ ತಾ ಜೊಳ್ಳಾದು-
ದೈ ಮಹಾಗುರುವೆ ಕೃಪೆಯಾಗು ೫೬

ನೀರು ಏರಿಯನೇರಿ ನೀರಡಿಸಿ ಬಾಯಾರಿ
ನೀರು ನೀರ್ಗುಡಿದು ನೀರಡಿಸಿ ಸತ್ತಿತ್ತೈ
ನೀರ ಶ್ರೀಗುರುವೆ ಕೃಪೆಯಾಗು ೫೭

ಬೆಂಕಿ ಬೆಂಕಿಯ ಕೂಡಿ ಲಂಕೆಯನು ಸುಟ್ಟು ಪಡಿ-
ಲಂಕೆಗಂ ಹತ್ತಿ ಅಂಕೆಯ ಮೀರಿತ್ತೈ
ಬೆಂಕಿ ಶ್ರೀಗುರುವೆ ಕೃಪೆಯಾಗು ೫೮

ಗಾಳಿ ಗಾಳಿಯ ಕೂಡಿ ಜಾಳೇಂದ್ರ ಗಿರಿಗಳನು
ದಾಳಿಯನು ಒಯ್ದು ಆಳುವ ಬಗೆಯನು ನಾ
ಕೇಳಿದೆನು ಗುರುವೆ ಕೃಪೆಯಾಗು ೫೯

ಬಯಲೊಳಗೆ ಬಯಲೊಗೆದು ಬಯಲೊಳಗೆ ಸಂಚರಿಸಿ
ಬಯಲೊಳಗೆ ಬಯಲು ಲಯವಾಗುತಿರೆ ಕಂಡು
ಭಯಗೊಂಡೆ ಗುರುವೆ ಕೃಪೆಯಾಗು ೬೦

ಭೂತಪಂಚಕ ಪಂಚಭೂತ ತವೆ ಕೂಡಲದು-
ಭೂತಮಯವಾದ ಭೂತಳಕೆ ಕರ್ತ ಭೂ-
ನಾಥ ಶ್ರೀಗುರುವೆ ಕೃಪೆಯಾಗು ೬೧

ನೊಂದಿರ್ದ ಬೆಂಕಿ ಘನಸಿಂಧುವನೆ ಆವರಿಸಿ
ನಿಂದುರಿಯುತಿಹುದು ನಂದಿಪುದೇತರಲ್ಕೆ
ತಂದೆ ಶ್ರೀಗುರುವೆ ಕೃಪೆಯಾಗು ೬೨

ತಲೆಯಿಲ್ಲದಂಗನೆಯು ಮೋಲಿಯೊಳು ತೋರುತಿರಲು
ತಲೆಯೆಂಟರಿಂದ ಮೋಲೆಯುಸುಂಬುದ ಕಂಡು
ಅಲಸಿದೆನು ಗುರುವೆ ಕೃಪೆಯಾಗು ೬೩

ರಂಭೆ ಪೊತ್ತಿರುತಿರ್ಪ ಒಂಬತ್ತು ತೂತಿನಾ
ಕುಂಭದೊಳ್ ನೀರು ತುಂಬಿಕೊಂಡಿದನಾಗ
ನೆಂಬೆನೈ ಗುರುವೆ ಕೃಪೆಯಾಗು ೬೪

ಗಾಳಿಗಿಕ್ಕಿದ ಸೊಡರಿನೇಳಿಗೆಯುಸೇಸಂಪಿ
ಬಾಳ್ವ ಧನಿಕರನು ಗೀಳುಮಾಡುವುದೈ ಕೃ
ಪಾಳು ಶ್ರೀಗುರುವೆ ಕೃಪೆಯಾಗು ೬೫

ಸವಣರಾ ಪೇಟೆಯೊಳು ದಿವಸ ಸಂತೆಯು ತಬ್ಬಿ
ನಿಹವ ಪೂರೈಸಿದೇಕಾಂತದೊಳಗೆಸ್ಸ
ನವಧರಿಸು ಗುರುವೆ ಕೃಪೆಯಾಗು ೬೬

ಗಾಳಿಪೂಜೆಯು ಗುಡ್ಡವಾಳುವುಟ್ಟವದು ಈ
ರೇಳು ಲೋಕವನು ತಾಳಿಕೊಂಡಿಹುದೆಂದು
ಹೇಳುವರು ಗುರುವೆ ಕೃಪೆಯಾಗು ೬೭

ಹುಬ್ಬಳ್ಳಿಪೇಟೆಯೊಳು ಕಬ್ಬಿನ ಕೈ ಮಾರಾಟ
ಇಬ್ಬರೊಂದಾಗಿ ಉಬ್ಬಿ ಮಾರಲು ಲಾಭ
ಹಬ್ಬಿತ್ತೈ ಗುರುವೆ ಕೃಪೆಯಾಗು ೬೮

ಶಿರಹಟ್ಟಿಯೊಳಗೊಂದು ಕರುವಿಲ್ಲದಾಕಳಿಗೆ
ಕರೆವ ಮೊಲೆಯಿಲ್ಲ ಕರೆದುಂಬುತಿದೆ ಗೋವು
ಕರಚೋದ್ಯ ಗುರುವೆ ಕೃಪೆಯಾಗು ೬೯

ಪಂಪಾಕ್ಷಿತಿಯುದೊಳೊಂದು ಸಂಪಗೆಯು ನನೆಯುಂಟು
ಕಂಪುಂಟು ಗಾಳಿ ತಂಪುಂಟು ಒಳಗಿಂಪುನ
ಗುಂಪುಂಟು ಗುರುವೆ ಕೃಪೆಯಾಗು ೭೦

ಇಕ್ಕೇರಿ ಚೌಬೀದಿಯೊಳಿಕ್ಕಿದ ಫಲಸರಕ
ತಕ್ಕೊಂಡು ಮಾರಿ ಮಿಕ್ಕ ಲಾಭವದೆನಗೆ
ಸಿಕ್ಕದೈ ಗುರುವೆ ಕೃಪೆಯಾಗು ೭೧

ಮಣ್ಣ ಮಟ್ಟಿಯ ಮೇಲೆ ಕಣ್ಣ ಕುಪ್ಪಿಯ ದುರ್ಗ
ಬಣ್ಣ ಬೈರೂಪು ಸಣ್ಣ ಬಾಗಿಲಿಗೆ ಮೂ-
ವಣ್ಣವೈ ಗುರುವೆ ಕೃಪೆಯಾಗು ೭೨

ಶಿಲೆಯ ತೆಪ್ಪವನೇರಿ ಜಲವ ದಾಂಟುವೆನೆಂಬ
ಬಲು ಮೂಢತನವ ತೊಲಗಿಸುತ ನೀನೆನ್ನ
ನಲಹು ಶ್ರೀ ಗುರುವೆ ಕೃಪೆಯಾಗು ೭೩

ಕಾಯ ಕರ್ಮಗಳೆಂಬ ಮಾಯಾ ಸಂಸಾರವನು
ಹೇಯವ ಮಾಡಿ ಪ್ರೀಯದಿಂದಲಿ ಪಾಲಿ-
ಸಯ್ಯ ಶ್ರೀ ಗುರುವೆ ಕೃಪೆಯಾಗು ೭೪

ಇಂತಪ್ಪ ಸಂಸಾರ ಭ್ರಾಂತಿನೊಳಗೆದ್ದನೇ-
ಕಾಂತದೊಳ್ ಕರೆದು ಮುಂತೆ ನೀ ಪರವಸ್ತು-
ವಿಂತೆಂದ ಗುರುವೆ ಕೃಪೆಯಾಗು ೭೫

ಮಗನೆ ಈ ಸಂಸಾರ ತೆಗಹವನು ಪರಿಹರಿಪೆ
ದುಗಡಬೇಡೆಂದು ನಗುತೊಂದು ಯೋಚನೆಯ
ಬಗೆದ ಶ್ರೀ ಗುರುವೆ ಕೃಪೆಯಾಗು ೭೬

ಕರೆದು ಮಂಡೆಯ ಮೇಲೆ ಕರವಿಟ್ಟು ಶಿರದಡಹಿ
ಗುರುಪುತ್ರನೆನಿಸಿ ಸ್ಥಿರವಾಗಿ ಬಾಳೆಂದು
ಹರಸಿದಾ ಗುರುವೆ ಕೃಪೆಯಾಗು ೭೭

ದೀಕ್ಷೆ ತ್ರೈತನುವಿಂಗೆ ಶಿಕ್ಷೆ ಮನ್‌ಮನಸಿಂಗೆ
ಮೋಕ್ಷವಾತ್ಮಂಗೆ ಈಕ್ಷಿಸುತ ಕೊಟ್ಟ ಪ್ರ-
ತ್ಯಕ್ಷ ಶ್ರೀ ಗುರುವೆ ಕೃಪೆಯಾಗು ೭೮

ಅಡಿಗೆರಗಿದವನ ಶಿರದಡಹಿ ಮನ್ನಿಸಿ ಎನ್ನ
ನುಡಿಯ ಬ್ರಹ್ಮವನು ನಡೆಗೆ ತಂದಿತ್ತ ಎನ್ನೊ-
ಡೆಯ ಶ್ರೀ ಗುರುವೆ ಕೃಪೆಯಾಗು ೭೯

ಮಸ್ತಕದ ಮೇಲೆ ಹಸ್ತವನ್ನಿಟ್ಟು ನಿಜ-
ವಸ್ತುವಾ ತೆಗೆದು ಹಸ್ತಪೀಠದೊಳಿತ್ತ
ಸ್ವಸ್ತಿ ಶ್ರೀ ಗುರುವೆ ಕೃಪೆಯಾಗು ೮೦

ಅಂತರಂಗದ ಮೂಲಮಂತ್ರರೂಪಕದ ಮಾ-
ಹಂತ ಬ್ರಹ್ಮವನು ಮುಂತೆ ನೀ ತೆಗೆದಿತ್ತ-
ಚಿಂತಾಯಕ ಗುರುವೆ ಕೃಪೆಯಾಗು ೮೧

ಗುರುವೆ ನಿಮ್ಮಯ ಕೃಪಾಶರಧಿಯೊಳ್ ಜನಿಸಿರ್ದ
ಪರಮ ಸುಜ್ಞಾನ ವರರತ್ನ ಕರದಿಷ್ಟ-
ದೊರವಿತ್ತ ಧರ್ಮಿ ಕೃಪೆಯಾಗು ೮೨

ಪಶ್ಚಿಮಾರ್ಗದೊಳಿರ್ದ ಸ್ವಚ್ಛ ನಿರಂಜನ
ವಚ್ಚಬ್ರಹ್ಮವನು ನಿಶ್ಚಯಿಸಿ ಕರಕಿತ್ತ
ಶ್ರೀಚರ ಗುರುವೆ ಕೃಪೆಯಾಗು ೮೩

ಉನ್ನತದ ಶಿಖಿಯೆ ಸೌಜನ್ಯವಾಗಿರ್ದ ನಿಃ-
ಶೂನ್ಯ ಬ್ರಹ್ಮವನು ನಿನ್ನ ನೀನೊಲಿದಿತ್ತ
ಚೆನ್ನ ಶ್ರೀ ಗುರುವೆ ಕೃಪೆಯಾಗು ೮೪

ಅಜರಂಧ್ರದೆಡೆಯ ಸರಸಿಜದ ನಿಷ್ಕಳ ಬ್ರಹ್ಮ
ಭಜಿಸೆಂದು ಎನ್ನ ನಿಜ ವಾಮಕರಕಿತ್ತ
ತ್ರಿಜಗಾದಿ ಗುರುವೆ ಕೃಪೆಯಾಗು ೮೫

ಭ್ರೂಮಧ್ಯದಾಗ್ನೇಯ ನಿಸ್ಸೀಮ ಬ್ರಹ್ಮವನು
ನೇಮಿಸುತ ಎನ್ನ ವಾಮಹಸ್ತದೊಳಿತ್ತ
ಸ್ವಾಮಿ ಶ್ರೀ ಗುರುವೆ ಕೃಪೆಯಾಗು ೮೬

ಮಾನಿತ ಶ್ರೀಕಂಠ ಸ್ಥಾನ ವಿಶುದ್ಧಿಯ ವಿ-
ಜ್ಞಾನ ಬ್ರಹ್ಮವನು ನೀನೊಲಿದು ಕರಕೆ ಕೊ-
ಟ್ಟಾ ನೈಜ ಗುರುವೆ ಕೃಪೆಯಾಗು ೮೭

ಕುಂದದ ಸದುಹೃದಯಮಂದಿರದನಾಹತಾ-
ನಂದಬ್ರಹ್ಮವನು ತಂದೆನ್ನ ಕರಕಿತ್ತ
ತಂದೆ ಶ್ರೀ ಗುರುವೆ ಕೃಪೆಯಾಗು ೮೮

ವಿಲಸಿತದ ನಾಭಿಮಂಡಲದ ಮಣಿಪೂರ್ಣ ಸತ್-
ಕಳೆಯ ಬ್ರಹ್ಮವನು ಒಲಿದೆನ್ನ ಕರಕಿತ್ತು
ಸಲಹಿದಾ ಗುರುವೆ ಕೃಪೆಯಾಗು ೮೯

ಅಂಡದಗ್ರದಖಂಡ ಸ್ವಾದಿಷ್ಠಾನ
ಪಿಂಡ ಬ್ರಹ್ಮವನು ತಂದೆನ್ನ ಕರಕಿತ್ತು-
ದ್ದಂಡ ಶ್ರೀ ಗುರುವೆ ಕೃಪೆಯಾಗು ೯೦

ತೋರ್ಪಪ್ರಾಘಾರದ ವರ್ತಿ ಗುಡಪುಂಡ್ರದ
ಮೂರ್ತಿ ಬ್ರಹ್ಮವನು ಅರ್ತಿಯಿಂ ಕರಕಿತ್ತ
ಕೀರ್ತಿಮಯ ಗುರುವೆ ಕೃಪೆಯಾಗು ೯೧

ನವಚಕ್ರದೊಳಗಿರ್ದ ನವಬ್ರಹ್ಮವನು ತೆಗೆದು
ಶಿವಲಿಂಗ ವಿಗ್ರಹವ ಕರುಣಿಸಿದ
ಸುವಿವೇಕ ಗುರುವೆ ಕೃಪೆಯಾಗು ೯೨

ಯಮಯೋಗ ಪಾಪದಾ ಕ್ರಮವೆಂದು ತೊಲಗಿಸಿ
ಸುಮನ ಸತ್‌ಕ್ರಿಯಾ ಕ್ರಮದ ಲಿಂಗವನಿತ್ತ
ವಿಮಲ ಶ್ರೀ ಗುರುವೆ ಕೃಪೆಯಾಗು ೯೩

ನಿಯಮಯೋಗವೆ ಭವದಾಲಯವೆಂದು ತೊಲಗಿಸಿ
ಸ್ವಯಲಿಂಗಪೂಜಾನಿಯಮವ ಕರುಣಿಸಿದ.
ಭಯಹರನೆ ಗುರುವೆ ಕೃಪೆಯಾಗು ೯೪

ಆಸನಯೋಗದಭ್ಯಾಸವಾಯಾಸವೆಂದು
ಓಸರಿಸಿ ಕರಕಂಜಾಸನ ಲಿಂಗವನಿತ್ತು.
ಲ್ಲಾಸ ಶ್ರೀ ಗುರುವೆ ಕೃಪೆಯಾಗು ೯೫

ಪ್ರಾಣಾಯಾಮದ ಯೋಗ ತ್ರಾಣಗುಂದುವುದೆಂದು
ಮಾಣಿಸಿ ಮುಕ್ತಿಯ ತಾಣ ಲಿಂಗವನಿತ್ತ
ಜಾಣ ಶ್ರೀ ಗುರುವೆ ಕೃಪೆಯಾಗು ೯೬

ಪ್ರತ್ಯಾಹಾರವ ಕೊಂಬ ಮಿಥ್ಯಾಯೋಗವ ಬಿಡಿಸಿ
ತಥ್ಯವಾಗಿರ್ದ ನಿತ್ಯತೃಪ್ತಿಯ ಲಿಂಗ.
ವಿತ್ತ ಶ್ರೀ ಗುರುವೆ ಕೃಪೆಯಾಗು ೯೭

ಮೌನಗೊಂಡಿರುತಿರ್ಪ ಧ್ಯಾನಯೋಗವ ಬಿಡಿಸಿ
ನೀನಿಷ್ಟಲಿಂಗಧಾನದೊಳಿರಿಸಿದೈ
ಮಾನಿತ ಶ್ರೀ ಗುರುವೆ ಕೃಪೆಯಾಗು ೯೮

ಧಾರಣಯೋಗದ ದುರ್ವಿಚಾರಣೆಯನತಿಗಳೆದು
ಕಾರಣದ ಲಿಂಗಧಾರಣವ ಗೈದ ಪರಿ-
ಪೂರ್ಣ ಶ್ರೀ ಗುರುವೆ ಕೃಪೆಯಾಗು ೯೯

ಸುಸಮಾಧಿಯೋಗ ತಾಮಸವೆಂದು ತೊಲಗಿಸಿ
ಅಸಮಲಿಂಗದೊಳು ಅಸುವಳಿದೊಡೈಕ್ಯವೆಂ-
ದುಸುರಿದ ಶ್ರೀ ಗುರುವೆ ಕೃಪೆಯಾಗು ೧೦೦

ಅಷ್ಟಾಂಗಯೋಗ ಬಲು ಕಷ್ಟವೆಲೊ ಮಗನೆ ಎಂ-
ದಿಷ್ಟಲಿಂಗವನು ಸೃಷ್ಟಿಸಿ ಕರಕಿತ್ತ
ಶ್ರೇಷ್ಠ ಶ್ರೀ ಗುರುವೆ ಕೃಪೆಯಾಗು ೧೦೧

ಶಾಂಭವಿಯ ಮುದ್ರೆಯ ವಿಡಂಬಿಸಿ ಎನಗೆ ಸ್ವ-
ಯಂಭುಲಿಂಗವನು ಕರಾಂಬುಜಕಿತ್ತ ಕರು-
ಣಾಂಬುನಿಧಿ ಗುರುವೆ ಕೃಪೆಯಾಗು ೧೦೨



ಕಣ್ಮೂಗುಕಿವಿಬಲಿವ ಷಣ್ಮುಖಿಯ ಮುದ್ರೆ ಬಹು
ಕಿಣ್ಣಮೆಂದು ಬಿಡಿಸಿ ಷಣ್ಮಂತ್ರಲಿಂಗವ ತೋ-
ದಾರ್ಣ್ಯ ಶ್ರೀ ಗುರುವೆ ಕೃಪೆಯಾಗು ೧೦೩

ಖೇಚರಿಯ ಮುದ್ರೆಯ ನೀನಾಚರಿಸಲೇನುಂಟು
ಗೋಚರಿಪ ಲಿಂಗದಾಚರಣೆ ಘನವೆಂದು
ಸೂಚಿಸಿದ ಗುರುವೆ ಕೃಪೆಯಾಗು ೧೦೪

ಹಠಯೋಗ ಕರ್ಮಸಂಘಟದಿಂದಾಗುವ ಮೋಕ್ಷ
ಸಟೆಯೆಂದು ಬಿಡಿಸಿ ಘಟದ ಸಂಗಡ ಲಿಂಗ
ದಿಟವೆಂದ ಗುರುವೆ ಕೃಪೆಯಾಗು ೧೦೫

ಹಲವು ಯೋಗವ ಮಾಡಿ ಫಲವೇನು ಮಗನೆ ಎಂ-
ದೊಲಿದು ಲಿಂಗಾಂಗ ಸುಲಭಯೊಗವ ನೋಡ-
ಗಲಿಸಿದ ಗುರುವೆ ಕೃಪೆಯಾಗು ೧೦೬

ಈ ಲಿಂಗವೆ ನಿನ್ನಂಗಕ್ಕಾಲಿಂಗನವಾಗಲ್ಕೆ
ನೀ ಲಿಂಗವು ನಿನ್ನ ಮೈ ಲಿಂಗವೆಂದೆನ್ನೊಳ್
ಕೀಲಿಸಿದ ಗುರುವೆ ಕೃಪೆಯಾಗು ೧೦೭

ಈ ಲಿಂಗ ಸತ್ಕ್ರಿಯಾಮೂಲ ಸಮ್ಯಜ್ಞಾನ-
ಪಾಲಯ ನೀ ತ್ರೈಕಾಲ ಪೂಜಿಪುದೆಂದು
ಪಾಲಿಸಿದ ಗುರುವೆ ಕೃಪೆಯಾಗು ೧೦೮

ಈ ಲಿಂಗವ ಭಕ್ತಿವ್ರತಶೀಲನೇಮಗಳಿಂದ
ಓಲೈಸು ನಿನಗೆ ಮೇಲಾದ ಪದವಹುದೆಂದು
ಪಾಲಿಸಿದ ಗುರುವೆ ಕೃಪೆಯಾಗು ೧೦೯

ಸಾಲೋಕ್ಯ ಮೊದಲಾದ ಮೇಲಾದ ಪದನಾಲ್ಕು
ಈ ಲಿಂಗಪದಕೆ ಕೀಳಾಗುತಿಹವೆಂದು
ಪೇಳಿದ ಗುರುವೆ ಕೃಪೆಯಾಗು ೧೧೦

ಈ ಲಿಂಗದೊಡಲೊಳಗೆ ಮೂಲೋಕವಡಗಿಹುದ
ಮೂಲೋಕದೊಳಗೆ ಈ ಲಿಂಗದ ಸಂಚಾರವ
ಪಾಲಿಸಿದ ಗುರುವೆ ಕೃಪೆಯಾಗು ೧೧೧

ಆದಿಪೀಠವೆ ಗುರು ಮೇಲಾದ ಪೀಠವೆ ಲಿಂಗ-
ನಾದಿಗೋಮುಖ ವಿನೋದ ಜಂಗಮವೆಂದು
ಬೋಧಿಸಿದ ಗುರುವೆ ಕೃಪೆಯಾಗು ೧೧೨

ಅಡಿಯು ಪೀಠವೆ ಇಷ್ಟ ಮುಡಿಯು ಪೀಠವೆ ಪ್ರಾಣ
ನಡುವಣ ಗೋಮುಖವೆ ಧೃಡ ಭಾವಲಿಂಗವೆಂ-
ದೊಡನುಸುರ್ದ ಗುರುವೆ ಕೃಪೆಯಾಗು ೧೧೩

ಮೊದಲ ಪೀಠವೆ ಸ್ವಯ ಮೇಲ್ ತುದಿಯ ಪೀಠವೆ ಚರ ಮ-
ಧ್ಯದ ಗೋಮುಖವೆ ಪರತತ್ತ್ವ ತ್ರಿವಿಧವೆಂ-
ಬುದ ಪೇಳಿದ ಗುರುವೆ ಕೃಪೆಯಾಗು ೧೧೪

ಗುರು ಲಿಂಗ ಜಂಗಮವು ವರಭಾವ ಪ್ರಾಣೇಷ್ಟ
ಸ್ಥಿರ ಚರ ಪರ ಮೂರು ಕರದಿಷ್ಟಲಿಂಗವೆಂ-
ದೊರೆದ ಶ್ರೀ ಗುರುವೆ ಕೃಪೆಯಾಗು ೧೧೫

ತರಳ ಕೇಳ್ 'ಅ ಉ ಮಾ' ಕ್ಷರವೆ ಮೂರೊಂದಾದ
ವರಮೂಲ ಪ್ರಣವದಿರವೆ ಈ ಲಿಂಗವೆಂ-
ದೊರೆದ ಶ್ರೀ ಗುರುವೆ ಕೃಪೆಯಾಗು ೧೧೬

ತಾರಕಾಕೃತಿ ಮೊದಲಾದಾರು ಕೃತಿಗಳೆ ಲಿಂಗ-
ದಾರು ಸ್ಥಾನದೊಳು ಆರು ಪ್ರಣವಾಕೃತಿಯ
ತೋರಿಸಿದ ಗುರುವೆ ಕೃಪೆಯಾಗು ೧೧೭

ವೃತ್ತ ವರ್ತುಳ ಮಧ್ಯ ಮತ್ತೆ ಗೋಮುಖ ನಾಳ
ಚಿತ್‌ಪೀಠವಾರು ಗೊತ್ತ ತೋರಿಸಿ ಲಿಂಗ-
ವಿತ್ತ ಶ್ರೀ ಗುರುವೆ ಕೃಪೆಯಾಗು ೧೧೮



ಬಾಲ ಬಾರೆಂದೆನ್ನ ಕೈಲಿ ಲಿಂಗವ ಕೊಟ್ಟು
ಈ ಲಿಂಗದೊಳಗೆ ಮೂಲ ಷಣ್ಮಂತ್ರಗಳ
ಕೀಲಿಸಿದ ಗುರುವೆ ಕೃಪೆಯಾಗು ೧೧೯

ಚಾರು ವೃತ್ತದೊಳಿರ್ಪಾಚಾರಲಿಂಗದೊಳಗೆ 'ನ'-
ಕಾರ ಮೊದಲಾದ ಆರು ಪ್ರಣವದ ನೆಲೆಯು
ತೋರಿಸಿದ ಗುರುವೆ ಕೃಪೆಯಾಗು ೧೨೦

ಪರಮವರ್ತುಳದ ಶ್ರೀ ಗುರುಲಿಂಗದೊಳಗೆ 'ಮಃ'-
ಕ್ಷರವೆ ಮುಂತಾದ ವರಷಡಾಕ್ಷರವ ನೀ-
ನೊರೆದೆ ಶ್ರೀ ಗುರುವೆ ಕೃಪೆಯಾಗು ೧೨೧

ಅವಿರತ ಕಟಿಯ ಶ್ರೀ ಶಿವಲಿಂಗದೊಳು 'ಶಿ' ಕಾ-
ರವ ಮೊದಲಾದ ತವೆ ಷಣ್ಮಂತ್ರವ ತೋರಿ-
ದವಿರಳ ಗುರುವೆ ಕೃಪೆಯಾಗು ೧೨೨

ಇಂತು ಗೋಮುಖದೊಳಿಪ್ಪಂತ ಜಂಗಮಲಿಂಗ
ಮಂತ್ರ 'ವಾ' ಕಾರ ಮುಂತಾದ ಷಣ್ಮಂತ್ರ-
ಮಂ ತೋರಿದ ಗುರುವೆ ಕೃಪೆಯಾಗು ೧೨೩

ನಾದ ನಾಳದ ಸುಪ್ರಸಾದ ಲಿಂಗದೊಳು ನಿ-
ರ್ಭೇದವಹ 'ಯ' ಕಾರಾದಿ ಷಣ್ಮಂತ್ರಗಳ
ಬೋಧಿಸಿದ ಗುರುವೆ ಕೃಪೆಯಾಗು ೧೨೪

ಬಹು ಮೇಲು ಪೀಠದ ಮಹಲಿಂಗದೊಳಗೆ ತಾ-
ನಿಹ ಓಂಕಾರದಿ ಸಹಜ ಷಣ್ಮಂತ್ರವನ-
ರುಹಿದೈ ಗುರುವೆ ಕೃಪೆಯಾಗು ೧೨೫

ಇಂತಪ್ಪ ಲಿಂಗದಾದ್ಯಂತ ಷಡುಸ್ಥಾನದೊಳು
ಅಂತ್ಯಾದಿ ಮಹಂತ ಮಂತ್ರಮೂಲವ ತೋರಿ-
ದಂತಪ್ಪ ಗುರುವೆ ಕೃಪೆಯಾಗು ೧೨೬

ತನಯ ಪೇಳುವೆ ನಿನ್ನ ತನುವಿನೊಳಗೆ ಲಿಂಗ-
ವನು ಧರಿಸಿಕೊಂಬ ಘನಚಾರಿತ್ರವ ಕೇಳೆಂ-
ದನಘ ಶ್ರೀ ಗುರುವೆ ಕೃಪೆಯಾಗು ೧೨೭

ನರಮಾನವರಿಗೊಮ್ಮೆ ಕರವಾಂತು ಬೇಡುವಾ-
ಚರಣೆಯನುಳಿದು ಕರಪೀಠದೊಳು ಲಿಂಗವ
ಧರಿಸೆಂದ ಶ್ರೀ ಗುರುವೆ ಕೃಪೆಯಾಗು ೧೨೮

ಇಂದ್ರಿಯೇಚ್ಛೆಗೆ ಹರಿವ ಮಂದ ಬುದ್ಧಿಯ ನೀಗಿ-
ದಂದು ಲಿಂಗವನು ಕಂದ ಕಕ್ಷೆಯೊಳು ಧರಿ-
ಸೆಂದ ಶ್ರೀ ಗುರುವೆ ಕೃಪೆಯಾಗು ೧೨೯

ಪರವೆಣ್ಣಿಗೆದೆಗೊಟ್ಟು ಭರದಿಂದಲಪ್ಪುವ
ದುರಿತವನುಳಿದು ಉರಸಜ್ಜೆಯೊಳ್ ಲಿಂಗವ
ಧರಿಸೆಂದ ಗುರುವೆ ಕೃಪೆಯಾಗು ೧೩೦

ನರಮನುಜನು ಪಟ್ಟದರಸಾಗಲವಗೆ ನೀ
ಶಿರಬಾಗದಿರಲು ಶಿರದೊಳ್ ಲಿಂಗವನು ತಳೆದಾ-
ಚರಿಸೆಂದ ಗುರುವೆ ಕೃಪೆಯಾಗು ೧೩೧

ಸಕಲರ್ಗೆ ಸಟೆಯೆ ಪಾತಕವೆಂದು ನೀಗಿ ಚಿತ್-
ಸುಖದ ಲಿಂಗವನು ಮುಖಸಜ್ಜೆಯೊಳಿಡಬೇಕೆಂ-
ದಕಳಂಕ ಗುರುವೆ ಕೃಪೆಯಾಗು ೧೩೨

ಸ್ವಮತ ಮಾರ್ಗವ ಬಿಟ್ಟು ವಿಮುಖವಾಗದೊಡೆ ಸತ್-
ಕ್ರಮದ ಲಿಂಗವನು ಅಮಳೈಕ್ಯದೊಳ್ ಧರಿಸೆಂದ
ಮಮಗುರುವೆ ಕೃಪೆಯಾಗು ೧೩೩

ಪರಮೇಷ್ಟ ಲಿಂಗವ ಧರಿಸಿದಾಕ್ಷಣ ನಿನ್ನಾ
ಶರೀರವೇ ಲಿಂಗದಿರವಾಗುತಿಹುದೆಂಬು-
ದರುಹಿದ ಗುರುವೆ ಕೃಪೆಯಾಗು ೧೩೪

ಆಡಿಯು ಸೋಂಕಲು ಸರ್ಪ ಮುಡಿಗೆ ವಿಷವೇರ್ವಂತೆ
ಮೃಡಲಿಂಗದ ಸೋಂಕುವೊಡಲ ಪಬ್ಬುರ್ವುದೆಂದು
ನುಡಿದ ಶ್ರೀ ಗುರುವೆ ಕೃಪೆಯಾಗು ೧೩೫

ಗ್ರಹ ಸೋಂಕಿದವ ತಾನೆ ಗ್ರಹವಾಗುತಿಹನಂತೆ
ಮಹಲಿಂಗವ ನೀನು ವಹಿಸಲ್ಕೆ ನೀ ಲಿಂಗ
ವಹೆಯೆಂದ ಗುರುವೆ ಕೃಪೆಯಾಗು ೧೩೬

ಪೊರಗುರಿಯುಲೊಳಗನ್ನ ಪರಿಪಕ್ವವಾದಂತೆ
ಹೊರಗಣ ಸತ್-ಕ್ರಿಯಾಂತರದ ಸುಜ್ಞಾನವೆಂ-
ದೊರೆದ ಶ್ರೀ ಗುರುವೆ ಕೃಪೆಯಾಗು ೧೩೭

ಕುವರ ಕೇಳೀ ಲಿಂಗ ನವಚಕ್ರದೊಳಗೆ ತಾ
ನವಲಿಂಗವಾಗಿ ತವೆ ರಾಜಿಸುವುದ ಪೇ-
ಳುವೆನೆಂದ ಶ್ರೀ ಗುರುವೆ ಕೃಪೆಯಾಗು ೧೩೮

ಚಾರು ಚೌಕೆಸಳಿನಾಧಾರ ಚಕ್ರದೊಳು ನ-
ಕಾರ ವಿಗ್ರಹವಾಚಾರ ಲಿಂಗವಿದೆಂದು
ತೋರಿದ್ಯೆ ಗುರುವೆ ಕೃಪೆಯಾಗು ೧೩೯

ಸ್ಪಷ್ಟ ಷಡುದಳದ ಸ್ವಾಧಿಷ್ಠಾನ ಚಕ್ರದೊಳು
ಶ್ರೇಷ್ಠ ಮಃ ಪ್ರಣವೋತ್‌ಕೃಷ್ಟ ಗುರುಲಿಂಗವ ತೋ-
ರ್ದಿಷ್ಟ ಮಹಾಗುರುವೆ ಕೃಪೆಯಾಗು ೧೪೦

ಈರೈದು ದಳದ ಮಣಿಪೂರಕಚಕ್ರದೊಳು ಶಿ-
ಕಾರ ಚಿತ್ ಪ್ರಣವೋದ್ಧಾರ ಶಿವಲಿಂಗವನು
ತೋರಿಸಿದ ಗುರುವೆ ಕೃಪೆಯಾಗು ೧೪೧

ಮಿನುಗುವ ದ್ವಾದಶಪತ್ರದನಹತಚಕ್ರದೊಳು ವಾ-
ಮನು ಘನವಿಗ್ರಹದಾ ಚಿನುಮಯ ಜಂಗಮಲಿಂಗ-
ವನು ತೋರಿದ ಗುರುವೆ ಕೃಪೆಯಾಗು ೧೪೨

ಪದಿನಾರು ದಳದಂಬುಜದ ವಿಶುದ್ಧಿಯೊಳಿರ್ಪ
ಸದಮಳ ಯ ಪ್ರಣವವದು ಶೇಷಲಿಂಗವೆಂ-
ಬುದ ಪೇಳ್ದ ಗುರುವೆ ಕೃಪೆಯಾಗು ೧೪೩

ಪ್ರಾಜ್ಞಗುರುವರ ದ್ವಿದಳದಾಜ್ಞಾಚಕ್ರದೊಳು ಸ-
ರ್ವಜ್ಞ ಓಂಕಾರಮಗ್ನ ಮಹಲಿಂಗವನು
ಸೌಜ್ಞೆಯಿಂದೊರೆದೆ ಕೃಪೆಯಾಗು ೧೪೪

ಸಾವಿರದಳದಬ್ಜದಾ ವಾಗ್ವರನ ರಂಧ್ರದೊಳು
'ಅಉಮಾ'ಕ್ಷರದ ಜೀವನಿಷ್ಕಳಲಿಂಗವ
ನೀವರುಹಿದ ಗುರುವೆ ಕೃಪೆಯಾಗು ೧೪೫

ಶಿಖೆಯೊಳು ತ್ರಿದಳ ವ್ಯಾಪಕವಾದ "ಬಸವ" ನಾ-
ಮಕದ ನಿಃಶೂನ್ಯ ಸುಕಳಲಿಂಗವ ತೋರಿ-
ದಕಳಂಕ ಗುರುವೆ ಕೃಪೆಯಾಗು ೧೪೬

ಮಂಜುಳ ಮಹಾದೇಶ ದಳಕಂಜದೊಳು ಮಹಪ್ರಣವ
ವ್ಯಂಜನವಿಕ್ಕಿದ ನಿರಂಜನ ಲಿಂಗವ ತೋರಿ
ರಂಜಿಸುವ ಗುರುವೆ ಕೃಪೆಯಾಗು ೧೪೭

ಅಂಗಾಂಗ ಪಿಂದಳದಗ್ರದಣಿಚಕ್ರದೊಳು ಭಕ್ತಿ
ಸಂಗತ ಪಿಡಿದಿರ್ದಾ ಮಹಲಿಂಗದ ನೆಲೆಯು
ಪ್ರಾಣಾ ಎಂದ ಗುರುವೆ ಕೃಪೆಯಾಗು ೧೪೮

ಮತ್ತೆ ಮತ್ಕರದಿಷ್ಟ ನಿತ್ಯ ನಿಜಲಿಂಗವನು
ಹತ್ತು ಚಕ್ರದೊಳು ಗೊತ್ತ ತೋರಿಸಿಕೊಟ್ಟ
ಸತ್ಯ ಸದ್‌ಗುರುವೆ ಕೃಪೆಯಾಗು ೧೪೯

ಕಂದ ಕೇಳೀ ಲಿಂಗ ಮುಂದೆ ಕರ್ಮೇಂದ್ರಿಯದಿ
ನಿಂದ ನಿಲುಕಡೆಯನೊಂದೊಂದು ಪೇಳ್ವೆ ನಿನ-
ಗೆಂದ ಶ್ರೀ ಗುರುವೆ ಕೃಪೆಯಾಗು ೧೫೦

ಮೊದಲೆ ದುರ್ಮಲಗಳೆವ ತುದಿಗಾನಂದವ ತಳೆವ
ಗುದದೊಳಾಚಾರ ವಿದಿತ ಲಿಂಗವನು ಪೇ-
ಳ್ದಧಿಕಾರಿ ಗುರುವೆ ಕೃಪೆಯಾಗು ೧೫೧

ಪರರ ಸಂಗವೆ ಕೆಟ್ಟ ದುರಿತವೆಂದದ ಬಿಟ್ಟ
ವರಗುಹ್ಯವೆ ದಿಟ್ಟ ಗುರುಲಿಂಗವೆಂಬುದೆ-
ಚ್ಚರಗೊಟ್ಟ ಗುರುವೆ ಕೃಪೆಯಾಗು ೧೫೨

ಬಿಡದೆ ಸತ್‌ಪಥಮಾರ್ಗವಿಡಿದು ತಾ ನುಡಿದಂತೆ
ನಡೆವ ಪಾದೇಂದ್ರಿಯು ಮೃಡಶಿವಲಿಂಗವಿದೆಂದು
ನುಡಿದ ಶ್ರೀ ಗುರುವೆ ಕೃಪೆಯಾಗು ೧೫೩

ಜಡಸಂಸಾರದ ತೆಕ್ಕೆ ಸಡಿಲಿಸಿ ಲಿಂಗವ ದೃಢದಿ
ಪಿಡಿವ ಪಾಣೇಂದ್ರಿ ಒಡೆಯ ಜಂಗಮಲಿಂಗ-
ದೊಡಲೆಂದ ಗುರುವೆ ಕೃಪೆಯಾಗು ೧೫೪

ಕಾಕು ಸಟೆಮಾತುಗಳ ನಿಃಕರಿಸಿ ನಿಜಸತ್ಯ-
ವಾಕ್ಕೇ ಸುಪ್ರಸಾದದೇಕಲಿಂಗವಿದು ಬಹು
ಜೋಕೆಂದ ಗುರುವೆ ಕೃಪೆಯಾಗು ೧೫೫

ಪಂಚಕರ್ಮೇಂದ್ರಿಯದಿ ಸಂಚರಿಸುವ ನಿಃಪ್ರ-
ಪಂಚ ಮಹಲಿಂಗ ಕಂಚುಕ ನಿನಗೆಂದ ನಿರ್-
ವಂಚಕ ಶ್ರೀಗುರುವೆ ಕೃಪೆಯಾಗು ೧೫೬

ಕರ್ಮೇಂದ್ರಿಯಗಳಿಷ್ಟ ಬ್ರಹ್ಮದಂಘ್ರಿಗಳೆಂಬ
ಮರ್ಮವನು ತೋರಿ ನಿರ್ಮಲನೆಂದೆನಿಸಿದ ಸ-
ದ್ಧರ್ಮಿ ಶ್ರೀ ಗುರುವೆ ಕೃಪೆಯಾಗು ೧೫೭

ಪುತ್ರ ಕೇಳೀ ಲಿಂಗ ಶ್ರೋತ್ರಾದಿ ಇಂದ್ರಿಯ ತ-
ನ್ಮಾತ್ರೆಯ ಸುಜ್ಞಾನ ಮಾತ್ರದೊಳರಿಯೆಂದ
ಧಾತ್ರೀಶ ಗುರುವೆ ಕೃಪೆಯಾಗು ೧೫೮

ನಾಸಿಕೇಂದ್ರಿಯದಿ ಸದ್‌ವಾಸನೆಯ ಕೊಂಬುದು-
ಲ್ಲಾಸದಾಚಾರ ವಾಸದ ಲಿಂಗವಿದೆಂದುಪ-
ದೇಶಿಸಿದ ಗುರುವೆ ಕೃಪೆಯಾಗು ೧೫೯

ರಸನೇಂದ್ರಿಯದೊಳು ಶೋಭಿಸುವ ಚಿದ್‌ರಸವ ಭೋ-
ಗಿಸುವ ಬಹುರಸಿಕ ಅಸಮ ಗುರುಲಿಂಗವೆಂ-
ದುಸುರಿದ ಗುರುವೆ ಕೃಪೆಯಾಗು ೧೬೦

ನಯನೇಂದ್ರಿಯದೊಳು ಚಿನ್ಮಯಾಮಯರೂಪ ನೋಟ ತನ್-
ಮಯವೆ ಶಿವಲಿಂಗ ಸ್ವರೂಪವೆಂದು ನಂಬು ನಿ-
ಶ್ಚಯವೆಂದ ಗುರುವೆ ಕೃಪೆಯಾಗು ೧೬೧

ಅಂಗ ಸೋಂಕಿತದ ಸುಖವೆ ಲಿಂಗಸ್ವರೂಪನವಾದ
ಲಿಂಗವ ತ್ವಗಿಂದ್ರಿಯವು ಜಂಗಮಲಿಂಗವಿದೆಂದು
ಕಂಗೊಳಿಸಿದ ಗುರುವೆ ಕೃಪೆಯಾಗು ೧೬೨

ಆ ಶ್ರೋತ್ರೇಂದ್ರಿಯ ಸಿದ್ಧಿಸುವ ಶಬ್ದವಗೇಳ್ ವಿ-
ಶೋಧವದೇ ತಾ ಸುಪ್ರಸಾದ ಲಿಂಗವಿದೆಂದು
ಬೋಧಿಸಿದ ಗುರುವೆ ಕೃಪೆಯಾಗು ೧೬೩

ಪ್ರವರಜಿಹ್ವೇಂದ್ರಿಯದಿ ಪಂಚವಿಧ ವಿಷಯ ಸುಖವ ಸಂ-
ಭ್ರಮದಿ ಭೋಗಿಪುದು ಸದಮಲ ಮಹಲಿಂಗವೆಂ-
ಬುದ ಪೇಳಿದ ಗುರುವೆ ಕೃಪೆಯಾಗು ೧೬೪

ಘ್ರಾಣಾದಿ ಜ್ಞಾನೇಂದ್ರಿಯ ಜಾಷ ಷಣ್ಮುಖಕೆ ಸತ್-
ಪ್ರಾಣವಾಗಿರ್ಪ ಪ್ರಾಣಲಿಂಗವಿದೆಂದು
ಜಾಣ್ಕೈಸಿದ ಗುರುವೆ ಕೃಪೆಯಾಗು ೧೬೫

ಮತ್ತೆ ಕೇಳೀ ಲಿಂಗ ಚಿತ್ತಾದಿ ಕರಣಂಗ-
ಳತ್ತಲಿರುತಿರ್ಪ ಗೊತ್ತ ಪೇಳುವೆ ನಿನಗೆಂ-
ದುತ್ತಮದ ಗುರುವೆ ಕೃಪೆಯಾಗು ೧೬೬

ಕುಚ್ಚಿತ್ರವಳಿದುಳಿದಾಸಚ್ಚಿತ್ತಾಹಸ್ತದೊಳು
ಸಚ್ಚರಿತಾಚಾರನಿಶ್ಚಯಲಿಂಗವೆಂ-
ದುಚ್ಚರಿಸಿದ ಗುರುವೆ ಕೃಪೆಯಾಗು ೧೬೭

ಬದ್ಧ ಕಲ್ಮಷವಳಿದ ಬುದ್ಧಿವಾಣಿಯೊಳು ಶತ
ಸಿದ್ಧವಾಗಿರ್ಪಸಾಧ್ಯಗುರುಲಿಂಗವೆಂ-
ದುದ್ಧರಿಸಿದ ಗುರುವೆ ಕೃಪೆಯಾಗು ೧೬೮

ಹಂಕಾರವಳಿದಿರ್ದ ನಿರಹಂಕಾರ ಹಸ್ತದೊಳು
ಅಂಕಿತವಾಗಿರ್ಪ ಶಂಕರ ಶಿವಲಿಂಗವೆಂ-
ದಂಕಿಸಿದ ಗುರುವೆ ಕೃಪೆಯಾಗು ೧೬೯

ಕುಮನ ಕುಹಕವನುಳಿದ ಸುಮನ ಹಸ್ತದೊಳು ಜಂ-
ಗಮಲಿಂಗವಿರ್ಪ ಕ್ರಮವ ನಿರೂಪಿಸಿದ
ವಿಮಲ ಶ್ರೀಗುರುವೆ ಕೃಪೆಯಾಗು ೧೭೦

ನೂನವಿಲ್ಲದ ದಿವ್ಯಜ್ಞಾನ ಕರಪೀಠದೊಳು
ಮೌನ ಪ್ರಸಾದ ಧ್ಯಾನಲಿಂಗವಿದೆಂದು
ನೀನೊರೆದೈ ಗುರುವೆ ಕೃಪೆಯಾಗು ೧೭೧

ಜೀವಗುಣವಳಿದ ಸದ್‌ಭಾವ ಹಸ್ತವನೆ ಸಂ-
ಜೀವ ಮಹಲಿಂಗ ಠಾವ ಮಾಡಿಹುದೆಂದ
ದೇವ ಶ್ರೀ ಗುರುವೆ ಕೃಪೆಯಾಗು ೧೭೨

ಕರಣ ಕಾರಣವಾರು ಕರಪೀಠದೊಳಗಿರ್ಪ
ವರಭಾವಲಿಂಗದಿರವ ತೋರಿಸಿಕೊಟ್ಟ
ಪರಮ ಶ್ರೀಗುರುವೆ ಕೃಪೆಯಾಗು ೧೭೩

ಕುವರ ಕೇಳೀಲಿಂಗ ತ್ರಿವಿಧಬಗೆಯಾಗಿರ್ಪ
ವಿವರವನು ನಿನಗೆ ತವೆ ಸುಲಭದಿಂದ ಪೇ-
ಳುವೆನೆಂದಾ ಗುರುವೆ ಕೃಪೆಯಾಗು ೧೭೪

ಅಂಗತ್ರಯದೊಳಗಿಪ್ಪ ಲಿಂಗತ್ರೈವಿಧವಾಗಿ
ಸಾಂಗವಾಗಿಹ ಪ್ರಸಂಗವನೊರೆದ ಶ್ರೀ
ಮಂಗಳಮಯ ಗುರುವೆ ಕೃಪೆಯಾಗು ೧೬೫

ತನುಹಸ್ತದೊಳಗಿಪ್ಪ ಮನಹಸ್ತದೊಳು ಪ್ರಾಣಾ-
ತ್ಮನ ಹಸ್ತದೊಳಗೆ ಘನಭಾವಲಿಂಗವೆಂ-
ದನಘ ಶ್ರೀಗುರುವೆ ಕೃಪೆಯಾಗು ೧೬೬

ರೂಪಕವೆ ಇಷ್ಟ ಚಿದ್-ರೂಪಕವೆ ಪ್ರಾಣ ನಿರ್-
ಲೇಪಕವೆ ಭಾವ ವ್ಯಾಪಕ ತ್ರೈಲಿಂಗವನಿ-
ರೂಪಿಸಿದ ಗುರುವೆ ಕೃಪೆಯಾಗು ೧೬೭

ತನು ಇಷ್ಟಲಿಂಗವಾ ಮನ ಪ್ರಾಣಲಿಂಗವಾ-
ತ್ಮನೆ ಭಾವಲಿಂಗದನುವ ಬೋಧಿಸಿದ ಚಿದ್-
ಘನ ಗುರುವೆ ಕೃಪೆಯಾಗು ೧೬೮

ತೋರತನುವಿಪ್ಪ ಗಂಭೀರತನು ಪ್ರಾಣ ಸತ್-
ಕಾರಣತನು ಭಾವ ಧೀರ ತ್ರೈವಿಧಲಿಂಗವ
ಪೂರೈಸಿದ ಗುರುವೆ ಕೃಪೆಯಾಗು ೧೬೯

ಮನವಿಷ್ಟಲಿಂಗ ಸನ್‌ಮನಪ್ರಾಣಲಿಂಗ ಉನ್-
ಮನಭಾವಲಿಂಗ ಮನತ್ರಯ ಲಿಂಗವನೆನ-
ಗನುಗೊಳಿಸಿದ ಗುರುವೆ ಕೃಪೆಯಾಗು ೧೭೦

ಆತ್ಮನೇ ಇಷ್ಟಾಂತರಾತ್ಮನೇ ಪ್ರಾಣ ಪರ-
ಮಾತ್ಮನೇ ಭಾವ ಸ್ವಾತ್ಮ ತ್ರೈಲಿಂಗ ಬೋ-
ಧಾತ್ಮ ಶ್ರೀಗುರುವೆ ಕೃಪೆಯಾಗು ೧೭೧

ಅಂಗವಸುಭಾವದೊಳು ಲಿಂಗ ತ್ರೈವಿಧವಾಗಿ
ಸಂಗವಾಗಿಹುದ ಹಿಂಗದೆನಗೊಲಿದು ಪ್ರ-
ಸಂಗಿಸಿದ ಗುರುವೆ ಕೃಪೆಯಾಗು ೧೮೨

ಅಂಗವೇ ಇಷ್ಟಾಂತರಂಗವೇ ಪ್ರಾಣೋತ್ತ-
ಮಾಂಗವೇ ಭಾವಲಿಂಗ ತ್ರೈವಿಧವ ನೀ
ಕಂಗೊಳಿಸಿದ ಗುರುವೆ ಕೃಪೆಯಾಗು ೧೮೩

ಜೀವವಿಶ್ವನೆ ಇಷ್ಟ ಜೀವತೈಜಸ ಪ್ರಾಣ
ಜೀವ ನೆರೆ ಪ್ರಾಜ್ಞ ಭಾವಲಿಂಗವಿದೆಂದ
ದೇವ ಶ್ರೀಗುರುವೆ ಕೃಪೆಯಾಗು ೧೮೪

ಭಾವವೇ ಇಷ್ಟಾನುಭಾವವೇ ಪ್ರಾಣ ನಿರ್-
ಭಾವವೇ ತೃಪ್ತಿ ಭಾವ ತ್ರೈಲಿಂಗವ ನೀ-
ನಾವರಿಸಿದ ಗುರುವೆ ಕೃಪೆಯಾಗು ೧೮೫

ಅಡಿ ಇಷ್ಟಲಿಂಗ ಕೇಳ್ ನಡು ಪ್ರಾಣಲಿಂಗ ಮೇಲ್-
ನುಡಿ ಭಾವಲಿಂಗವಿಡಿದು ತ್ರೈಲಿಂಗ ನಿ-
ನ್ನೊಡಲೆಂದ ಗುರುವೆ ಕೃಪೆಯಾಗು ೧೮೬

ಅಂಗವೇ ಇಷ್ಟ ಪತ್ಸಂಗವೇ ಪ್ರಾಣವಾ
ಸಂಗವೆ ಭಾವಲಿಂಗ ತ್ರೈವಿಧವ ಪ್ರ-
ಸಂಗಿಸಿದ ಗುರುವೆ ಕೃಪೆಯಾಗು ೧೮೭

ಎಡನಿಷ್ಟಲಿಂಗ ಬಲಗಡೆ ಪ್ರಾಣಲಿಂಗ ನಡು-
ಗಡೆ ಭಾವಲಿಂಗದೊಡಲೆಂದು ಪೇಳ್ದ ಎ-
ನ್ನೊಡೆಯ ಶ್ರೀಗುರುವೆ ಕೃಪೆಯಾಗು ೧೮೮

ಕ್ರಿಯಾ ಅಭಿನಯವಿಷ್ಟ ಬಾಯ ವಚನವೆಪ್ರಾಣ
ವಿನಿಯೋಗವೆ ಭಾವಲಿಂಗವ್ಯವೆಂದೊರೆದ ಮತ್.
ಪ್ರಿಯ ಶ್ರೀಗುರುವೆ ಕೃಪೆಯಾಗು ೧೪೯

ನಡೆ ಇಷ್ಟಲಿಂಗ ಮಾರ್ನುಡಿ ಪ್ರಾಣಲಿಂಗ ನಡೆ
ನುಡಿಗಳೇಕವಾದೊಡೆ ಭಾವಲಿಂಗವೆಂ.
ದೊಡನುಸುರ್ದ ಗುರುವೆ ಕೃಪೆಯಾಗು ೧೫೦

ನಿಲವುಸಿಂತುದೆ ಇಷ್ಟ ಕಾಳತುಳುಕೊಂಡುದೆ ಪ್ರಾಣ
ಮಲಗಿಕೊಂಡಿರುದೆ ಸಲೆ ಭಾವಲಿಂಗವೆಂ.
ದೊಲಿದ ಶ್ರೀಗುರುವೆ ಕೃಪೆಯಾಗು ೧೫೧

ತನುವಿನ ಜಾಗ್ರವೆ ಇಷ್ಟ ಕನಸು ಕಾಂಬುದೆ ಪ್ರಾಣ
ತನುಮನ ಸುಷುಪ್ತಿ ಘನಭಾವಲಿಂಗವೆಂ.
ದನುಪಮ ಶ್ರೀಗುರುವೆ ಕೃಪೆಯಾಗು ೧೫೨

ದೀಕ್ಷಾಗುರು ಕರದಿಷ್ಟ ಶಿಕ್ಷಾಗುರು ಪರಪ್ರಾಣ
ಮೋಕ್ಷಗುರು ಭಾವಾಪೇಕ್ಷಲಿಂಗವೆಂದು
ರಕ್ಷಿಸಿದ ಶ್ರೀ ಗುರುವೆ ಕೃಪೆಯಾಗು ೧೫೩

ಅಂಗದಾಚರಣೇಷ್ಟ ಲಿಂಗ ಮಂತ್ರವೆ ಪ್ರಾಣ
ಸಂಗವೇ ಭಾವಲಿಂಗ ತ್ರೈವಿಧವನೀ.
ಸಂಗ್ರಹಿಪೆ ಗುರುವೆ ಕೃಪೆಯಾಗು ೧೫೪

ಸ್ಥಿರಜಂಗಮಿಷ್ಟ ಸಂಚರಜಂಗಮ ಪ್ರಾಣ ತತ್.
ಪರ ಜಂಗಮ ಭಾವದಿರವೆಂದು ಪೇಳ್ದ ಮುದ್.
ಗುರುವೆ ನೀ ಎನಗೆ ಕೃಪೆಯಾಗು ೧೫೫

ಗುರುಪಾದೋದಕವಿಷ್ಟ ವರಲಿಂಗೋದಕ ಪ್ರಾಣ
ಚರಚರಣೋದಕವೆ ಸ್ಥಿರಭಾವಲಿಂಗವೆಂ-
ದೊರೆದ ಶ್ರೀಗುರುವೆ ಕೃಪೆಯಾಗು ೧೯೬

ಶುದ್ಧಶೇಷವೆ ಇಷ್ಟ ಸಿದ್ಧವೇ ಪ್ರಾಣ ಪ್ರ-
ಸಿದ್ಧವೇ ಭಾವ ನಿರ್ಧರ ತ್ರೈಲಿಂಗವಾ ಸ-
ಮುದ್ಧರಿಸಿದ ಗುರುವೆ ಕೃಪೆಯಾಗು ೧೯೭

ಭೂತಿಯೇ ಇಷ್ಟ ವಿಭೂತಿಯೇ ಪ್ರಾಣ ಚಿದ್-
ಭೂತಿಯೇ ಭಾವ ಈ ತ್ರೈಲಿಂಗವ ತೋರ್ದ
ದಾತ ಶ್ರೀಗುರುವೆ ಕೃಪೆಯಾಗು ೧೯೮

ರುದ್ರಾಕ್ಷೀಕ್ಷಣಮಿಷ್ಟ ರುದ್ರಾಕ್ಷಿ ಕಳೆಪ್ರಾಣ
ರುದ್ರಾಕ್ಷಿ ಭಾವವಭದ್ರ ತ್ರೈಲಿಂಗ ಭೂ-
ರುದ್ರ ಶ್ರೀಗುರುವೆ ಕೃಪೆಯಾಗು ೧೯೯

ಮಂತ್ರಮೂಲವೆ ಇಷ್ಟ ಮಂತ್ರಶಾಖೆಯೆ ಪ್ರಾಣ
ಮಂತ್ರವೆ ಭಾವ ಸ್ವತಂತ್ರ ಲಿಂಗವಿದೆಂಬು-
ದಿಂತೊರೆದ ಗುರುವೆ ಕೃಪೆಯಾಗು ೨೦೦

ಅಷ್ಟಾವರಣವೆ ಇಷ್ಟ ಇಷ್ಟಲಿಂಗವೆ ಪ್ರಾಣ
ಅಷ್ಟಷ್ಟಾಭಾವ ಸ್ಪಷ್ಟಲಿಂಗವಿದೆಂದ
ಶ್ರೇಷ್ಠ ಶ್ರೀಗುರುವೆ ಕೃಪೆಯಾಗು ೨೦೧

ತ್ಯಾಗಾಂಗವಿಷ್ಟಕ್ಕೆ ಭೋಗಾಂಗವೆ ಪ್ರಾಣಕ್ಕೆ
ಯೋಗಾಂಗವೆ ಭಾವವಾಗಿಹಲಿಂಗಕ್ಕೆಂದಾ
ಯೋಗಿ ಶ್ರೀಗುರುವೆ ಕೃಪೆಯಾಗು ೨೦೨

ಧ್ಯಾನಾರ್ಚನೆ ಇಷ್ಟಕ್ಕೆ ಜ್ಞಾನಾರ್ಚನೆ ಪ್ರಾಣಕ್ಕೆ
ಮೌನಾರ್ಚನೆ ಭಾವ ತಾನಾದ ಲಿಂಗಕ್ಕೆಂ-
ದಾ ನಿಜಗುರುವೆ ಕೃಪೆಯಾಗು ೨೦೩

ತರುಪುಷ್ಪವೆ ಇಷ್ಟಕ್ಕಂತರಪುಷ್ಪ ಪ್ರಾಣಕ್ಕಂ-
ಬರಪುಷ್ಪವೆ ಭಾವ ಚಿರಲಿಂಗಕ್ಕೆಂದು ನೀ-
ನರುಹಿದ ಗುರುವೆ ಕೃಪೆಯಾಗು ೨೦೪

ಕರಜಪವೆ ಇಷ್ಟಕ್ಕೆ ಸ್ವರಜಪವೆ ಪ್ರಾಣಕ್ಕೆ
ವರಬಯಲ ಜಪವೆ ಸ್ಥಿರಭಾವಲಿಂಗಕ್ಕೆಂ-
ದರಿ ಪೊರೆದ ಗುರುವೆ ಕೃಪೆಯಾಗು ೨೦೫

ಶರೀರಾರ್ಪಣ ಇಷ್ಟಕ್ಕೆ ಕರಣಾರ್ಪಣ ಪ್ರಾಣಕ್ಕೆ
ವರಭಾವಾರ್ಪಣವೆ ಗುರುಭಾವಲಿಂಗಕ್ಕೆಂ-
ದೊರೆದ ಶ್ರೀಗುರುವೆ ಕೃಪೆಯಾಗು ೨೦೬

ಇನ್ನು ಕೇಳೊ ಪುತ್ರ ನಿನ್ನಿಷ್ಟಲಿಂಗ ಚೈ-
ತನ್ಯ ಜಂಗಮದ ಉನ್ನತವ ಹೇಳ್ವೆನೆಂ-
ದೆನ್ನೊಡೆಯ ಶ್ರೀಗುರುವೆ ಕೃಪೆಯಾಗು ೨೦೭

ಲಿಂಗದಾಣ ಹರವೇ ಜಂಗಮವು ಜಂಗಮವೆ
ಲಿಂಗ ತಾನಂಗಸಂಗವೆಂದೊರೆದ ಕೃ-
ಪಾಂಗ ಶ್ರೀಗುರುವೆ ಕೃಪೆಯಾಗು ೨೦೮

ಕರದಿಷ್ಟಲಿಂಗದ ಹರಣ ಜಂಗಮವೆಂದು
ನೆರೆನಂಬಿ ಬಳಿಕ ಎರವಭಾವಿಸಬೇಡೆಂದೊ-
ರೆದ ಶ್ರೀಗುರುವೆ ಕೃಪೆಯಾಗು ೨೦೯

ಅಚರಲಿಂಗಂಗಳಿಗೆ ಸಚರವೇ ಪ್ರಾಣವೆಂ-
ಬುಚಿತಾಗಮೋಕ್ತವಚನ ಸಾರುವವೆಂದು
ವಚಿಸಿದ ಗುರುವೆ ಕೃಪೆಯಾಗು ೨೧೦

ಧರೆಗೆ ನೀರೆರೆಯಲ್ಕೆ ತರುಮರ ಪಣ್ಫಲವಾದಂತೆ
ಚರಲಿಂಗತೃಪ್ತಿ ಕರದಿಷ್ಟಲಿಂಗಕ್ಕೆಂ-
ದೊರೆದ ಶ್ರೀಗುರುವೆ ಕೃಪೆಯಾಗು ೨೧೧

ಜ್ಯೋತಿತಾ ಬತ್ತಿಯುಂಡಾ ತೈಲವನುಂಬಂತೆ
ಜಾತ ಜಂಗಮ ಉಂಡಾ ತೃಪ್ತಿಯೆ ಲಿಂಗಕ್ಕೆಂ-
ದಾತ ಶ್ರೀಗುರುವೆ ಕೃಪೆಯಾಗು ೨೧೨

ಹೊಲವ ಹಸಮಾಡಿದವ ಫಲವ ಬೆಳದುಂಬಂತಾ-
ಮಲಚರವನರ್ಚಿಸಲು ಲಿಂಗದಿಷ್ಟಾರ್ಥ
ಫಲವೆಂದ ಗುರುವೆ ಕೃಪೆಯಾಗು ೨೧೩

ಧರೆಯೆ ವೃಕ್ಷದ ವದನ ಚರವೆ ಲಿಂಗದ ಮುಖವೆಂ-
ದರಿದು ನಿಗಮವುಚ್ಚರಿಸುವುದೆಂಬುದೆ-
ಚ್ಚರಿಸಿರ್ದ ಗುರುವೆ ಕೃಪೆಯಾಗು ೨೧೪

ಹಾಂಗೆ ಕೇಳಿಂತಪ್ಪ ಜಂಗಮವೆಂಬದೇವನ
ಇಂಗಿತವ ನಿನಗೆ ಸಾಂಗದಿಂದೊರೆವೆನೆಂ-
ದಂಗವಿಸಿದ ಗುರುವೆ ಕೃಪೆಯಾಗು ೨೧೫

ಧೇನುವಿಂಡಿನೊಳು ಸುರಧೇನು ತಾನಿರ್ಪಂತೆ
ಮಾನವರೊಳಗುಂ ಜ್ಞಾನ ಜಂಗಮಲಿಂಗನಿ-
ಹನೆಂದ ಶ್ರೀಗುರುವೆ ಕೃಪೆಯಾಗು ೨೧೬

ವೃಕ್ಷದೊಳಗೆ ಕಲ್ಪವೃಕ್ಷ ತಾ ಮೆರೆವಂತೆ ಮು-
ಮುಕ್ಷ ಜಂಗಮವು ಈ ಕ್ಷಿತಿಯೊಳಗಿಹ ನೋಡೆಂ-
ದೀಕ್ಷಿಸಿದ ಗುರುವೆ ಕೃಪೆಯಾಗು ೨೧೭

ವರತಿಥಿಯು ರಾತ್ರಿಯೊಳು ಪರುಷದ ಕಣಿಯುತ್ಪತ್ತಿ
ನರಲೋಕದೊಳಗೆ ಚರಲಿಂಗವಿಹ ನೋಡೆಂ-
ದೊರೆದ ಶ್ರೀಗುರುವೆ ಕೃಪೆಯಾಗು ೨೧೮

ಸುರಭಿಯು ಗೋವಲ್ಲ ಸುರತರುವು ಮರನಲ್ಲ
ಪರುಷ ಶಿಲೆಯಲ್ಲ ಚರಲಿಂಗ ನರನಲ್ಲೆಂ-
ದೊರೆದ ಶ್ರೀಗುರುವೆ ಕೃಪೆಯಾಗು ೨೧೯

ಸ್ವಯಚರಪರ ಜಂಗಮ ಭಕ್ತಿಯುಜ್ಞಾನ ವೈರಾಗ್ಯ
ತ್ರಯವನು ನೀ ವಿನಯದಿಂದ ಕೇಳು ತ-
ನಯನೆಂದ ಗುರುವೆ ಕೃಪೆಯಾಗು ೨೨೦

ಗುರು ಲಿಂಗ ಜಂಗಮಕೆ ತಿಳಿದು ಭಕ್ತಿಯ ಮಾಡಿ
ಪರಮಾನುಕಂಪಾತುರವೆ ಸ್ವಯ ಜಂಗಮವೆಂ-
ದೊರೆದ ಶ್ರೀ ಗುರುವೆ ಕೃಪೆಯಾಗು ೨೨೧

ತತ್ವಜ್ಞಾನವ ತನ್ನ ಭೃತ್ಯರಿಗೆ ಬೋಧಿಸುತ
ಪೃಥ್ವಿ ಸಂಚರಕೆ ಕರ್ತ ಚರಜಂಗಮವೆಂ-
ದುತ್ತಮ ಶ್ರೀ ಗುರುವೆ ಕೃಪೆಯಾಗು ೨೨೨

ಶಿವಸಾಮ್ರಾಜ್ಯವನೊಂದು ಕವಡೆಗೆ ಸಮಗಂಡು ತಂ-
ನವರ ಸತ್ಪಾವನವ ಮಾಡುವ ಪರಜಂಗಮ-
ಶಿವನೆಂದ ಗುರುವೆ ಕೃಪೆಯಾಗು ೨೨೩

ನ್ವಯ ಚರ ಪರ ಮೂರು ನಿನ್ನಯ ತನು ಮನ ಭಾವ ತನ್-
ಮಯವೆ ಒಂದಾದ ದಯಭರಿತ ನೀನೆ ಚಿನ್-
ಮಯನೆಂದ ಗುರುವೆ ಕೃಪೆಯಾಗು ೨೨೪

ಹುಡುಗ ಕೇಳಿನ್ನೊಂದ ನುಡಿಯ ಪೇಳುವೆ ನಿನಗೆ
ನುಡಿದಂತೆ ನಡೆವ ಷಡುಸ್ಥಲ ಬ್ರಹ್ಮದ ಅಂಘ್ರಿ
ಒಡನೆಂದ ಗುರುವೆ ಕೃಪೆಯಾಗು ೨೨೫

ಗುರುಸೇವಾ ಭೃತ್ಯತ್ವ ಚರಲಿಂಗದೇಕತ್ವ
ವರಸತ್ಕಾಯಕದಿಂದುರೆ ದಾಸೋಹವೆ ಭಕ್ತ-
ನಿರವೆಂದಾ ಗುರುವೆ ಕೃಪೆಯಾಗು ೨೨೬

ಗುರುಲಿಂಗ ನೈಷ್ಠೆಯಿಂ ಪರದೈವ ಮೊದಲಾದ
ದುರಿತ ಪಂಚಕವು ನಿರಸನವಾದರೆ ಮಹೇ-
ಶ್ವರನೆಂದ ಗುರುವೆ ಕೃಪೆಯಾಗು ೨೨೭

ರೂಪು ರುಚಿ ತೃಪ್ತಿ ನಿರ್ಲೇಪ ತ್ರೈಲಿಂಗಕ್ಕೆ
ರೂಪಿಸಲು ತಾನೆ ದೀಪಿತ ಪ್ರಸಾದಿಯೆಂ-
ದಾ ಪರಮಗುರುವೆ ಕೃಪೆಯಾಗು ೨೨೮

ದಶವಾಯುವನಪಹರಿಸಿ ಅಸುವ ಲಿಂಗದೊಳಿರಿಸಿ
ರಸಕಸ ಸುಖದುಃಖ ಸುಸಮಗಂಡ ಸುಲಿಂಗಿಯ
ಬೆಸಸಿದ ಶ್ರೀಗುರುವೆ ಕೃಪೆಯಾಗು ೨೨೯

ಅಂಗದಿಂದ್ರಿಯ ವಿಷ್ವಲಿಂಗಪತಿಗೆಡೆಮಾಡಿ
ಸಂಗಸಂಯೋಗದಿಂದಂಗನೆಯೋ ಶರಣನೆಂ-
ದಂಗವಿಸಿದ ಗುರುವೆ ಕೃಪೆಯಾಗು ೨೩೦

ಅರಿವಗಾರದೂಪಿರಾಗಳವದಷ್ಟ ಪಿಧಾವದಗೆಲೆಯು
ತೋರದು ಹಿಮು ಸಯೋಗದಿರದೆ ಲಿಂಗೈಕ್ಯವೆಂ
ದೊರೆದ ಶ್ರೀಗುರುವೆ ಕೃಪೆಯಾಗು ೨೪೧

ಭಕ್ತಿಸ್ಥಲ ಮೊದಲಾಗಿ ಮುಕ್ತಿಸ್ಥಲ ಕಡೆಯಾಗಿ
ವ್ಯಕ್ತ ಷಡುಸ್ಥಲವ ಯುಕ್ತಿಯಿಂ ತೋರಿದಾ ವಿ-
ರಕ್ತ ಶ್ರೀಗುರುವೆ ಕೃಪೆಯಾಗು ೨೪೨

ತ್ರಿಜಗದೊಳಗುಳ್ಳ ಬಹು ಗಜಬಜೆಯನುಳಿದಂತೆ ಸ-
ಹಜವಾಗಿ ಸುಳಿವ ನಿಜ ಜಂಗಮದಾಚರಣೆಯ
ರುಜುವೆಂತೊ ಗುರುವೆ ಕೃಪೆಯಾಗು ೨೪೩

ಬೋಳ ಮಸ್ತಕ ತನ್ನ ಫಾಲದೊಳ್ ಭಸಿತಾಕ್ಷಿ
ಮಾಲೆ ಕಂಠದೊಳು ತಾಳಿದಾ ಚರವಿರವ-
ಕೇಳಿಂದ ಗುರುವೆ ಕೃಪೆಯಾಗು ೨೪೪

ಕಟ್ಟುಸೂತ್ರವು ಯೋಗ ಉಟ್ಟ ಕಾಷಾಂಬರವ-
ನುಟ್ಟ ವೇಷವನು ತೊಟ್ಟಿಹುದೆ ಚರವೆಂದಿದಿ-
ರಿಟ್ಟ ಶ್ರೀಗುರುವೆ ಕೃಪೆಯಾಗು ೨೪೫

ಬೋಳಿಸಿದ ಮುಖಮೀಸೆ ಕೋಳಗಾಧಾರ ಜಪ-
ಮಾಲೆ ಬಲಗೈಯ ಲೋಲಜಂಗಮವಿರವ
ಪಾಲಿಸಿದ ಗುರುವೆ ಕೃಪೆಯಾಗು ೨೪೬

ಮೆಟ್ಟುವ ಪಾವುಗೆ ಪಾದವಿಟ್ಟು ನಡೆವಲ್ಲಿ ಕ-
ಣ್ಣಿಟ್ಟು ಇಕ್ಕೆಲವ ಬಿಟ್ಟು ಚರಿಸುವುದೆ ಚರ
ಮೆಟ್ಟೆಂದ ಶ್ರೀಗುರುವೆ ಕೃಪೆಯಾಗು ೨೪೭

ಪಂಚಮುದ್ರೆಗಳುಳ್ಳ ಲಾಂಛನವ ಧರಿಸಿ ಪ್ರ-
ಪಂಚುವತಿಗಳೆದು ಸಂಚರಿಸೆ ಜಂಗಮದ
ಸಂಚೆಂದ ಗುರುವೆ ಕೃಪೆಯಾಗು ೨೩೮

ಎಡಗೈಯೊಳು ಹಾಲು ಬಲಗಡೆ ಹಸ್ತದಿ ಕೋಲು
ಬಡಿದೊಮ್ಮೆ ಹಾಲ ಕುಡಿಸುವ ಜಂಗಮದಂಘ್ರಿಯ
ಪಿಡಿಯೆಂದ ಗುರುವೆ ಕೃಪೆಯಾಗು ೨೩೯

ದೀಪದ ಮೋರೆಯ ಕಾಣದಾಪನಿತು ದೇಶವ ನಿರ್-
ಲೇಪದಿ ಚರಿಸುವೀ ಪರದೇಶಿಗಳೆಂದ
ಶ್ರೀ ಪರಮಗುರುವೆ ಕೃಪೆಯಾಗು ೨೪೦

ಹಳ್ಳಿಗೇಕಭುಕ್ತ ಡಿಳ್ಳಿಗೀಕ್ಯೆದೂಟ
ಹೊಳ್ಳದೊಳೊರಗಿ ಇಳ್ಳುಗಳವಗೆ ಜಗವು
ಸುಳ್ಳೆಂದ ಗುರುವೆ ಕೃಪೆಯಾಗು ೨೪೧

ಮೃಡಜಂಗಮಲಿಂಗ ತನ್ನಡಿ ಇಷ್ಟಜಲತೀರ್ಥ
ಪೊಡವಿ ಸುಕ್ಷೇತ್ರ ಕಡುನಿಜವೆಂದೊರೆದ ಎ-
ನ್ನೊಡೆಯ ಶ್ರೀಗುರುವೆ ಕೃಪೆಯಾಗು ೨೪೨

ದೇಶಗ್ರಾಮವು ನಿಳಯದಾಶಾಬಂಧದ ಭವದ
ಪಾಶವಿನಾಶ ಪರದೇಶಿಗಳೆಂದೊರೆದ ಶ್ರೀ
ದೇಶಿಕನೆ ಗುರುವೆ ಕೃಪೆಯಾಗು ೨೪೩

ಎಲ್ಲ ಪೇಶವು ಗ್ರಾಮ ಪಳ್ಳಿ ಮಠ ಮನೆಯಡವಿ
ಎಲ್ಲವ ಸಮಗಾಣ್ಬರಲ್ಲಮನೌಂಶಿಕರೆಂದು
ಬಲ್ಲ ಶ್ರೀಗುರುವೆ ಕೃಪೆಯಾಗು ೨೪೪

ಏಕಾಂತದಿ ಯೌವನದಾ ಕಾಂತೆಯು ಸುಂದರವ
ತಾ ಕಂಡು ಭ್ರಮಿಸದೇಕಾಂಗಿ ಜಂಗಮವೆಂ
ದಾ ಕರುಣಿ ಗುರುವೆ ಕೃಪೆಯಾಗು ೨೪೫

ಅಡವಿಯೊಳಿಹ ರಾಶಿ ಕಡವರ ನಿಧಿಯನು ಕಂಡು
ಒಡೆಯರಿಲ್ಲದನು ಪಿಡಿಯದ ಜಂಗಮವೆಂದು
ನುಡಿದ ಶ್ರೀಗುರುವೆ ಕೃಪೆಯಾಗು ೨೪೬

ಭಕ್ತಿಯಿಂ ಬಂದುದನು ಯುಕ್ತಿಯಿಂ ಕೈಕೊಂಡು
ಮುಕ್ತಿಯ ಕೊಡುವ ವಿರಕ್ತ ಜಂಗಮವೆಂದು
ವಕ್ತ ಶ್ರೀಗುರುವೆ ಕೃಪೆಯಾಗು ೨೪೭

ಅಂಬಲಿಯು ಅಮೃತಾನ್ನ ಕಂಬಳಿಯು ಕಡುಸಣ್ಣ
ವಂ ಬಂದಡದನೆ ಉಂಬುಡುವ ಜಂಗಮವ
ನಂಬೆಂದ ಗುರುವೆ ಕೃಪೆಯಾಗು ೨೪೮

ಇಂತಪ್ಪ ಜಂಗಮವು ನಿನ್ನಂತರಂಗದೊಳಿಹುದಾ
ಮುಂತೆ ಹೇಳುವೆನು ಸಂತಸದಿ ಕೇಳೆನಲ
ದೆಂತು ಶ್ರೀಗುರುವೆ ಕೃಪೆಯಾಗು ೨೪೯

ಭೂತೇಂದ್ರಿಗುಣವಿಷಯ ಮಾತು ಮನವದುವಿಂಗೆ
ಚೈತನ್ಯ ಸಾಕ್ಷಿಭೂತ ಜಂಗಮವೆಂದು
ನೀ ತಿಳುಹಿದ ಗುರುವೆ ಕೃಪೆಯಾಗು ೨೫೦

ಭಾವಾದಿ ಷಟ್ಕರಣ ಜೀವ ತ್ರೈವಿಧವಾತ್ಮ
ತ್ರೈವಿಧಕೆ ತಾ ಸಂಜೀವ ಜಂಗಮವೆಂದ
ದೇವ ಶ್ರೀಗುರುವೆ ಕೃಪೆಯಾಗು ೨೫೧

ಕಾಯ ಜಂಗಮವೆಂಬುಪಾಯವನು ಕೇಳೆಲವೊ
ಬಾಯಿ ಮುಖ ಸಹಜಕ್ರಿಯೆ ಜಂಗಮವೆಂದಿ-
ರಯ್ಯಾ ಶ್ರೀಗುರುವೆ ಕೃಪೆಯಾಗು ೨೫೨

ದಾನ ಧರ್ಮದ ಜನನ ಸ್ಥಾನ ಹಸ್ತಗಳೆರಡು
ತಾನೆ ತಾನಾದ ಜ್ಞಾನ ಜಂಗಮವೆಂದು
ನೀನೊರೆದ ಗುರುವೆ ಕೃಪೆಯಾಗು ೨೫೩

ಸಹಜ ಸನ್ಮಾರ್ಗದೊಳು ವಿಹಿತದಿಂದಲಿ ನಡೆವು-
ತ್ತಿಹ ಪಾದವೆರಡು ಮಹ ಜ್ಞಾನ ಜಂಗಮವೆಂ-
ದೂಹಿಸಿದ ಗುರುವೆ ಕೃಪೆಯಾಗು ೨೫೪

ಒಳಹೊರಗಿಹಪರದ ಸುಳಿಹಿನ ಚೈತನ್ಯದೊ-
ಬ್ಬುಳಿಯೆ ಚಿಜ್ಜ್ಯೋತಿ ಕಳೆಯೆ ನಾನೆಂದು ನೀ
ತಿಳಿಯೆಂದ ಗುರುವೆ ಕೃಪೆಯಾಗು ೨೫೫

ತರಳಾ ಕೇಳಿಂತಪ್ಪ ಪರತತ್ತ್ವ ಜಂಗಮದ
ಚರಣದಿಂದೊಗೆದಾ ಚರಣಜಲದಿರವಾನೆಂ-
ದೊರೆದ ಶ್ರೀಗುರುವೆ ಕೃಪೆಯಾಗು ೨೫೬

ಆದಿ ಜಂಗಮದ ಶ್ರೀಪಾದವೆ ಪರಬ್ರಹ್ಮ-
ಕ್ಕಾಧಾರವೆಂದು ಓದುವಾಗಮಶ್ರುತಿಯು
ಬೋಧಿಸಿಹ ಗುರುವೆ ಕೃಪೆಯಾಗು ೨೫೭

ಭೇದಿಸಿ ನೋಡಲಾಪಾದದಿಂದೊಗೆದ ಪಾ-
ದೋದಕ ಪರಬ್ರಹ್ಮವಾದುದೆಂದೆನಗೆ ನೀ
ಬೋಧಿಸಿದ ಗುರುವೆ ಕೃಪೆಯಾಗು ೨೫೮

ಪರಬ್ರಹ್ಮರೂಪಿನಾ ಚರಣೋದಕವೆ ಎನಗೆ
ಚರಲಿಂಗಗಳಿಗೆ ಶರಣವೆಂದೊರೆದ ಮಹಾ-
ಗುರುವೆ ನೀನೆನಗೆ ಕೃಪೆಯಾಗು ೩೫೯

ಪೊಡವಿಯಾ ಮನುಜರ್ಗೆ ಜಡನೀರದು ಜೀವನವು
ಮೃಡ ಶರಣರಿಗೆ ಅಡಿ ಜಲವೆ ಪ್ರಾಣವೆಂ-
ದೊಡನೊರೆದ ಗುರುವೆ ಕೃಪೆಯಾಗು ೩೬೦

ಒಡೆಯ ಶ್ರೀಗುರುಲಿಂಗದಡಿಪಾದದಿಂದೊಗೆದ
ಪಡಿ ಪಾದೋದಕವ ಪಡುಗ ಭಾಂಡಗಳಲ್ಲಿ
ಪಡಗೆಂದ ಗುರುವೆ ಕೃಪೆಯಾಗು ೩೬೧

ಪಡಗಿದುದಕದಿ ಲಿಂಗ ಒಡಲಡಿಕರಮುಖದೊಳಿದು
ಅಡಿಜಲದಿ ನಿತ್ಯ ಅಡುಗಿಯ ಮಾಡೆಂದಯೆ-
ನ್ನೊಡೆಯ ಶ್ರೀಗುರುವೆ ಕೃಪೆಯಾಗು ೩೬೨

ಕೇಳು ಜಡ ನೀರುಳಿದು ಧೂಳಪಾದೋದಕದೊಳ್
ಆಳಿ ಮುಳುಗುತ್ತ ಬಾಳಣುಗನೆಂದ ಕೃ-
ಪಾಳು ಶ್ರೀಗುರುವೆ ಕೃಪೆಯಾಗು ೩೬೩

ಲಿಂಗಜಂಗಮದಂಘ್ರಿಯಂಗುಷ್ಟತರ್ಜನಿಯ
ಸಂಗದಿಂದೊಗೆದ ಲಿಂಗಪಾದೋದಕವೆಂದು
ಬಿಂಗಡಿಸಿದ ಗುರುವೆ ಕೃಪೆಯಾಗು ೩೬೪

ಅಸಮಲಿಂಗೋದಕದಿಂ ಭಸಿತ ಶುದ್ಧಿಯ ಗೈದು
ಭಸಿತವ ತ್ರೈಕಾಲವೂಸೆದು ಸ್ನಾನವ ಮಾಡೆಂ-
ದುಸುರಿದ್ವೆ, ಗುರುವೆ ಕೃಪೆಯಾಗು ೩೬೫

ನೀನೆಲ್ಲಾಗಳು ಲಿಂಗಧ್ಯಾನದಿಂದಲಿ ಭಸ್ಮ-
ಸ್ನಾನವ ಮಾಡುವುದು ಜ್ಞಾನಪಾದೋದಕವೆಂ-
ದಾ ನೈಜ ಗುರುವೇ ಕೃಪೆಯಾಗು ೩೬೬

ಧೂಳಪಾದೋದಕದೊಳ್ ಮೂಲಮಂತ್ರವ ಲಿಖಿಸಿ-
ದಾ ಲಿಂಗಾಂಬುವ ತ್ರೈಕಾಲ ಸ್ವೀಕರಿಸೆಂದು
ಪಾಲಿಸಿದ ಗುರುವೆ ಕೃಪೆಯಾಗು ೩೬೭

ಪರತತ್ತ್ವಜಂಗಮದ ಚರಣಪೂಜೆಯು ಮಾಡಿ
ವರಲಿಂಗಾಂಬುವನಾ ಚರಣಾಂಗುಷ್ಠದ ಮೇಲೆ
ಎರೆಯೆಂದ ಗುರುವೆ ಕೃಪೆಯಾಗು ೩೬೮

ಎರೆದ ಲಿಂಗೋದಕವೇ ವರಮಹತ್‌ಪದವೆನಿಸಿ
ಮೆರೆವ ತೀರ್ಥವ ನೀನುರೆಭಕ್ತಿಯೊಳು ಸ್ವೀ-
ಕರಿಸೆಂದ ಗುರುವೆ ಕೃಪೆಯಾಗು ೩೬೯

ಅರ್ಥಿಯಿಂ ಈ ಪಾದದುನ್ನತಿಯು ಸಾ-
ಮರ್ಥ್ಯ ಸಚ್ಚರಿಯು ವರ್ತನೆಯು ಕೇಳೆಂದ
ಕರ್ತ ಶ್ರೀಗುರುವೆ ಕೃಪೆಯಾಗು ೩೭೦

ನರಿಯು ಹಿಂಡಿನಮೇಲೆ ಚರಣೋದಕ ತಳಿಯಲ್ಕೆ
ತುರುಗವಿಂಡಾದ ಪರಿಯಾಯವ ನೀನೆನ-
ಗರುಹಿದ ಗುರುವೆ ಕೃಪೆಯಾಗು ೩೭೧

ಚರಣೋದಕವನೀಂಟಿದುರುಗ ಚೋರನ ಕಚ್ಚ-
ಲುರಗಚೋರರ್ಗೆ ವರಮುಕ್ತಿಯಾದುದೆಂ-
ದೊರೆದ ಶ್ರೀಗುರುವೆ ಕೃಪೆಯಾಗು ೩೭೨

ಅಷ್ಟಷಷ್ಟಿಯ ತೀರ್ಥ ಶ್ರೇಷ್ಠ ಶ್ರೀಗುರು ಚರಣದಂ-
ಗುಷ್ಟ ಜಲಬಿಂದುವಷ್ಟಕ್ಕೆಣೆಯಲ್ಲವೆಂ-
ದಿಷ್ಟ ಶ್ರೀಗುರುವೆ ಕೃಪೆಯಾಗು ೨೬೧

ಈ ಪಾದೋದಕ ನಿನ್ನೊಳ್ ವ್ಯಾಪಿಸಿಯನವರತ
ದೀಪಿಸುವ ಸತ್ಕಳಾಪವನೊರೆವೆನೆಂ-
ದಾ ಪರಮ ಗುರುವೆ ಕೃಪೆಯಾಗು ೨೬೨

ಗುರುಪಾದೋದಕ ನಿನ್ನೊಳಿರೆ ಸರ್ವಜೀವದಯಾ-
ಪರವಾಗಿ ನಿಂದು ಕರುಣಾಜಲವೆನಿಪುದೆಂ-
ದೊರೆದ ಶ್ರೀಗುರುವೆ ಕೃಪೆಯಾಗು ೨೬೩

ಘನಲಿಂಗೋದಕ ನಿನ್ನೊಳನುವಾಗಿ ಭಯಭಕ್ತಿ
ವಿನಯಿತವನಾಂತು ವಿನಯಜಲವೆನಿಪುದೆಂ-
ದನುಪಮದ ಗುರುವೆ ಕೃಪೆಯಾಗು ೨೬೪

ಪ್ರಮಥಜಂಗಮದಂಘ್ರಿ ವಿಮಲತೀರ್ಥವೆ ನಿನ್ನೊಳ್
ಶಮೆದಮೆಯನಾಂತು ಸಮತಾಲವೆನಿಸುವುದೆಂ-
ದ ಮಹಾ ಗುರುವೆ ಕೃಪೆಯಾಗು ೨೬೫

ಕರುಣಾ ವಿನಯ ಸಮತೆ ಪರಮ ಚಿಜ್ಜಲ ಮೂರು
ಗುರುಲಿಂಗಚರದ ಚರಣದೊಳಿಹುವೆಂಬು-
ದರುಹಿದ ಗುರುವೆ ಕೃಪೆಯಾಗು ೨೬೬

ಚರಣೋದಕವೆ ನಿನ್ನ ಶರಣಲಿಂಗದ ದಿವ್ಯ
ಕಿರಣವಹುದಷ್ಟಾವರಣ ಕಾರಣವೆಂದು
ಕರುಣಿಸಿದ ಗುರುವೆ ಕೃಪೆಯಾಗು ೨೬೭

ನಾನು ನೀನೆರಡಳಿದ ತಾನು ತಾನಾದ ಲಿಂ-
ಗಾನುಭವಕ್ರಿಯಾಜ್ಞಾನಪಾದೋದಕವೆ
ನೀನೆಂದ ಗುರುವೆ ಕೃಪೆಯಾಗು ೨೮೦

ತರಳ ಕೇಳೆಲೊ ಮುಂದೆ ಗುರುಲಿಂಗಜಂಗಮದ
ವರಸುಪ್ರಸಾದದಿರವ ಪೇಳುವೆ ನಿನಗೆಂ-
ದೊರೆದ ಶ್ರೀಗುರುವೆ ಕೃಪೆಯಾಗು ೨೮೧

ಗುರುದೇವನೊಳು ಶುದ್ಧ ವರಲಿಂಗದೊಳು ಸಿದ್ಧ
ಚರದೊಳ್ ಪ್ರಸಿದ್ಧದಿರವ ತೋರಿಸಿ ಎನ್ನ
ಪೊರೆದ ಶ್ರೀಗುರುವೆ ಕೃಪೆಯಾಗು ೨೮೨

ಗುರು ಲಿಂಗ ಜಂಗಮದ ಚಿರಶೇಷ ತ್ರೈವಿಧವೆ
ಶರಣಸಂತತಿಗೆ ವರತೃಪ್ತಿಯಾದುದೆಂ-
ದೊರೆದ ಶ್ರೀಗುರುವೆ ಕೃಪೆಯಾಗು ೨೮೩

ಶುದ್ಧ ಶೇಷವೆ ರೂಪು ಸಿದ್ಧ ಶೇಷವೆ ರುಚಿ ಪ್ರ-
ಸಿದ್ಧ ಪ್ರಸಾದ ನಿರ್ಧಾರದಿ ತೃಪ್ತಿಯೆಂ-
ದುದ್ಧರಿಸಿದ ಗುರುವೆ ಕೃಪೆಯಾಗು ೨೮೪

ಪಾಣಿಲಿಂಗಕೆ ರೂಪು ಪ್ರಾಣಲಿಂಗಕೆ ರುಚಿ ಸ-
ತ್ರಾಣ ಲಿಂಗಕ್ಕೆ ಮಾಣದೆ ತೃಪ್ತಿಯನೀವುದ
ಜಾಣ್ಮೆಸಿದ ಗುರುವೆ ಕೃಪೆಯಾಗು ೨೮೫

ಶುದ್ಧ ಸಿದ್ಧವು ಸುಪ್ರಸಿದ್ಧ ತ್ರೈವಿಧ ಶೇಷ
ವೃದ್ಧಿಕರಮಾಗಿ ಉದ್ಧರಿಸುವುದೆಂದೆನಗೆ
ನಿರ್ಧರಿಸಿದ ಗುರುವೆ ಕೃಪೆಯಾಗು ೨೮೬

ಏಕನಿಷ್ಠೆಯೊಳು ನಿನ್ನೇಕಾದಶ ಶೇಷವನು
ಸ್ವೀಕರಿಸುತಿರಲು ಶಾಕಾ ಫಲಪದವಾಗೆ
ಏಕೆಂದ ಗುರುವೆ ಕೃಪೆಯಾಗು ೨೮೭

ಈ ನಿಷ್ಠೆ ಗುರುಚರರ ಬಾಯಿಶೇಷವ ಭಕ್ತ-
ರಯೀಕ್ಷಿಸಿ ಪೊರೆವ ತಾಯಿಯಂತೆಂದೊರೆದ ಸ-
ಹಾಯಿ ಶ್ರೀಗುರುವೆ ಕೃಪೆಯಾಗು ೨೮೮

ಆದಿಪರಿಪೂರ್ಣ ಪ್ರಸಾದವ ಭೋಗಿಸುವ-
ಸಾದಿ ಶರಣಂಗೆ ವೇದಪದ ತೃಣವೆಂದು
ಬೋಧಿಸಿದ ಗುರುವೆ ಕೃಪೆಯಾಗು ೨೮೯

ಇಂತಪ್ಪ ಶೇಷ ನಿನ್ನಂತರ್ ಬಾಹ್ಯದೊಳಿಹ ವೃ-
ತ್ತಾಂತವೆನಗೆ ಮುಂತೆ ಪೇಳುವೆನೆಂದು
ಚಿಂತಿಸಿದ ಗುರುವೆ ಕೃಪೆಯಾಗು ೨೯೦

ಗುರುಕಾರುಣ್ಯದೊಳೊಗೆವ ಪರಶುದ್ಧಪ್ರಸಾದ-
ದಿರವೆ ಸತ್ಕ್ರಿಯಾ ಕರದಿಷ್ಟಲಿಂಗವೆಂ-
ದೊರೆದ ಶ್ರೀಗುರುವೆ ಕೃಪೆಯಾಗು ೨೯೧

ಅಂಗಮನಭಾವ ಗುರುಲಿಂಗಜಂಗಮದ ಶೇ-
ಷಂಗಳ್ ತ್ರಿವಿಧ ಲಿಂಗವೆಂದೊರೆದ ಕೃ-
ಪಾಂಗ ಶ್ರೀಗುರುವೆ ಕೃಪೆಯಾಗು ೨೯೨

ಧ್ಯಾನಮೌನವು ನೇಮ ನಿತ್ಯ ಚತುರ್ವಿಧವು ಸು-
ಜ್ಞಾನಸಾರಾಯ ಸ್ವಾನುಭಾವದ ಶೇಷವೆ
ನೀನೆಂದ ಗುರುವೆ ಕೃಪೆಯಾಗು ೨೯೩

ಪಾಣಿಲಿಂಗದೊಳೊಗೆದ ತ್ರಾಣಸಿದ್ಧವೆ ಶೇಷ
ವಾಣಿ ಮನಮಂತ್ರ ತ್ರಾಣಲಿಂಗವಿದೆಂದು
ಕಾಣಿಸಿದ ಗುರುವೆ ಕೃಪೆಯಾಗು ೨೯೪

ಹಸುಳ ಕೇಳೆಲವೊ ಮುಂದೆ ಭಸಿತದುನ್ನತವ ನಾ-
ನುಸುರವೆ ನೀ ಶೋಧಿಸಿ ತಿಳಿಯೆಂದೆನಗೆ ಬೋ-
ಧಿಸಿದ ಶ್ರೀಗುರುವೆ ಕೃಪೆಯಾಗು ೨೯೫

ಇಂತು ಗುರು ಚರಲಿಂಗದಂತರಂಗದೊಳಿರ್ದ
ಶಾಂತಿ ಚಿತ್‌ಕಳೆಯೆ ಮುಂತೆ ಭಸಿತವೆಯಾದು-
ದಿಂತೆಂದ ಗುರುವೆ ಕೃಪೆಯಾಗು ೨೯೬

ತ್ರಿಗುಣವಳಿದಾ ಕಳೆಯ ಸುಗುಣವ ಚಿದ್‌ವಹ್ನಿ
ಹೊಗರಿಸಿ ದಹಿಸಲೊಗೆದ ಚಿದ್‌ಭಸಿತದಾ
ಬಗೆಗಂಡ ಗುರುವೆ ಕೃಪೆಯಾಗು ೨೯೭

ಈ ರೀತಿಯಿಂದೊಗೆದ ಸಾರ ಚಿದ್‌ಭಸಿತವ ಪದ-
ವಾರಿಯೊಳ್ ಬೆರಸಿ ತೋರ ಘಟ್ಟಿಯ ಮಾಡಿ-
ಯಾರೈಸಿದ ಗುರುವೆ ಕೃಪೆಯಾಗು ೨೯೮

ಶ್ರೀ ಪಾದೋದಕ ಭಸ್ಮ ವ್ಯಾಪಿಸಿಯೆರಡೊಂದು
ರೂಪಾಗಿ ಮೆರೆವ ಈ ಪಾವನ ಪಿಂಡಾಂಡ-
ವಾ ಪಿಡಿದ ಗುರುವೆ ಕೃಪೆಯಾಗು ೨೯೯

ಪಾದುದಕ ಪಿಂಡಕ್ಕೆ ವೇಧಾ ಮಂತ್ರವು ಕ್ರಿಯಾ
ತ್ರೈದೀಕ್ಷೆಯ ಮಾಡಿ ಆದಿಮೂಲವ ಲೇಖಿಂ
ಗೈದ ಶ್ರೀಗುರುವೆ ಕೃಪೆಯಾಗು ೩೦೦

ಮೂಲ ಷಣ್ಮಂತ್ರವನು ಕೀಲಿಸಿದ ಭಸಿತವನು
ತಾ ಲಿಂಗಕೆ ಧರಿಸಿ ಬಾಲ ಬಾರೆಂದೆನಗೆ
ಪಾಲಿಸಿದ ಗುರುವೆ ಕೃಪೆಯಾಗು ೩೦೧

ಈ ವಿಭೂತಿಯನು ಸದ್ಭಾವದಿ ತ್ರೈಕಾಲ ಬಿಡದೆ
ಸಾವಧಾನದೊಳು ಪಾವನಾಂಗಕೆ ಧಾರಣೆ-
ಗೈವೇಳ್ದ ಗುರುವೆ ಕೃಪೆಯಾಗು ೩೦೨

ಧ್ಯಾನಮಂತ್ರಗಳಿಂದ ಸ್ನಾನಧೂಳನಗೈದು
ನೀ ನಾಲ್ವತ್ತೆಂಟು ಸ್ಥಾನದೊಳ್ ಧರಿಸೆಂದು
ನೀನೊರೆದ ಗುರುವೆ ಕೃಪೆಯಾಗು ೩೦೩

ಬಸವ ಪೆಸರಕ್ಷರದ ಅಸಮ ತ್ರೈಪುಂಡ್ರವನು
ನೊಸಲು ಮೊದಲಾದ ಎಸೆವ ಸರ್ವಾಂಗಕ್ಕೆ ಧ-
ರಿಸು ಎಂದ ಗುರುವೆ ಕೃಪೆಯಾಗು ೩೦೪

ಸಕಲಾಚಾರದ ಕವಚ ಸಕಲವಕ್ತ್ರದ ತಿಲಕ
ಸಕಲಸುಖಮುಖದ ಮುಕುರವೀ ಭಸಿತವೆಂ-
ದಕಳಂಕ ಗುರುವೆ ಕೃಪೆಯಾಗು ೩೦೫

ಇನಿತು ಚಿದ್ಭಸಿತವೆಂಬಿನನುದಯವಾಗಲ್ಕೆ
ತನುಮನತಾಮಸದ ಘನತಿಮಿರ ಹರಿವುದೆಂ-
ದೆನಗೊರೆದ ಗುರುವೆ ಕೃಪೆಯಾಗು ೩೦೬

ನಾನೆಂಬ ಗರ್ವದಜ್ಞಾನಬಿರಣೆಯನು ಸು-
ಜ್ಞಾನದಿಂ ದಹಿಸಿ ತಾನುಳಿದ ಚಿದ್ಭಸಿತವೆ
ನೀನೆಂದ ಗುರುವೆ ಕೃಪೆಯಾಗು ೩೦೭

ಕಂದ ಕೇಳಿಲ್ಲಿಂದ ಮುಂದೆ ರುದ್ರಾಕ್ಷಿಯನಾ-
ನಂದದೊಳ್ ಧರಿಸುವಂದವ ಪೇಳುವೆ ಲಾಲಿ-
ಸೆಂದ ಶ್ರೀಗುರುವೆ ಕೃಪೆಯಾಗು ೩೦೮

ಅಕಳಂಕ ಶರಣನ ಶಿಖಿಯೆ ಲಿಂಗದ ಗೋಪ್ಯ
ಮುಖವೆ ರುದ್ರಾಕ್ಷಿ ಸಕಲಭೂಷಣಮಣಿಯೆ
ಶಿಖವೆಂಬ ಗುರುವೆ ಕೃಪೆಯಾಗು ೩೦೯

ಎರಡು ಮುಂಗೈಯೊಳಾರೆರಡು ಮಣಿಮಾಲೆಯನು
ಎರಡುಬಾಹುಗಳೆರಡೆಂಟು ಮಣಿಮಾಲೆಯು
ಧರಿಸೆಂದ ಗುರುವೆ ಕೃಪೆಯಾಗು ೩೧೦

ಎಂಟು ನಾಲ್ಕರ ಮಣಿಯ ಕಂಠಮಾಲೆಯ ಧರಿಸ-
ಲುಂಟು ಕರ್ಣಂಗಳೊಳೊಂಟೊಂಟಿಮಣಿಧಾರಣ-
ಮುಂಟೆಂದ ಗುರುವೆ ಕೃಪೆಯಾಗು ೩೧೧

ಉರದೊಳ್ ಐವತ್ತೇಳು ವರಮಣಿಧಾರಣ ಕಕ್ಷೆ
ಎರಡಕೆ ನೂರೆಂಟು ಸರಮಣಿ ಮಾಲೆಯ ಮಾಡಿ
ಧರಿಸೆಂದ ಗುರುವೆ ಕೃಪೆಯಾಗು ೩೧೨

ನೆತ್ತಿಗೆ ಮೂರು ಶಿರಸುತ್ತಿಗೆ ಮೂವತ್ತಾರು
ಮತ್ತೆ ಶಿಖೆಗೊಂದು ಗೊತ್ತಿನೊಳು ಧರಿಸೆಂದೆನ-
ಗಿತ್ತ ಶ್ರೀ ಗುರುವೆ ಕೃಪೆಯಾಗು ೩೧೩

ಪರಮ ರುದ್ರಾಕ್ಷಿಯನು ಕರ ಬಾಹು ಗಳ ಕರ್ಣ
ಉರ ಶಿಖೆ ಶಿರಬಳಸಿ ಧರಿಸುವಾತನೆ ಮೋಕ್ಷ-
ಪರನೆಂದ ಗುರುವೆ ಕೃಪೆಯಾಗು ೩೧೪

ವರರುದ್ರಾಕ್ಷಿಯು ಮಣಿಯು ಸರಗೊಳಿಸಿ ಮುಖಭೇದ-
ವರಿದು ವಿಧದಿಂದ ಧರಿಸುವಾತನೆ ರುದ್ರ-
ನೆರವೆಂದ ಗುರುವೆ ಕೃಪೆಯಾಗು ೩೧೫

ನಾನೆ ನೀನೆಂದೆಂಬಭೇದವನು ತೋರದೆ ತನ್ನ
ತಾನೆ ರಾಜಿಸುವ ಜ್ಞಾನ ರುದ್ರಾಕ್ಷಿಯೆ
ಸ್ವಾನಂದ ಗುರುವೆ ಕೃಪೆಯಾಗು ೩೧೬

ಬಾಲಸುಖಶೀಲದನುಕೂಲ ಭವಮೂಲಕ್ಕು-
ದ್ದಾಲ ರುದ್ರಾಕ್ಷಿ ಮೂಲಧಾರಣವೆಂದ
ಲೋಲ ಶ್ರೀಗುರುವೆ ಕೃಪೆಯಾಗು ೩೧೭

ಅನುರಾಗ ಶ್ರೀ ಗುರುಚರಕೆ ಮಣಿದು ಭಕ್ತಿಯು ಪ್ರಾಪ್ತ
ಮಣಿಹವನೀವುದಕೆ ಶ್ರುಣು ರುದ್ರಾಕ್ಷಿಯೆ ಚಿಂತಾ-
ಮಣಿಯೆಂದ ಗುರುವೆ ಕೃಪೆಯಾಗು ೩೧೮

ಕುವರ ಕೇಳೆಲೊ ಮುಂದೆ ಶಿವಮಂತ್ರದುನ್ನತಿಯು
ವಿವರವ ನಿನಗೆ ತವೆ ಪೇಳ್ವೆನಿಂತೆಂದ ಸು-
ವಿವೇಕ ಗುರುವೆ ಕೃಪೆಯಾಗು ೩೧೯

ಅಸಮಲಿಂಗದ ದಿವ್ಯ ಪೆಸರೆಂಬ ಷಣ್ಮಂತ್ರ
ವಿಸರವೆ ನಿನ್ನಂಗದಸುವಿನೊಳಿಹುದೆಂಬು-
ದುಸುರಿದ ಗುರುವೆ ಕೃಪೆಯಾಗು ೩೨೦

ಮುಡಿಮೂಲ ಭುಜ ನಮಃ ಒಡಲೆ ಶಿ ಪದ ವಾ ಯು-
ಒಡಗೂಡಲ್ಕಾರುಯೆಡೆಯೆ ಷಣ್ಮಂತ್ರವೆ ನಿ-
ನ್ನೊಡಲೆಂದ ಗುರುವೆ ಕೃಪೆಯಾಗು ೩೨೧

ಎದೆ ಬೆನ್ನಿಬ್ಬದಿನಾಲ್ಕು ಮೊದಲಾದಿ ಪ್ರಣವ ತ್ರೈ-
ವಿಧ ಅ ಉ-ಮಾಕ್ಷರಕೆ ಸದನವೆಂದರಿದು ಪೇ-
ಳಿದ ಗುರುವೆ ಎನಗೆ ಕೃಪೆಯಾಗು ೩೨೩

ಪಂಚಕರ್ಮವು ವಿಷಯ ಪಂಚಧರ್ಮವು ಮರುತ
ಪಂಚಕರಣಗಳು ಪಂಚ ಪಂಚಾಕ್ಷರದ
ಸಂಚೆಂದ ಗುರುವೆ ಕೃಪೆಯಾಗು ೩೨೪

ಅಪರಮಿತ ಗಣಮಧ್ಯ ಸುಪವಿತ್ರದೀಕ್ಷೆ ಗೈ-
ದುಪದೇಶವಿತ್ತು ಗುಪಿತಷಣ್ಮಂತ್ರವ ನೀ
ಜಪಿಸೆಂದ ಗುರುವೆ ಕೃಪೆಯಾಗು ೩೨೫

ಪೂರ್ಣನೈಷ್ಠೆಯೊಳು ಷಡ್ವರ್ಣ ಮಂತ್ರವೆ ನಿನ್ನ
ಕರ್ಣ ಕೇಳುವೊಲಹರ್ನಿಶವು ಸ್ಮರಿಸೆಂದು
ನಿರ್ಣೈಸಿದ ಗುರುವೆ ಕೃಪೆಯಾಗು ೩೨೬

ಈ ನೈಜಮಂತ್ರ ತನ್ನೇನ ಬೇಡುವರದನೆ
ತಾನೀವ ಕಾಮಧೇನುವೆಂದೊರೆದ ಚಿದ್
ಭಾನು ಶ್ರೀಗುರುವೆ ಕೃಪೆಯಾಗು ೩೨೭

ಸಾಕ್ಷಾತ್ ಶಿವಷಣ್ಮಂತ್ರ, ಮೋಕ್ಷಾಪೇಕ್ಷಿತರ ತಾ
ರಕ್ಷಿಸುವ ಕಲ್ಪವೃಕ್ಷವೆಂದೊರೆದ ಮು-
ಮುಕ್ಷು ಶ್ರೀಗುರುವೆ ಕೃಪೆಯಾಗು ೩೨೮

ಅಣಿಮಾದಿ ಸಿದ್ಧಿಗಳು ತೃಣವೆಂಬ ಸಡಗರವ
ಕ್ಷಣದೊಳೀವುದಕೆ ಪ್ರಣವ ಷಡ್ವಿಧ ಚಿಂತಾ-
ಮಣಿಯೆಂದ ಗುರುವೆ ಕೃಪೆಯಾಗು ೩೨೯

# ಶಿವಾನುಭವ ದರ್ಪಣ

## ೧ ಗುರುಕರೋದ್ಭವ ತಾನಾದ ಶರಣಗುಂಟೆ ಪರಿಭವ

ಗುರುಕರೋದ್ಭವ ತಾನಾದ
ಶರಣಗುಂಟೆ ಪರಿಭವ ॥ ಪಲ್ಲವಿ ॥

ಪರಮಗುರುವು ಕರುಣದಿಂದ
ಶಿರದಮೇಲೆ ಕರವನಿಡಲು
ಪರುಷ ಮುಟ್ಟಿದ ಲೋಹದಂತೆ
ಪರಿರ ಲಿಂಗವಾದ ಶರಣಗಿನ್ನು ಉಂಟೆ ಪರಿಭವ ॥ ಅ ॥ ಪಲ್ಲವಿ ॥

ಮಂಗಳಾತ್ಮಕ ಮಹಾನುಭವ ಪ್ರ ।
ಸಂಗಬೋಧಕ ಗುರುಲಿಂಗಚರದ ಚರಣಾರಾಧಕ
ಅಂಗಲಿಂಗವೆಂಬ ಉಭಯ । ಹಿಂಗಿ ಸ್ವಾತ್ಮಜ್ಞಾನದಲ್ಲಿ
ಸಂಗನಬಸವನಾಗಿ ಜಗದ । ಹಂಗನಳಿದ
ಶರಣಗಿನ್ನು ಉಂಟೆ ಪರಿಭವ ೧

ಅಷ್ಟಾವರಣವು ತನಗಂಗವಾದ । ಶ್ರೇಷ್ಠ ಶರಣನು
ಇಷ್ಟ ಲಿಂಗದಲ್ಲಿ ದೃಷ್ಟಿ ಇಟ್ಟನು
ಕಷ್ಟಕರ್ಮದುರಿತ ಸುಖವು । ನಷ್ಟವಾಗಿ ಲಿಂಗದಲ್ಲಿ
ನಿಷ್ಠನಾಗಿ ಲೋಕದವರ । ಗೋಷ್ಠಿ ಬಿಟ್ಟ
ಶರಣಗಿನ್ನು ಉಂಟೆ ಪರಿಭವ ೨

ಮಹಾ ಪ್ರಸಾದದೊಳಿರಿಸಿ [illegible]
ಸಾಲು ಬಿಕ್ಕದ [illegible]
ಕಾಲಕಟ್ಟಿದೊಡನಾಗಿ [illegible]
ಬಾಲಪತಿಗೆ ಚೆನ್ನ [illegible]
[illegible] ೩

## ೨ ಗುರುವೆ ನಿಮ್ಮನುಗ್ರಹದಿಂದೆನ್ನ

ರಾಗ : ಪಿಲ್ಲು, ಧುಮಾಳಿ

ಗುರುವೆ ನಿಮ್ಮನುಗ್ರಹದಿಂದೆನ್ನ ಕರ್ಮ
ಹರಿದು ನಿರ್ಮಳ ನಿಜವಿರವಾದೆ ॥ ಪಲ್ಲವಿ ॥

ಶರೀರವೆ ನಾನೆಂಬ ಅಹಂಕಾರ । ದಿಂದ
ನರರೊಳು ನರನಾಗಿ ಚರಿಸುವಗೆ
ಕರೆದು ಮುಂದೆನು ಮೇಲೆ ಕರವಿಟ್ಟು । ನೀ
ನರನಲ್ಲ ಪರವಸ್ತುವೆನಲಾಗಿ ೧

ನಾನು ನನ್ನದು ಎಂಬ ಹಮ್ಮುಮತಿ । ಯಿಂದ
ಜ್ಞಾನಬಾಹ್ಯರೊಡನಾಡುವಗೆ
ನೀನೆ ಶರಣ ಸತಿ ಲಿಂಗವೆ ಪತಿ । ವಸ್ತು
ತಾನೆ ಒಂದೆರಡಾದುದೆನಲಾಗಿ ೨

ಅಂಗದ ವಿಶ್ವ ತೈಜಸಪ್ರಾಜ್ಞ । ಜೀ-
ವಂಗಳೆಂಬ ತ್ರೈತನು ಸುಜೀವಿಗೆ
ಮಂಗಳಕರದಿಷ್ಟಪ್ರಾಣಭಾವ । ತ್ರೈ-
ಲಿಂಗ ಸಜ್ಜೀವಿ ನೀನೆನಲಾಗಿ ೩

ಮನ ಬುದ್ಧಿ ಚಿತ್ತ ಅಹಂಕಾರ । ಚಾತುರ್-
ಬಿನಗು ದುಃಕರಣಂಗಳಾದೆನಗೆ
ಅನಘ ಶ್ರೀಗುರುಲಿಂಗ ಚರಶೇಷ । ಚಾತು-
ರ್ಘನಸಾರಾಯವೆ ನೀನೆನಲಾಗಿ ೪

ಐದು ಭೂತಗಳಾಗಿ ಗರ ಸೋಂಕಿ । ತ-
ನ್ನಾದಿಯು ಮರೆದ ಭೂತಾತ್ಮನಿಗೆ
ಐದರಕ್ಷರದ ಮೂಲ ಮಂತ್ರವನು । ನೀ
ಬೋಧಿಸಿ ಮರೆಯದಿರೆನಲಾಗಿ ೫

ಕಾಮಾದಿ ಅರಿಷಡುವರ್ಗವ । ಕೂಡಿ-
ದಾ ಮಂದಮತಿಯ ದುರ್ಮತ್ತನಿಗೆ
ಆ ಮಹಾ ಷಟುಸ್ಥಲ ಮಾರ್ಗದೊಳು । ಸತ್-
ಪ್ರೇಮದೊಳಾಚರಿಸೆನಲಾಗಿ ೬

ಏಳು ವ್ಯಸನದೊಳು ತೊಳತೊಳಲಿ । ಬಹು
ಕೀಳು ಮಾನವರಂತೆ ಬಳಲುವಗೆ
ಏಳು ನೆಲೆಯ ಭಕ್ತಿ ಮಂಟಪದಿ । ಮೂ-
ರೇಳು ದೀಕ್ಷೆಯ ಕರುಣಿಸಲಾಗಿ ೭

ದುರಿತ ದುರ್ಮದವೆಂಟು ತಲೆಗೇರಿ । ತನ್ನ
ಮರೆದಷ್ಟ ತನುವೆ ತಾನಾಗಿರ್ಪಗೆ
ಶರಣವೆ ನೀನು ನಿನ್ನಂಗವೆ । ಅಷ್ಟಾ-
ವರಣವೆಂಬುದನು ಸೂಚಿಸಲಾಗಿ ೮

ಒಂಬತ್ತು ತೂತಿನ ಘಟದೊಳು । ಜೀವ-
ನಾಂಬು ಪೂರಿತವಾದ ಜಡದೇಹಿಗೆ
ಒಂಬತ್ತು ರಾಜೀವದೊಳಿಷ್ಟ । ಲಿಂಗ
ತುಂಬಿ ಕಾಣಿಪುದು ನೋಡೆನಲಾಗಿ ೯

ಹತ್ತು ವಾಯುವಿನ ಸಂಚಲದಿಂದ । ತನ್ನ
ಗೊತ್ತು ತಾನರಿಯದೆ ಚರಿಸುವಗೆ
ಹತ್ತು ಪಾದೋದಕದಾಚರಣೆಯ । ನಿಜ
ಸತ್ಯ ಸತ್ಯೋದಕವೆನಲಾಗಿ ೧೦

ಆರೈದು ಇಂದ್ರಿಯ ಭೋಗವ ಮೆಚ್ಚಿ । ಸಂ-
ಸಾರ ಬಂಧನಕೊಳಗಾದವಗೆ
ಸಾರ ಸದ್ಭಕ್ತಿ ಸುಪ್ರಸಾದವ । ನಿನ್ನೊ-
ಳಾರೈದು ಭೋಗಿಪುದೆನಲಾಗಿ ೧೧

ದುರ್ಮಾಯ ಮರವೆಯ ದೆಶೆಯಿಂದ । ಇಂಥ
ಕರ್ಮದೇಹವ ತಾಳಿ ಚರಿಸುವಗೆ
ಧರ್ಮಿ ನೀ ಪರತತ್ತ್ವದಾಚರಣೆಯ । ನಿಜ
ಮರ್ಮವನೆನಗೆ ಬೋಧಿಸಲಾಗಿ ೧೨

ಘೋರ ಸಂಸಾರವಿಕಾರಿಯ । ನಿಮ್ಮ
ಕಾರುಣ್ಯದೃಷ್ಟಿಯಿಂದಲಿ ನೋಡಿ
ವೀರಶೈವಾಚಾರ ನಡೆನುಡಿಯ । ಚೆನ್ನ-
ವೀರ ನೀನೆನಗೆ ಬೋಧಿಸಲಾಗಿ ೧೩

## ೩ ಅರಿವೆಯ ಕರುಣಿಸೈ ಗುರುವೆ

ರಾಗ : ಪಾರ್ಸಿ

ಅರಿವೆಯ ಕರುಣಿಸೈ ಗುರುವೆ । ನಿತ್ಯ
ವರವೀರಶೈವ ಭಕ್ತರ ಕಲ್ಪತರುವೆ ॥ ಪಲ್ಲವಿ ॥

ಆರೈದು ನೂತ ಕುಕ್ಕಡಿಯ । ತಂದು
ಮೂರೇಳು ಸಾಸಿರದರುನೂರು ನಿಡಿಯ
ಸೇರಿಸಿ ಹೊಯ್ದ ಸಣ್ಣಡಿಯ । ಹುಂಜ
ಈರೈದು ಹಣಿಗೆಯಿಂ ನೆಯ್ದ ಚಿತ್ಕೊಡೆಯ ೧

ಸಗುಣ ನಿರ್ಗುಣದ ಚಿತ್‌ಕಳೆಯು । ಕಣ್ಣು
ತೆಗೆದು ನೋಡಲು ನಿತ್ಯ ನಿಜಮೋಕ್ಷ ನಿಳೆಯು
ಅಗಲಾತು ಮೊಳದ ಸಣ್ಣೆಳೆಯು । ನೂರ
ಮಿಗಿಲೊಂದು ಮೊಳದುದ್ದ ನಿಡಿದುಳ್ಳ ಬಿಳಿಯು ೨

ಚಲುವ ಚಿದ್‌ಬೆಳಗಿನಂತಿರುವ । ಎಂದು
ಮಲಿನವಾಗದ ನಿತ್ಯ ಮಡಿಯಾಗಿ ಮೆರೆವ
ನೆಲಗಾಣಲರಿದಿದರಿರವ । ಮಿಕ್ಕ
ಬಲು ವರ್ಣಗಳನು ಮೀರಿದ ಚಿದಂಬರವ ೩

ಧನವಿಲ್ಲದವ ಬೆಲೆಗೊಟ್ಟ । ಅಲ್ಲಿ
ಮನವಿಲ್ಲದವನೊಬ್ಬ ನೋಡಿ ಕಣ್ಣಿಟ್ಟ
ತನುವಿಲ್ಲದವನದನುಟ್ಟ । ಎಮ್ಮ
ಘನ ಶಿವಶರಣರೆಲ್ಲರು ಸುಖಬಟ್ಟ ೪

ಎರಡಳಿದೇಕಾದ ಜಗೆಯು । ನೆಲ್ಲ-
ವರುಹಿ ಪಾಲಿಸಿ ನಿಮ್ಮ ಚರಣನಂಬುಗೆಯು
ಮರವೆಯು ಬೇರ ಕಿತ್ತೊಗೆಯು । ಖಲ್ಲ
ಗುರು ಚೆನ್ನವೀರ ನೀನುಟ್ಟ ವೈಲಿಗೆಯು ೫

## ೪ ಶ್ರೀ ಗುರೋತ್ತಮನೆ ಪಾಲಿಸೈ

### ಹಲಾಯುಧ ವೃತ್ತ

ಶ್ರೀಗುರೂತ್ತಮನೆ ಪಾಲಿಸೈ । ಬಾಗಿ ಬಂದವರ ನಿನ್ನ ವೊಲ್
ಆಗು ಮಾಡುವ ಸುಸೌಖ್ಯಪ । ಸಾಗರಂ ಕೃಪಾಕರಂ ೧

ನೈಷ್ಠೆಯಿಂದಲಿ ತ್ರಿಕಾಲದೊಳ್ । ದೃಷ್ಟಿವಾಙ್ಮನ ಸುಭಾವದಿಂ-
ದಷ್ಟವರಣವೆ ಸ್ವಯಂಗಮಾ । ದಿಷ್ಟಲಿಂಗವನು ಪೂಜಿಪೆ ೨

ಕಂಗಳಾಲಯದ ಲಿಂಗಮಂ । ಪಿಂಗದಾರ್ಚನೆ ಮಾಡುವ
ಸಂಗಮೇಶ್ವರ ಸುಧಾಕರಂ । ಜಂಗಮಾಂಘ್ರಿಗಳು ಕಾಯರಿ ೩

ಸಾಧು ಸದ್ಗುರು ಪದಾಂಬುವೀ । ರೈದು ನಾಟುದೊಳು ಭಕ್ತರಂ
ಭೇದವರ್ಜಿತರ ಮಾಳ್ಪ ಶ್ರೀ । ಪಾದ ತೀರ್ಥವೆ ಸು ಪಾಹಿ ಮಾಂ ೪

ಶ್ರೀ ಗುರೂತ್ತಮನೆ ಶುದ್ಧಮಂ । ಭೋಗಲಿಂಗದ ವಿಸಿದ್ಧಮಂ
ಯೋಗಿ ಜಂಗಮದ ಪ್ರಸಿದ್ಧಮಂ । ಭೋಗಿಪೇಂ ತ್ರಿವಿಧ ಶೇಷಮಂ ೫

ಶೀಲಸಂಪದ ಮಾತೆಯೆ । ಮೂಲ ಮಂತ್ರ ಸುಜಾತೆಯೆ
ಜ್ವಾಲೆಯಿಂದೊಗೆದ ಜ್ಯೋತಿಯೆ ।ಪಾಲಿಸೆಮ್ಮನು ವಿಭೂತಿಯೆ ೬

ಚಾರು ಸದ್ಗುರುವೆ ಜ್ಞಾನದ । ಸಾರಮಂ ತೆಗೆದು ಮಾಡಿದ
ಕಾರಣಾಕ್ಷಿಯ ಸುಮಾಲೆಯ । ಹಾರಮಂ ಧರಿಸಿ ಕೊಂಬೆನು ೭

ಅಂತರಂಗವನು ಪೊಂದಿ ನಿ । ಶ್ಚಿಂತನೆಂದೆನಿಸಿ ತೋರಿದ
ಶಾಂತ ಷಣ್ಮುಖದೊಳಿರ್ಪ ಷ । ಣ್ಮಂತ್ರ ಜಪಿಸುತಿರ್ಪೆನು ೮

ತನ್ನ ತಾನೆನಿಪ ಲಿಂಗಮಂ । ಭಿನ್ನವಿಲ್ಲದೆ ಪೂಜಿಸಿ
ಮುನ್ನನಾದಿಯು ಪೊಂದಿದ । ಚೆನ್ನವೀರಗುರುವೆ ಪಾಹಿ ಮಾಂ ೯

## ೫ ಯಾರಧಿಕಾರವಿನ್ನೇನಯ್ಯ

ರಾಗ : ಭೈರವಿ

ಯಾರಧಿಕಾರವಿನ್ನೇನಯ್ಯ । ಸುವಿ-
ಚಾರ ಸದ್ಗುರುರಾಯನಧಿಕಾರದ ಮುಂದೆ ॥ ಪಲ್ಲವಿ ॥

ಬ್ರಾಹ್ಮಣೋತ್ತಮರಿಹ ಪರದೊಳು । ಪರ
ಬ್ರಹ್ಮ ಸ್ವರೂಪರೆಂದೆಂಬರು
ದುರ್ಮುಖಹೊಲೆಯರ ಪೆಸರ್ಗೊಂಡು । ತಾವು
ಕರ್ಮಕ್ಕೆ ಒಳಗಾದರೇಕಯ್ಯಾ ೧

ಮತಿಗೆ ಮಂಗಳವ ಕೊಡುವುದಕೆ। ಸರ-
ಸ್ವತಿಯು ತಾನಧ್ಯಕ್ಷಳೆಂಬರು
ಗತಿ ಮೂಗುತಿಯನುಳ್ಳ ಮೂಗನು। ದುರ್-
ಮತಿಯಿಂದ ಕಳಕೊಂಡಳೇಕಯ್ಯಾ ೨

ಭೂಮಿಯ ಜೀವರುತ್ಪತ್ತಿಗೆ। ಚೆಲ್ವ
ಕಾಮನೆ ಮೊದಲಿಗನೆಂಬರು
ಆ ಮಹಾಲಕ್ಷ್ಮಿ ಮಾಧವರಿಗೆ। ಕಾಮ
ತಾ ಮೊದಲೆಂತು ಪುಟ್ಟಿದನಯ್ಯಾ ೩

ಯಜ್ಞಾದಿ ಸರ್ವಕಾರಣಕೆಲ್ಲ। ನಿರ್
ವಿಘ್ನನೆ ಗಣಪತಿಯೆಂಬರು
ಅಗ್ನಿಗಣ್ಣನಿಂದಲಾತನ। ತಲೆ
ವಿಘ್ನಕೆ ಒಳಗಾದುದೇಕಯ್ಯ ೪

ಏನು ಬೇಡಿದೊಡೀವ ಸುರತರು। ಕಾಮ-
ಧೇನುಗಳುಂಟು ಇಂದ್ರಗೆಂಬರು
ತಾನೊಂದು ಬಯಸಿದೊಡಾತನ। ತನು
ಯೋನಿಮಂಡಲವಾದುದೇಕಯ್ಯಾ ೫

ಹಲವು ಲೋಕಂಗಳ ಸೃಷ್ಟಿಗೆ। ಒಬ್ಬ
ಜಲಜೋದ್ಭವನೆ ಮುಖ್ಯನೆಂಬರು
ಬಲ ನಡುದೆಲೆ ತೊಲಗಿರಲಾಗಿ। ತನ್ನ
ತಲೆಯ ಪುಟ್ಟಿಸಕೊಳ್ಳನೇಕಯ್ಯ ೬

ಜಗವ ಮೂರನು ಪಾಲಿಸುವುದಕೆ। ಒಬ್ಬ
ಖಗವಾಹನನೆ ಕರ್ತೃವೆಂಬರು
ಅಗಜೇಶ ಕಾಮನ ಸುಡುವಾಗ। ತನ್ನ
ಮಗನ ಪಾಲಿಸಿಕೊಳ್ಳನೇಕಯ್ಯ ೭

ಲೋಕಸಂಹಾರ ಮಾಡುವುದಕ್ಕೆ । ಉ-
ದ್ರೇಕ ರುದ್ರನೆ ಕರ್ತನೆಂಬರು
ಏಕದಶಾವತಾರ ತನಗುಂಟು ಮಾಡಿದ । ಕ-
ಲಿಕಾಲರುದ್ರ ನೀನಾರಯ್ಯ ೮

ಈಶನಿಂದಧಿಕ ದೈವಂಗಳು । ಕೈ-
ಲಾಸದೊಳಿಲ್ಲವೆಂದೆಂಬರು
ದೇಶವರಿಯಲೊಂದು ದಿಕ್ಕಿಗೆ । ತಾ-
ನೀಶ ಪಾಲಕನಾದುದೇಕಯ್ಯ ೯

ಪಾರ್ವತಿಪತಿ ಜೀವ ಮಾತ್ರರೊಳು ॥ ತಾನು
ಸರ್ವಾಂತರ್ಯಾಮಿ ತಾನೆಂಬರು
ಪೂರ್ವ ತನ್ನಣುಗನ ತಲೆಯನು । ತಾನು
ಗರ್ವಿಸಿ ಹೊಡೆದುದೇಕಯ್ಯ ೧೦

ಮೀರಿದಷ್ಟಾವರಣಂಗಳು । ಪಂಚಾ-
ಚಾರವೆ ಪ್ರಾಣವಾಗಿರುತಿಹ
ವೀರಶೈವಾಚಾರ ನಡೆನುಡಿಯು । ಚೆನ್ನ-
ವೀರಮದ್ಗುರುರಾಯನಧಿಕಾರದ ಮುಂದೆ ೧೧

## ೬ ಜಯಜಯ ಗುರುವೆ ಪಾಲಿಸಿ

ರಾಗ: ಜಂಗಮಾಲ್

ಜಯಜಯ ಗುರುವೆ ಪಾಲಿಸಿ । ದಯಮಾಡೋ ಪದವ ॥ ಪ ॥
ಮೋಕ್ಷದಾಯಕ ಗಣ । ಸಾಕ್ಷಿಸಹಿತ ತ್ರೈದೀಕ್ಷೆ ನೀನೊಲಿದಿತ್ತೆ ೧
ನಿತ್ಯನಿರಂಜನ ವಸ್ತುವಿದೆಂ । ದುತ್ತಮಹಸ್ತದೊಳಿತ್ತೆ ೨
ಲಿಂಗದ ನಡೆ ನಿಜಲಿಂಗದ ನುಡಿ ಚಿ । ಲ್ಲಿಂಗದ ಜ್ಞಾನವನಿತ್ತೆ ೩

ಸ್ವಯಂ ಚರ ಪರ ಜಂಗಮ ಚರಣದ ಚಿನ್ । ಮಯ ತೀರ್ಥವಲಿಸುತ್ತೆ ೪
ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವ । ನಿರ್ಧರದಿಂದುಣಲಿತ್ತೆ ೫
ನಿನ್ನ ಪದಾಬ್ಜದ ರೇಣು ಭಸಿತವ । ನನ್ನ ಲಲಾಟದೊಳಿಟ್ಟೆ ೬
ಆರುಮೊಗದ ಮೊಗವಾಗಿಹ ಮಣಿಗಳ । ಸೇರಿಸಿ ಕೊರಳೊಳಗಿಟ್ಟೆ ೭
ಶಿವಪೆಸರಾದ ಮಹಾಮಂತ್ರವನೆ । ನ್ನವಿರಳ ಕಿವಿಯೊಳು ಪೇಳ್ದೆ ೮
ಅಷ್ಟಾವರಣ ತನುವಿಗಳವಡಿಸಿ । ಶಿಷ್ಟಾಚಾರವ ಪೇಳ್ದೆ ೯
ಚೆನ್ನವೀರೇಶ ಮಹೇಶ ಶಿಖಾಮಣಿ । ಎನ್ನನು ದಯದಿಂ ಪೊರೆಯೊ ೧೦

## ೭ ಶರಣಾಗೈ ಗುರುವೆ

ರಾಗ : ಜಂಗಮಾಲ್

ಶರಣಾಗೈ ಗುರುವೆ ಶ್ರೇಷ್ಠವಾ । ದೊರವಿತ್ತು ಪೊರೆಯೊ ॥ ಪ ॥
ಮರವೆಯಳಿದ ಮಹದರುವಿನೊಳಗೆ ನಿಜ । ಗುರುವಿನಿರವನು ಪೇಳ್ದೆ ೧
ಕಂಗಳ ಕೊನೆಯೊಳಗಂಗೈಸಿದ ನಿಜ । ಲಿಂಗವ ಪ್ರಾಣದೊಳಿಟ್ಟೆ ೨
ಲಿಂಗದ ನಡೆನುಡಿ ಸಂಗ ಸುಜ್ಞಾನದಿ । ಜಂಗಮದಿರವನು ಪೇಳ್ದೆ ೩
ಚರಪಾದೋದಕದಿರವನು ಎನ್ನಯ । ಸುರಸಜಿಹ್ವೆಯೊಳಿಟ್ಟೆ ೪
ಸದಮಲ ಭಕ್ತಿಯೊಳುದಿಸಿದ ಶೇಷವ ಮುದದಿ ನಾಸಿಕದೊಳಿಟ್ಟೆ ೫
ಅಂಗದ ಕರಣ ಗುಣಂಗಳ ದಹಿಸಿ ನಿ । ಜಾಂಗದಿ ಭಸಿತವನಿಟ್ಟೆ ೬
ಅನಘ ಶಿವಾಕ್ಷಿಯ ಮನುಮುಖಮಣಿಗಳ। ಅನುಮಿಷನೇತ್ರದೊಳಿಟ್ಟೆ ೭
ಸಂಚಿತ ಲಿಖಿತವನೊಂಚಿಸಿ ಕರ್ಣದಿ । ಪಂಚ ಮನುಗಳನು ಪೇಳ್ದೆ ೮
ನಿನ್ನ ಸ್ವರೂಪವನೆನ್ನೊಳಗರುಹಿದೆ । ಚೆನ್ನವೀರೇಶ ಮಹೇಶ ೯

## ೮ ಶ್ರೀ ಗುರುವಿನುಪದೇಶವಾಗಿರ್ದಡವಗೆ

ರಾಗ : ಕುಸುಮಷಟ್ಪದಿ

ಶ್ರೀ ಗುರುವಿನುಪದೇಶವಾಗಿರ್ದಡವಗೆ ಭವ-
ರೋಗಿ ದುರ್ಭೋಗಿ ಎಂದೆನಲಾಗದು ॥ ಪಲ್ಲವಿ ॥

ಪಂಕಜ ಮಧ್ಯದೊಳೊಗೆದ । ಪಂಕಜ ಉಪಾದಿಯೊಳು
ಶಂಕರನ ಮಸ್ತಕವನೇರ್ವಂದದಿ
ಬಿಂಕು ಬಿಗುನೂನವರ । ಅಂಕಿತವ ಧರಿಸಿ ಗುರು
ಲೆಂಕರೆಂದೆನಿಸುವರು ಶಿವಶರಣರು ೧

ಭೃಂಗ ಕುಸುಮದ ಕಂಪ । ಹಿಂಗಲಾರದೆ ಜಿನುಗಿ
ಹ್ಯಾಂಗೆ ಝೇಂಕರಿಸುವುದು ಮಧುರ ಹಾಂಗೆ
ಮಂಗಳಾತ್ಮಕರು ತ । ಮ್ಮಂಗ ಷಟುಸ್ಥಲರಿಷ್ಟ-
ಲಿಂಗಷಣ್ಮಂತ್ರದೊಳು ತೊಳಲುತಿಹರು ೨

ಗುರುಲಿಂಗಜಂಗಮವ । ಶರಿರ ಮನ ಭಾವದೊಳು
ಕರದಿಷ್ಟ ಪ್ರಾಣಭಾವಂಗಳಾಗಿ
ಧರಿಸಿ ತ್ರೈಲಿಂಗದೊಡ । ವೆರದ ಶಿವಶರಣಂಗೆ
ನರಮನುಜರೆಂದು ಕಲ್ಪಿಸಬಾರದು ೩

ಪೊಡವಿಯರಿಯಲು ಮಣ್ಣ । ಮಡಕಿಯನು ಮಾಡುವರು
ಮಡಕಿ ಒಡೆದರೆ ಮರಳಿ ಮಣ್ಣಪ್ಪುದೆ
ಎಡೆಬಿಡದೆ ಶ್ರೀಗುರುವಿ । ನಡಿವಿಡಿದು ಲಿಂಗಾಂಗ-
ದೊಡೆವೆರೆಹ ಸದ್‌ಭಕ್ತ ಭವಿಯಪ್ಪನೇ ೪

ಸ್ವಾತಿಜಲ ಮುತ್ತ ತಾ । ನೇತರೊಳಗಿರ್ದಡೆಯು
ನೀತಿದಪ್ಪಿ ಮರಳಿ ನೀರಪ್ಪುದೆ
ಖ್ಯಾತಿ ಶರಣಂಗೆ ವಿ । ಭೂತಿ ವೀಳೆವ ಮಾಡಿ
ಭೂತಳದೊಳುಳಿಯೆ ಮಾನವನಪ್ಪನೆ ೫

ಕಾಷ್ಠದಿಂದೊಗೆದಗ್ನಿ । ಕಾಷ್ಠವನು ಸುಟ್ಟುರಹೆ
ಕಾಷ್ಠಭೇದವದು ಕೆಂಡದೊಳಿಪ್ಪುದೆ
ದೃಷ್ಟಿದ್ವಾರದೊಳೊಗೆದ । ಇಷ್ಟಲಿಂಗಾಗ್ನಿಯೊಳು
ಸುಟ್ಟ ನಿರ್ದೇಹಿ ತಾ ಜಡಜೀವಿಯೇ ೬

ಮಾರುತನ ಬಳಿಪಿಡಿದು । ಸಾರಿ ಗಮಿಸುವ ದಿವ್ಯ
ಸೌರಭಂ ತಾ ಮರಳಿ ತಿರುಗಲುಂಟೆ
ನೂರು ಸ್ಥಲವನು ಮೀರಿ । ಆರು ಸ್ಥಲ ಬಳಿವಿಡಿದು
ದಾರಿಗೊಂಡವರಿತ್ತ ಮರಳಲುಂಟೆ ೭

ಅಂಬರಕೆ ಹೋದ ಹೊಗೆ । ಕುಂಭಿನಿಗೆ ಮರಳುವುದೆ
ಶುಂಭ ಮಾನವನೆ ಕೇಳದರಂದದಿ
ಶಂಭು ಜಂಗಮದ ಪಾ । ದಾಂಬುಜದ ಗಂಧಕೆ
ತುಂಬಿಯಾದವರು ನರಬೊಂಬೆಯಹರೆ ೮

ಕ್ಷೀರದಿಂದಾದ ಘೃತ । ಕ್ಷೀರವಪ್ಪುದೆ ಮರಳಿ
ಸಾರಿ ಹೇಳುವೆನು ಕೇಳಾ ಪರಿಯೊಳು
ಚಾರು ನಡೆನುಡಿ ಚೆನ್ನ । ವೀರಮದ್ಗುರುವರನ
ಕಾರುಣ್ಯವಡೆದು ಜಡಮತಿಯಪ್ಪರೇ ೯

## ೯ ಶ್ರೀಗುರುವೆ ಎನ್ನ ಮುನ್ನಾಳ್‌ಗೊಂಡ ಕತದಿಂದ

ರಾಗ : ತೆಲಗು ಕಾಂಭೋಧಿ

ಶ್ರೀಗುರುವೆ ಎನ್ನ ಮುನ್ನಾಳ್‌ಗೊಂಡ ಕತದಿಂದ-
ಲೀಗ ನೀವೆ ಬನ್ನಿ ಕಾಯಿ
ಆಗಮಾಮ್ನಾಯ ಸೇವಕ ಹೃದಯನಿಳಯನ-
ಲಾಗಿ ಎನ್ನೊಳಗಿಪ್ಪೆ ಕಾಯಿ ॥ ಪಲ್ಲವಿ ॥

ಸ್ಮರನ ಸುಟ್ಟುರುಹಿ ಕಾಲನ ಶಿರವನುಳುಹಿ ದ-
ತ್ತೂರು ಪುಣ್ಯಯು ತಪಸಿ ಕಾಯಿ
ಶರಣರಘುಕುಲತಿಮಿರ ಮಾರ್ತಾಂಡನೆನಿಸುತಿಹ
ಸುರವಿನುತ ಭವಕಾರೆ ಕಾಯಿ
ಗುರುವೆ ನೀವೆನ್ನವಗುಣಗಣವ ನೋಡದೆ-
ನ್ನರಸೆ ಕರುಣದ ಕಡಲೆ ಕಾಯಿ
ತರಳ ನಾನೆನ್ನ ನೀನಿಂತು ಕಾಡಿದಡೊಲು
ಪೊರೆವರಿನ್ನಾರವರೆ ಕಾಯಿ ೧

ಸದಯಾಂತರಂಗ ನೀನೆ ಮುನಿಯಲಾಗಿ ನಾಂ
ಮದಡಬುದ್ಧಿಯ ಬಿಡಿಸಿ ಮೃತ್ಯು ಸಂಹರ ಶುಭ
ಪ್ರದ ನೀನಿಶೆಂಬೆ ಕಾಯಿ
ಬುಧವನ ವಸಂತ ನಿನ್ನಡಿವಿಡಿದು ಪೊಡವಿಯೊಳು
ಬದುಕುತಿರ್ಪೇಕಾಕಿ ಕಾಯಿ
ಕದುಬಿಕೋಟಲೆಗೊಂಡು ಜನನ ಮರಣದ ಬಾಧೆ-
ಗೊದಗುವುದಿದೆಂಬಾಳೆ ಕಾಯಿ ೨

ನೀನೆ ಕೃಪೆಯಾಗಿ ಭವಮಾರ್ಗಕ್ಕೆ ಬುತ್ತಿಯನು
ನಾನು ಬೇಸತ್ತಡಕಿ ಕಾಯಿ
ಹೀನವೆನಿಸುವ ದುಷ್ಟಮತದಿ ಬಳಲುವ ದುಃಖ
ಏನು ಎನಗಿಚ್ಚಿಲ್ಲ ಕಾಯಿ
ಆನತಸುರಕ್ಷ ಶರಣಾಳಿ ಶಂಕರನೆಂಬ-
ಸೂನತರವಹ ಕವಳಿ ಕಾಯಿ
ಏನನರಿಯದ ಮದಾಂಧಕನ ಕೈವಿಡಿದು
ನೀನೈಯ್ದಿ ಬೆಂಬತ್ತಿ ಕಾಯಿ ೩

ಭವಮಾರ್ಗದೊಳು ಬಂದು ಭವಿಯಾಗಿ ಯಮಪುರ-
ಕ್ಕವತರಿಸುವದಕ್ಕಾರೆ ಕಾಯಿ
ಭವನಂಘ್ರಿ ಸ್ಮರಣೆಯಿಲ್ಲದೆ ಮನದೊಳಿನ್ನೊಂದು
ಶಿವಶಿವಾ ಎಂಬಿಕ್ಕೆ ಕಾಯಿ
ಭವಮೃಡ ಮಹೇಶನೆಂದೆನುತ ನೆನೆವವರ ನಿಜ
ಭವನಕ್ಕೈದಿಪೆ ಸೋಮೆ ಕಾಯಿ
ಭವ ಧವ ಭವೌಘ ನಿಮ್ಮಡಿವಿಡಿದು ಮತ್ತಡಸೆ
ದಿವಿಜದನುಜರು ನಗರೆ ಕಾಯಿ ೪

ಹರಭಿಕ್ಷ ಭೀಮವಿಷಕಂಠೋಗ್ರನೆಂದು ನಾಂ
ಪರಿಭವಿತಕ್ಕಲಸಂದೆಕಾಯಿ
ಶರಣಸತಿಯರಸ ನೀನೆನಿಸಿರ್ದು ಮತ್ತೆನ್ನೊಳೆ
ವಿರಸಗೊಂಡಿಹುದೇಕವಡೆ ಕಾಯಿ

ಗುರುಚೆನ್ನವೀರ ನೀನೆ ಭಕ್ತಿ ಇಷ್ಟಾರ್ಥ
ಕರನೆನಿಸುತಿಹ ಹೆಸರ ಕಾಯಿ
ಪರಮ ಗುರುವೆ ನಿಮ್ಮ ಪಾದಪದ್ಮವದೊಂದಿ
ಪರುನೆಂದೆಂಬ ಸೀರೆ ಕಾಯಿ ೫

## ೧೦ ನರಸುತ ಗುರುಸುತರಿರ್ವರ ಚರಿತೆಯು

ರಾಗ : ಮಾಳವ

ನರಸುತ ಗುರುಸುತರಿರ್ವರ ಚರಿತೆಯ-
ನರಿದು ಜನರು ವಿಚಾರಿಪುದು ॥ ಪಲ್ಲವಿ ॥

ಏಕಾದಶೇಂದ್ರಿಯ ವಿಕಾರದಿಂದಲ-
ನೇಕ ಭವಕೆ ಬಹ ನರಸುತನು
ಏಕಾದಶ ಸುಪ್ರಸಾದವ ಸವಿದು ಶಿ-
ವೈಕ್ಯನೆನಿಸುತಿಹ ಗುರುಸುತನು ೧

ದಶವಿಧ ವಾಯು ಪ್ರವರ್ತನೆಯೊಳು ಮತಿ
ಮಸಣಿಸಿ ಕೆಡುತಿಹ ನರಸುತನು
ದಶವಿಧಾಚರಣೆ ಜಲಾಚರಣೆಯ ಬಿಡ-
ದಸಮ ಸುಖದೊಳಿಹ ಗುರುಸುತನು ೨

ನವವಿಧದ್ವಾರದಿ ಸುಖವನನುಭವಿಸುತ
ಭವದೊಳು ಬರುತಿಹ ನರಸುತನು
ನವದ್ವಾರದಿ ನವಲಿಂಗವ ಕೀಲಿಸಿ-
ದವಿರಳನಿಜಸುಖ ಗುರುಸುತನು ೩

ಅಷ್ಟಮದಂಗಳ ಭ್ರಷ್ಟಚರಿತದಿಂ
ಕಷ್ಟಬಡುತಲಿಹ ನರಸುತನು
ಅಷ್ಟಾವರಣವೆ ತನಗಂಗವಾಗಿಹ ವಿ-
ಶಿಷ್ಟ ಪರಮಸುಖ ಗುರುಸುತನು ೪

ಸಪ್ತವ್ಯಸನಗಳ ಚಿತ್ತದಿ ಕಾಮಿಸಿ
ಗುಪ್ತಪಾತಕನಹ ನರಸುತನು
ಸಪ್ತವಿಧವ ಸದುಭಕ್ತಿಯೊಳಗೆ ಲೋ-
ಲುಪ್ತನೆನಿಸುತಿಹ ಗುರುಸುತನು ೫

ಅರಿಷಡುವರ್ಗದ ಚರಿತದೊಳಗೆ ಘನ
ದುರಿತನೆನಿಸುತಿಹ ನರಸುತನು
ಪರಮಷಟ್ಸ್ಥಲ ಮಾರ್ಗದೊಳಗೆ ಸ-
ಚ್ಚರಿತನೆನಿಸುತಿಹ ಗುರುಸುತನು ೬

ಪಂಚವಿಷಯದೊಳು ಸಂಚರಿಸುವ ಮಹ
ಪಂಚಪಾತಕನಹ ನರಸುತನು
ಪಂಚ ವಿಷಯದೊಳು ಪಂಚಾಕ್ಷರಗಳ
ಸಂಚವನರಿದಿಹ ಗುರುಸುತನು ೭

ಕರಣಚತುಷ್ಟಯದುರಿತಚರಿತ್ರದಿ
ಮರಣವನೊಂದುವ ನರಸುತನು
ನಿರುಪಮ ಚತುರ್‌ವಿಧ ಸಾರಾಯವೆ ನಿಜ-
ಹರಣವಾಗಿಹನು ಗುರುಸುತನು ೮

ತನುತ್ರಯ ಸುಖವನು ಮನದಿಂ ಭೋಗಿಸಿ
ಘನಪಾತಕನಹ ನರಸುತನು
ತನುತ್ರಯ ತ್ರಿವಿಧ ಲಿಂಗಾನುಭಾವ ಸುಖ-
ದನುವನರಿದ ಘನ ಗುರುಸುತನು ೯

ಧರೆಯೊಳಹಂಕಾರ ಮಮಕಾರಗಳೆಂ-
ಬೆರಡರೊಳಿರುತಿಹ ನರಸುತನು
ಶರಣನೆ ಸತಿ ಶಿವಲಿಂಗವೆ ಪತಿ ಎಂ-
ಬೆರಡರರುವಿನೊಳಿಹ ಗುರುಸುತನು ೧೦

ಏಕಾತ್ಮನೆ ತ್ರೈಲೋಕಭರಿತನೆಂ-
ದೇಕೀಕರಿಸುತಿಹ ನರಸುತನು
ಏಕೋದೇವ ಮದ್‌ಗುರುಚೆನ್ನವೀರನ
ಸಾಕಾರವೆ ನಿಜಗುರುಸುತನು ೧೧

## ೧೧ ಜೀವನವಾಗಿ ಪೇಳಿದನೊಲ್ದು

ರಾಗ : ಮಧುಮಾಧವಿ

ಜೀವನವಾಗಿ ಪೇಳಿದನೊಲ್ದು ಘನಗುರು
ದೇವ ಸದ್‌ಭಕ್ತಗಾರ್ಚಾರದ ಬಗೆಯ ॥ ಪಲ್ಲವಿ ॥

ಗುರುಕರುಣವ ಪಡೆದ ವಿರಳ ಲಿಂಗಾಂಗ
ದೆರೆಕತ್ವಮುಳ್ಳ ಸದ್‌ಭಕ್ತ ತಾನೊರ್ಮೆ-
ಧರೆಯೊಳು ನೆಲೆಸಿರ್ಪ ಭವಿಶೈವ ದೈವವ
ಬೆರೆಸದೆ ಭಾವಿಸದಿಹುದೆ ಲಿಂಗಾಚಾರ ೧

ಪರಸತ್ಯಶುದ್ಧ ಕಾಯಕದಿಂದ ಬಂದ
ಪರಿಣಾಮ ದ್ರವ್ಯವೆಲ್ಲವನು ಶ್ರದ್ಧೆಯೊಳು
ಗುರುಲಿಂಗ ಜಂಗಮಕ್ಕೈದೆ ದಾಸೋಹವ
ಹರುಷದಿಂ ಮಾಡಿ ನೀಡುವುದೆ ಸದಾಚಾರ ೨

ಪರತತ್ತ್ವ ಜಂಗಮಲಿಂಗದ ಭಕ್ತರೆ
ಪಿರಿದೆಂದವರಿಗಾನು ಲೆಂಕನೆಂದಂಜಿ
ನಿರಹಂಕಾರ ಭಕ್ತಿಯೊಳ್ ತ್ರೈಪದಾರ್ಥವ
ನಿರವಂಚನೆಯೊಳರ್ಪಿಸುವುದೆ ಭೃತ್ಯಾಚಾರ ೩

ಭಕ್ತದೇಹಿಕ ದೇವನೆಂಬುದನರಿದು ಸದ್-
ಭಕ್ತ ಜಂಗಮದೊಳ್ ಜಾತ್ಯಾಶ್ರಮಕುಲದ
ಯುಕ್ತಿಯನರಸದೆ ಭಕ್ತರೆ ಘನವೆಂದು
ಭಕ್ತರೊಕ್ಕುದ ಕೊಳ್ಳುವುದೆ ಶಿವಾಚಾರ ೪

ವರಗುರುಲಿಂಗ ಜಂಗಮದ ಪಾದೋದಕ
ಪರಮಪ್ರಸಾದ ಭಕ್ತಾಚಾರಂಗಳನು
ದುರುಳತನದ ಸೊಕ್ಕಿನಿಂದೊರಳ್-
ಪರದೂಷಣೆ ಕೇಳದಿಹುದೆ ಗಣಾಚಾರ ೫

ಗುರುಭಕ್ತಿ ಲಿಂಗಪೂಜೆಯು ಜಂಗಮದಾಸೋಹ
ಚರತೀರ್ಥ ಸೇವನೆ ಪ್ರಸಾದಭೋಗ
ನಿರುಪಮಖಂಡ ಭಕ್ತಿಯನುಳ್ಳ ಭಕ್ತರ್ಗೆ
ಹರಣ ಕಿರಣವಾಗೊಪ್ಪುವುದೆ ಧರ್ಮಾಚಾರ ೬

ಅಷ್ಟಾವರಣವೆ ಅಂಗ ಪಂಚಾಚಾರವೆ ಪ್ರಾಣ
ಇಷ್ಟಲಿಂಗಾರ್ಚನೆಯರ್ಪಿತವಧಾನ
ನೈಷ್ಠೆಯ ಪರಿಪೂರ್ಣ ನಡೆನುಡಿಯೊಳು ಕೃಪಾ-
ದೃಷ್ಟಿ ಸೂಸುವ ಚೆನ್ನವೀರನ ಪದಸೇವೆ ೭

## ೧೨ ಪರಮಪಾವನ ಶ್ರೀ ಗುರು ಕೊಟ್ಟ ಕಾಯಕ ಸತ್ಯವಣ್ಣ

ರಾಗ : ದೇಶಿ

ಪರಮಪಾವನ ಶ್ರೀ ಗುರು ಕೊಟ್ಟ ನಾಯಕ ಸತ್ಯವಣ್ಣ
ಶರಣ ಸಂತತಿಗೆ ಸದ್ಯೋನ್ಮೋಕ್ಷದಾಯಕ ಸತ್ಯವಣ್ಣ ॥ ಪಲ್ಲವಿ ॥

ಅರುವಿನೆಚ್ಚರವಿಡಿದನ್ಯವ ಮರೆದುದೆ ಸತ್ಯವಣ್ಣ
ಕರದಿಷ್ಟಲಿಂಗನಾಮಾಮೃತ ಗರೆದುದೆ ಸತ್ಯವಣ್ಣ
ಪರರ ದ್ರವ್ಯದ ಮೇಲಣಾಶೆಯ ತೊರೆದುದೆ ಸತ್ಯವಣ್ಣ
ತ್ವರಿತದಾನವೆ ಮಹಪುಣ್ಯವೆಂದರಿದುದೆ ಸತ್ಯವಣ್ಣ ೧

ಒಡಲವಿಡಿದು ತಾನೆ ನಡೆದಂತೆ ನುಡಿದುದೆ ಸತ್ಯವಣ್ಣ
ಪಿಡಿದ ನೇಮವ ಕಡೆತನಕಲು ಬಿಡದುದೆ ಸತ್ಯವಣ್ಣ
ಮೃಡಶಿರಣರಿಗೆ ಮಾರುತ್ತರಗೊಡದುದೆ ಸತ್ಯವಣ್ಣ
ಒಡೆಯರಂಘ್ರಿಯ ದೃಢತರದಿಂದ ಪಿಡಿದುದೆ ಸತ್ಯವಣ್ಣ ೨

ದುರಿತ ಪಂಚಕವೆಂಬ ವನಕೆ ಕುಠಾರವೆ ಸತ್ಯವಣ್ಣ
ಅರಿವರ್ಗ ಗಿರಿಗೆ ವಜ್ರಾಯುಧಕಾರವೆ ಸತ್ಯವಣ್ಣ
ವರವೇದಾಗಮ ಶ್ರುತಿ ಶಾಸ್ತ್ರದ ಸಾರವೆ ಸತ್ಯವಣ್ಣ
ಶರಣ ಸಂಕುಳದ ಸನ್ಮಾನ ವಿಸ್ತಾರವೆ ಸತ್ಯವಣ್ಣ ೩

ಭವತಮವನು ಓಡಿಸುವ ಚಿದ್‌ಭಾನುವೆ ಸತ್ಯವಣ್ಣ
ಶಿವಸುಖಾಮೃತವ ಕರೆವ ಕಾಮಧೇನುವೆ ಸತ್ಯವಣ್ಣ
ತವೆ ಚಿಂತಾಮಣಿಯು ಪೋಣಿಸುವ ಪ್ರಸೂನವೆ ಸತ್ಯವಣ್ಣ
ಭುವನತ್ರಯದಿ ನೋಡೆ ಬಹು ಪೂಜೆ ಮಾನವೆ ಸತ್ಯವಣ್ಣ ೪

ಕರಣನಿಕರವೆಂಬ ಶುನಿಗಳ ಬಡಿಗೋಲೆ ಸತ್ಯವಣ್ಣ
ಕೊರತೆ ಸಂಸಾರ ತೊರೆಯ ಹಾಯ್ವ ಹರಿಗೋಲೆ ಸತ್ಯವಣ್ಣ
ಪರತತ್ತ್ವದನುಭಾವ ಮಥನಾದ ಕಡಗೋಲೆ ಸತ್ಯವಣ್ಣ
ವರಭಕ್ತಿಗಜವು ಚಪ್ಪರಿಪ ಸದುವಿನಿಗೋಲೆ ಸತ್ಯವಣ್ಣ ೫

ಓತು ಸದ್‌ಭರಿತ ಸದ್‌ವಾಸನ ದೀಪವೆ ಸತ್ಯವಣ್ಣ
ಖ್ಯಾತಿವಡೆದು ಬೆಳಗುವ ಘನದೀಪವೆ ಸತ್ಯವಣ್ಣ
ನೀತಿ ನಿಜವಿದೆಂಬ ತಿಳಿನೀರ ಕೂಪವೆ ಸತ್ಯವಣ್ಣ
ಆತುಮವಿಡಿದು ಪ್ರಪಂಚನಿರ್‌ಲೇಪವೆ ಸತ್ಯವಣ್ಣ ೬

ಆಚಾರವೆಂಬ ಸುದಾಬ್ಧಿವರ್ಧನಕಿಂದು ಸತ್ಯವಣ್ಣ
ನೀಚವೃತ್ತಿಯ ನಡದ ಭಕ್ತರ ಬಂಧು ಸತ್ಯವಣ್ಣ
ಗೋಚರಿಸುವ ಶಿವಶರಣ ಕೃಪೆಯು ಸಿಂಧು ಸತ್ಯವಣ್ಣ
ವಾಚಾಮಗೋಚರವಾಗಿ ತೋರುವದೊಂದು ಸತ್ಯವಣ್ಣ ೭

ಕಾಯಕವಿಡಿದು ಕರ್ಮವನತಿಗಳೆವುದೆ ಸತ್ಯವಣ್ಣ
ಮಾಯಮೋಹವೆ ಭವಪಾಶವೆಂದುಳಿದುದೆ ಸತ್ಯವಣ್ಣ
ಕ್ರಿಯೆಜ್ಞಾನಗಳೆಂಬ ಚರಣದಿ ಸುಳಿದುದೆ ಸತ್ಯವಣ್ಣ
ಕಾಯಕ ಮಾನಸದ ದುರ್ಗುಣಗಳನಳಿದುದೆ ಸತ್ಯವಣ್ಣ ೮

ಸುರತಭೋಗಕೆ ಪಟ್ಟೆದರಸಿಯು ಕೂಟವೆ ಸತ್ಯವಣ್ಣ
ಪರಶಿವಲಿಂಗದೊಳನಿಮಿಷ ನೋಟವೆ ಸತ್ಯವಣ್ಣ
ನಿರುತಜಂಗಮಲಿಂಗದಾಸೋಹ ಮಾಟವೆ ಸತ್ಯವಣ್ಣ
ಗುರುಭಕ್ತಿವಿಡಿದು ಪ್ರಮಥರೊಡನಾಟವೆ ಸತ್ಯವಣ್ಣ ೯

ಮದಗಜವಿಂಡ ಸಂಹರಿಸುವ ಸಿಂಗವೆ ಸತ್ಯವಣ್ಣ
ಸದಮಲ ಸಹಜ ಸಜ್ಜನರಂತರಂಗವೆ ಸತ್ಯವಣ್ಣ
ಮುದವಲರುವ ಸದುಹೃದಯರುತ್ತುಂಗವೆ ಸತ್ಯವಣ್ಣ
ಒದಗುವ ಸಟಿಕುಟಿಲರ ಮಾನಭಂಗವೆ ಸತ್ಯವಣ್ಣ ೧೦

ಶರಣು ಹೊಕ್ಕವರ ದುರ್ಭವ ಪಾಶನಾದ ಶ್ರೀ ಸತ್ಯವಣ್ಣ
ಹರಣದಳುವಿನ ಸುಜ್ಞಾನ ಪ್ರಕಾಶ ಶ್ರೀ ಸತ್ಯವಣ್ಣ
ಮರಣರಹಿತ ಸದ್ಯೋನ್ಮೋಕ್ಷಕೋಶ ಶ್ರೀ ಸತ್ಯವಣ್ಣ
ಕರುಣಸಾಗರ ಚೆನ್ನವೀರಮದೀಶ ಶ್ರೀ ಸತ್ಯವಣ್ಣ ೧೧

## ೧೩ ನಂಬಿದೆ ಗುರುವೆ ನಂಬಿದೆ

ರಾಗ : ದ್ವಿಪದಿ

ನಂಬಿದೆ ಗುರುವೆ ನಂಬಿದೆ ಬಹು
ಡಂಭಕ ಶಿವನ ನಂಬಲಾರದೆ ನಿನ್ನ ನಂಬಿದೆ ॥ ಪಲ್ಲವಿ॥

ಗುರುವೆ ಪರಾತ್ಪರ ಪರವಸ್ತುವಲ್ಲದೆ
ಗುರುವ ಮೀರಿದ ಪರವಿವೆಂಬುದ ಕೇಳಿ ೧

ನಗುರೋರಧಿಕ ಸತ್ಯ ವಿದಿತಶಾಸನವೆಂದು
ಜಗದೊಳು ಸಾರುವ ಶ್ರುತಿಯು ಕರ್ಣದಿ ಕೇಳಿ ೨

ಗುರು ಮುನಿದರೆ ಹರ ಕಾಯಲರಿಯನೊಮ್ಮೆ
ಹರ ಮುನಿಧರೆ ಗುರು ಕಾಯ್ವನೆಂಬುದ ಕೇಳಿ ೩

ನಾಸ್ತಿ ತತ್ವಂ ಗುರೋಃ ಪರವೆಂಬುವ ಶ್ರುತಿ
ಶಾಸ್ತ್ರವೀ ಜಗದೊಳು ಪೊಗಳುತಿರಲು ಕೇಳಿ ೪

ಭ್ರಮರಕೀಟ ನ್ಯಾಯದಂತೆ ಸದ್ಗುರುಪಾದ-
ಕಮಲಕೆರಗಿ ಶಿಷ್ಯ ಗುರುವೆಯಾಗುವನೆಂದು ೫

ಎಂದೆಂದಿಗೂ ತನ್ನ ಹೊಂದಿದವರ ಭವ-
ಬಂಧನದೊಳಗಿರಿಸಿದ ಹರನ ಜರಿದು ನಿನ್ನ ೬

ತವೆ ತನ್ನ ಭಜಿಸಿದ ಹರಿಯನೀಕ್ರೈದು ದು-
ರ್ಭವದೊಳು ಬರಿಸಿದ ಹರನ ಜರಿದು ನಿನ್ನ ೭

ಹಲವು ಕಾಲವು ತನ್ನನೊಲಿಸಿದ ಬ್ರಹ್ಮನ
ತಲೆಯ ನೀಗಿದನೆಂದು ಹರನ ಜರಿದು ನಿನ್ನ ೮

ಅನುದಿನ ತನ್ನಡಿಗೆರಗಿದ ಸುರಪನ
ತನುಲಜ್ಜೆವೆರಸಿದ ಹರನ ಜರಿದು ನಿನ್ನ ೯

ಇಂದು ತನ್ನಂಯ ಮಸ್ತಕವನೊಂದಿ ಕ್ಷಯರೋಗ-
ದಿಂದೆ ಕುಂದುವನೆಂದು ಹರನ ಜರಿದು ನಿನ್ನ ೧೦

ಎಲ್ಲ ಕಾಲವು ತನ್ನ ಬಲಗೊಂಡ ಸೂರ್ಯನ
ಹಲ್ಲ ಕಳೆದನೆಂದು ಹರನ ಜರಿದು ನಿನ್ನ ೧೧

ತನ್ನ ಭಾಳದೊಳಿಹ ವಹ್ನಿಯ ನಾಲಗೆ-
ಯನ್ನು ಸೀಳಿದನೆಂದು ಹರನ ಜರಿದು ನಿನ್ನ ೧೨

ಹಿರಿಯ ಮಾವನ ಮುಖ್ಯ ಶಿರವನರಿದು ಸಣ್ಣ
ಕುರಿಯ ತಲೆಯನಿತ್ತ ಹರನ ಜರಿದು ನಿನ್ನ ೧೩

ಹಿತವ ಸಾಧಿಸೆ ತನ್ನ ಕುಸುಮದೊಳೆಸೆದ ಮ-
ನ್ಮಥನ ಸುಟ್ಟುರುಹಿದ ಹರನ ಜರಿದು ನಿನ್ನ ೧೪

ನೆರೆ ತನ್ನಾಭರಣವಾದುರುಗನ ಶಿರದೊಳು
ಧರೆಯ ಭಾರವನಿತ್ತ ಹರನ ಜರಿದು ನಿನ್ನ ೧೫

ಇರಳು ಹಗಲು ತನ್ನ ಸ್ಮರಿಸುವ ವಾಣಿಯ ಮೂ-
ಕೊರತೆಯೆಂದೆನಿಸಿದ ಹರನ ಜರಿದು ನಿನ್ನ ೧೬

ತನ್ನ ಪಟ್ಟದ ರಾಣಿ ಮುನ್ನಿನ ಭವದೊಳು
ಬನ್ನಬಟ್ಟುದ ಕೇಳಿ ಹರನ ಜರಿದು ನಿನ್ನ ೧೭

ಧೀರ ತನ್ನಯ ಭಕ್ತ ನಾರಾಯಣ ಸತಿ
ಜಾರೆ ಎಂದೆನಿಸಿದ ಹರನ ಜರಿದು ನಿನ್ನ ೧೮

ಮರವೆಯಿಂದಲಿ ತನ್ನ ತರಳನೆಂದರಿಯದೆ
ಕೊರಳ ಹರಿದನೆಂದು ಹರನ ಜರಿದು ನಿನ್ನ ೧೯

ಕೊಡನೀರ ಕೊಟ್ಟಣ್ಣದ ಬಡವೆ ನಂಬಿಯ ಕೂಸ
ಹೆಡಬಡಿಸಿ ಕೊಂದ ಹರನ ಜರಿದು ನಿನ್ನ ೨೦

ವಸುಧೆಯೊಳಗೆ ಸಣ್ಣ ಶಿಶುವ ಹಿಂಸೆಯ ಮಾಡಿ
ಪಿಸಿತಾಹಾರವ ತಿಂದ ಹರನ ಜರಿದು ನಿನ್ನ ೨೧

ಹೊರಕುಲದವನಂತೆ ಶಿರದ ಡೋವೆಯೊಳು ತಾ
ತಿರಿದು ತಿಂಬುವನೆಂದು ಹರನ ಜರಿದು ನಿನ್ನ ೨೨

ಶೂಲದಿ ಪೆಣ ಪೆಣ್ಣು ಶಿರದೊಳು ಕೊರಳೊಳ
ಗೆಲುಮಾಲೆ ಧರಿಸಿದ ಹರನ ಜರಿದು ನಿನ್ನ ೨೩

ಕರಿದೊಗಲುಟ್ಟಿರೆ ಶರಣರಾಚರಣೆಗೆ
ಸರಿಬಾರದವನೆಂದು ಹರನ ಜರಿದು ನಿನ್ನ ೨೪

ಸೂತಕವಿಡಿದ ಪಾತಕರಂತೆ ಯಜ್ಞೋಪ-
ವೀತವ ಧರಿಸಿದ ಹರನ ಜರಿದು ನಿನ್ನ ೨೫

ಈ ರೀತಿಯೊಳು ಜನಿವಾರವ ಧರಿಸಲು
ಹಾರುವ ಕುಲದವನೆಂದು ಹರನ ಜರಿದು ನಿನ್ನ ೨೬

ಸುರಪ ಶೂದ್ರಜ ವೈಶ್ಯ ಹರಿಯು ಕ್ಷತ್ರಿಯನು
ಹರನೆ ಬ್ರಾಹ್ಮಣನೆಂಬುದರಿದು ಹರನ ಜರಿದು ನಿನ್ನ ೨೭

ಲಿಂಗಸುಸಂಗ ತದಂಗಗ್ರಹಣವೆಂದು
ಲಿಂಗವಂಗವಿಸದ ಹರನ ಜರಿದು ನಿನ್ನ ೨೮

ಅತ್ಯತಿಷ್ಟದ್ದಶಾಂಗುಲ ಮಧ್ಯ ಲಿಂಗವ
ನಿತ್ಯ ತಾ ಭಜಿಸದ ಹರನ ಜರಿದು ನಿನ್ನ ೨೯

ಕಂಗಳು ಮೂರುಳ್ಳ ಶಿವನಾದರೇನಿಷ್ಟ-
ಲಿಂಗವೊಂದಿಲ್ಲದೆಂದಂಗವಿಸದೆ ನಿನ್ನ ೩೦

ಶಿಪಿವಿಷ್ಟನಾಚಾರವನು ವಿಚಾರಿಸಿ ನೋಡ-
ಲಪವಿತ್ರ ನಡತೆ ಎಂದರಿದು ಜರಿದು ನಿನ್ನ ೩೧

ಹರನಿಂದಲಧಿಕ ಸದ್‌ಗುರುವೆಂದು ಜಗದೊಳು
ಹರನ ಜರಿದು ನಿನ್ನ ಚರಣವೆ ಗತಿಯೆಂದು ೩೨

ವೀರಶೈವಾಚಾರ ಸಾರಸದ್ಗುರು ಚೆನ್ನ-
ವೀರ ಮತ್‌ಕರದಿಷ್ಟ ಲಿಂಗ ಜಂಗಮವೆಂದು ೩೩

## ೧೪ ಶ್ರೀಗುರುವೆ ಜಯತು ಭಕ್ತರ ಕಲ್ಪತರುವೆ

ರಾಗ : ಚೌಪದನು

ಶ್ರೀ ಗುರುವೆ ಜಯತು ಭಕ್ತರ ಕಲ್ಪತರುವೆ
ಅಗಮುಕತೀತ ಸುಜ್ಞಾನ ಸಾಗರವೆ
ರಾಗವರ್ಜಿತ ಭಕ್ತಿಮುಕ್ತಿಮಂದಿರವೆ
ಬೇಗದಿಂದೆನಗೆ ಮತಿಕೊಡು ಚಮತ್ಕರವೆ ೧

ಚೆನ್ನವೀರ ಪ್ರಮಥನೆಂಬ ಯತಿರಾಯ
ಮುನ್ನನಾದಿಯ ಪರಬ್ರಹ್ಮ ಚಿತ್‌ಕಾಯ
ತನ್ನ ನಜ್ಜೀವಲಿಂಗವನು ಎಡಗಯ್ಯ
ಭಿನ್ನವಿಲ್ಲದೆ ಪಿಡಿದು ಭಜಿಪ ನಮ್ಮಯ್ಯ ೨

ಎರಡನೆಯ ಕೈಲಾಸವೆನಿಪ ಹರಪುರದ
ದೊರೆ ಸೋಮಶೇಖರ ನರೇಂದ್ರನಕ್ಕರದ
ಅರಸಿ ಬಸವಮ್ಮಾಜಿ ಭಕ್ತಿಯೊಳು ಮೆರೆದ
ಶರಣ ಸಂತತಿಗಳಿಗೆ ಸಲೆಮೋಕ್ಷ ವರದ ೩

ಈತನುನ್ನತವ ಪೊಗಳುವಡಾರು ಬಲ್ಲ
ಚಾತುರಾಸ್ಯವನುಳ್ಳ ಬ್ರಹ್ಮಗಳವಲ್ಲ
ಭೂತಳದೊಳೊಂದು ನಾಲಗೆಯುವ ಸೊಲ್ಲ-
ದೇತಕ್ಕೆ ಬಲುಬುದ್ಧಿವಂತ ನಾನಲ್ಲ ೪

ಆದಿಯ ಪರಬ್ರಹ್ಮ ಶೂನ್ಯತತ್ವಾಳಿ
ಪಾದ ಪಾತಾಳವಾಕಾಶವೇ ಮೌಳಿ.
ಯಾದ ಪರಶಿವನೆ ಜಂಗಮರೂಪ ತಾಳಿ
ಮೇದಿನಿಯೊಳವತರಿಸಿ ಬಂದಿಹನು ಕೇಳಿ ೫

ಮಮಕಾರಹಂಕಾರ ಪಾವುಗೆಯ ಮೆಟ್ಟಿ
ಅಮಲಲಿಂಗಾಂಗ ಸಂಗವೆ ಯೋಗವಟ್ಟಿ
ಶಮೆ ಎಂಬ ಚಿದ್ವಸ್ತ್ರ ಜೋಳಿಗೆ ಕಟ್ಟಿ
ಕ್ರಮವೆಂಬ ದಂಡಾಗ್ರವಿಡಿದು ಮನಮುಟ್ಟಿ ೬

ಬೋಳು ಮಸ್ತಕ ಬೋಳ್ದೊಡೆ ಕಟಿಸೂತ್ರವೆರಸಿ
ತೋಳಿಗಾಧಾರ ಜಪಸರವಸಿರಿಸಿ
ಭಾಳದೊಳು ತ್ರೈಪುಂಡ್ರ ಭಸಿತವನು ಧರಿಸಿ
ತಾಳಿ ಶಾಂತಿಯನು ಕಾವಿಯನಲಂಕರಿಸಿ ೭

ವಾಮಹಸ್ತದೊಳಿಷ್ಟಲಿಂಗವನು ಪಿಡಿದು
ಶ್ರೀಮಹಾಮಂತ್ರವನು ಜಿಹ್ವೆಯೊಳು ನುಡಿದು
ತಾಮಸಾದಿಯನು ಸುಜ್ಞಾನದಿ ಕಡಿದು
ಭೂಮಿಯೊಳು ಪಾವನಾತ್ಮಕನಾಗಿ ನಡೆದು ೮

ನಡೆದ ದಾರಿಯನು ಸತ್ಪಥಮಾರ್ಗವೆನಿಸಿ
ಅಡಿಯಿಟ್ಟ ಭೂಮಿಯನು ಸುಕ್ಷೇತ್ರವೆಂದೆನಿಸಿ
ಪಿಡಿದ ಮಡು ಜಲಗಳನು ಶುಭತೀರ್ಥವೆನಿಸಿ
ಕಡುವಿರಕ್ತಿಯನುಳ್ಳ ಪರದೇಶಿಯೆನಿಸಿ ೯

ಹಾಳುಗುಡಿ ಬೀಳುಮಂಟಪದಲ್ಲಿ ಒರಗಿ
ಏಳುತಲೆ ಮುಂದೆ ದೇಶಾಂತರವ ತಿರುಗಿ
ಬಾಳುವತಿಧನಿಕರಿದ್ದೆಡೆಗೆ ತಾನೆರಗಿ
ಕೇಳನೊಬ್ಬರನಾಶೆಗಯ್ಯ ಮನಮರುಗಿ ೧೦

ಏನು ಹೇಳುವೆನು ವೈರಾಗ್ಯದುನ್ನತಿಯ
ಜ್ಞಾನಕ್ರಿಯಂಗಳೆರಡರ ಸದ್ಗತಿಯ
ಧ್ಯಾನ ಮೌನವು ನೇಮನಿತ್ಯ ಸುಖರತಿಯ
ಸ್ವಾನುಭಾವವನುಳ್ಳ ಜಂಗಮದ ಸ್ಥಿತಿಯ ೧೧

ಶ್ರೀಮತ್ ಸದಾನಂದ ಜ್ಞಾನ ಪ್ರಕಾಶ
ತ್ರೈಮಲ ವಿದೂರ ಸದ್ಭಕ್ತಿ ನಿಧಿಕೋಶ
ಕಾಮ ಮೊದಲಾದರಿ ವರ್ಗಗಳ ವಿನಾಶ
ಸ್ವಾಮಿ ಷಟುಸ್ಥಲಾಧೀಶ ವೀರ ಮಹೇಶ ೧೨

ಪರಕೆ ಪರವಾದ ಪರಶಿವನೆನಿಪ ಶರಣ
ವರಸುಪ್ರಸಾದ ಭಕ್ತಿಯ ಕಳಾಕಿರಣ
ಗುರುಲಿಂಗವೆರಡರಂತರ ನಿಜಹರಣ
ಶರಣರರ್ಚನೆಗೆಯ್ವ ನಿರ್ಮಲ ಸುಚರಣ ೧೩

ಭಕ್ತರಂತ ಸ್ತಿಮಿರಗಳೆವಧಿನಾಥ
ಮುಕ್ತಿಮಾರ್ಗವ ತೋರಿ ಮೆರೆವ ಪ್ರಖ್ಯಾತ
ಭಕ್ತಿ ಸುಜ್ಞಾನ ವೈರಾಗ್ಯ ಸಂಪ್ರೀತ
ಶಕ್ತಿರಹಿತನು ಶಕ್ತಿಗಾಸ್ಪದ ಪುನೀತ ೧೪

ಇಂತೆಸೆವ ಚರಮೂರ್ತಿ ಚೆನ್ನವೀರೇಶ
ಅಂತರಂಗವೆ ಮಹಾಲಿಂಗ ಪ್ರಕಾಶ
ಮುಂತೆ ಬಹಿರಂಗ ಷಣ್ಮಂತ್ರಮಯಕೋಶ
ಸಂತತಾಚಾರದನುಭಾವವುಲ್ಲಾಸ ೧೫

ಮಂಗಳೋತ್ಕರ ಶಿಲಾಪಳ್ಳಿ ಮಠದಿಂದ
ಲಿಂಗನಾಯಕ ಪುರಕಾಗಿ ನಡೆತಂದ
ಪುಂಗ ಪುರಾಣದಯ್ಯನ ಭಕ್ತಿಯಿಂದ
ತುಂಗಭದ್ರಾ ನದಿಯ ತೀರದೊಳು ನಿಂದ ೧೬

ನಿಂದ ಮಾತ್ರದೊಳಲ್ಲಿ ಮಠವ ನಿರ್ಮಿಸಿದ
ಅಂದು ಜಂಗಮದಂಘ್ರಿ ಪೂಜೆ ಮಾಡಿಸಿದ
ಬಂದ ಬಹುಗಣಕೆ ತೃಪ್ತಿಯನು ಮಾಡಿಸಿದ
ಚಂದದಿಂವಲಿ ವನವ ಹಾಕಿ ಪಾಲಿಸಿದ ೧೭

ಆ ವನಾಂತರದ ವಿಸ್ತರವನೇನೆಂಬೆ
ಮಾವುದಾಳಿಂಬದುರ್ಗಂಚಿ ನಿಂಬೆ
ಸೇವಂತಿಗಿಯು ಬಕುಳ ಕರವೀರ ಶಂಬಿ
ಆವ ಕಾಲದೊಳು ಓಂಕರಿಸುತಿಹ ತುಂಬಿ ೧೮

ಹುಲಿ ಹುಲ್ಲೆ ಸುಖವಾಗಿ ಬಾಳ್ವಾವನದಿ
ಬಲು ಸರ್ಪ ಗರುಡ ಕೂಡಿಹವು ಗೆಳೆತನದಿ
ಇಲಿ ಮರಿಯು ಬೆಕ್ಕು ಸಾಕುವುದು ಒಮ್ಮನದಿ
ಸುಲಭ ಚರಮೂರ್ತಿ ನೆಲೆಸಿರುವ ಕಾರಣದಿ ೧೯

ಪಲ್ಲವಿಸಿ ಬೆಳೆದ ವೃಕ್ಷದ ನೆಳಲ ತಂಪು
ಮೊಲ್ಲೆ ಮಲ್ಲಿಗೆ ನಾಗ ಸಂಪಿಗೆಗಂಪು
ಚೆಲ್ಲಿ ಮುಂಬರಿವುತಿಹ ನದಿಯುದಕದಿಂಪು
ಎಲ್ಲಿ ನೋಡಿದಡಲ್ಲಿ ಸೊಗಸುತಿಸ ಸೊಂಪು ೨೦

ಸೊಗಸುತಿರ್ಪ ವನದೊಳಿರ್ಪ ಶಿವಯೋಗಿ
ಜಗದೊಳೀತನೆ ಲಿಂಗಭೋಗೋಪಭೋಗಿ
ಯುಗ ಜುಗದ ಕಾಲ ಕಲ್ಪಿತವ ನೆರೆ ನೀಗಿ
ಹಗಲಿರುಳು ತತ್ವಾನುಭಾವಿ ತಾನಾಗಿ ೨೧

ಅನುಭಾವದೆಂಬುದ್ಯೈದಾಚಾರದಿರವು
ಘನ ಷಡಕ್ಷರಮಂತ್ರ ಮರೆಯದೆಚ್ಚರವು
ವಿನುತ ಕರದಿಷ್ಟಸಿದ್ಧಿಯ ನಿಜಾಗರವು
ಚಿನುಮಯಾತ್ಮಕ ದೇವ-ಭಕ್ತರಂತರವು ೨೨

ಆಚರಿಸುವ ಕ್ರಿಯಾ ಜಂಗಮದೊಳೆಸೆವ
ಸೂಚನೆಯ ಸುಪದಾರ್ಥವೆಂದು ಶೋಭಿಸುವ
ಈ ಚೌಪದಂಗಳನು ಪಾಡಿದನು ಬಸವ
ಶ್ರೀಚೆನ್ನವೀರ ಸಲಹುಗೆ ನಿಮ್ಮ ಶಿಶುವ ೨೩

ಪಾಹಿ ಮಾಂ ಭಕ್ತಜನಪೋಷ ಭವನಾಶ
ಪಾಹಿ ಮಾಂ ವೀರ ಮಾಹೇಶ ಜಗದೀಶ
ಪಾಹಿ ಪಾತಾಳ ಪಾದಾಕಾಶಕೇಶ
ಪಾಹಿ ಚಿದ್ವಿಲಾಸ ಕೊಡು ನಮಗೆ ಲೇಸ ೨೪

ಶರಣು ಶರಣಾರ್ಥಿ ಶರಣಾರ್ಥಿ ಐಮ್ಮಯ್ಯ
ಶರಣರರ್ಚನೆಗೈಯ್ವ ಪಾದವಿಮ್ಮಯ್ಯ
ಕರುಣ ನಿಧಿ ಭಕ್ತವತ್ಸಲ ನೀನಮ್ಮಯ್ಯ
ಗುರುಚೆನ್ನವೀರ ನಾ ನಿಮ್ಮ ಸೊಮ್ಮಯ್ಯ ೨೫

## ೧೫ ಪರಮ ಪಾವನ ಪರಬ್ರಹ್ಮಸ್ವರೂಪನೆ

ರಾಗ : ಸಾರಗ

ಪರಮ ಪಾವನ ಪರಬ್ರಹ್ಮಸ್ವರೂಪನೆ । ಚೆನ್ನವೀರ
ನಿರುಪಮ ನಿರಘ ನಿರ್ದ್ವಂದ್ವ ನಿರ್ಲೇಪನೆ । ಚೆನ್ನವೀರ ॥ ಪಲ್ಲವಿ ॥

ಶರಣಹೃದಯಮಂದಿರದಧಿಕಾರನೆ । ಚೆನ್ನವೀರ
ಕರುಣಸಾಗರ ವೇದಾಗಮ ಶ್ರುತಿಸಾರನೆ । ಚೆನ್ನವೀರ
ಕರುಣಾದಿಗುಣದುಪಹತಿಯ ವಿದೂರನೆ । ಚೆನ್ನವೀರ
ಹರಣವೈರಿಗಳಾರ ಗೆಲಿದ ಸುಧೀರನೆ । ಚೆನ್ನವೀರ ೧

ವಿನಮಿತಜನರ ಭವದ ಬೇರ ಕೀಳ್ವನೆ । ಚೆನ್ನವೀರ
ಅನುಭವಸಾರದರ್ಥವನುರೆ ಪೇಳ್ವನೆ । ಚೆನ್ನವೀರ
ಮನವಚನದೊಳುದಿಸುವ ಮಂತ್ರಗೇಳ್ವನೆ । ಚೆನ್ನವೀರ
ಘನಭಕ್ತಿಜ್ಞಾನ ವೈರಾಗ್ಯದಿಂ ಬಾಳ್ವನೆ । ಚೆನ್ನವೀರ ೨

ಅಷ್ಟಾವರಣವೆ ಅಂಗವಾಗಿ ತಾ ತೋರ್ಪನೆ । ಚೆನ್ನವೀರ
ಇಷ್ಟಲಿಂಗವೆ ತನ್ನ ಪ್ರಾಣವಾಗಿರ್ಪನೆ । ಚೆನ್ನವೀರ
ಸೃಷ್ಟಿಪಾವನವಾಗೆ ಚರಿಸುತ್ತೈತರ್ಪನೆ । ಚೆನ್ನವೀರ
ನಿಷ್ಠೆಯುಳ್ಳವರ ಕಾಡುವ ಕಷ್ಟದರ್ಪನೆ । ಚೆನ್ನವೀರ ೩

ಭೂತಪಂಚಕ ಮದವನು ತುಳಿವಾತನೆ । ಚೆನ್ನವೀರ
ಧಾತುಸಪ್ತಕ ಪಂಚಸೂತಕವಳಿವಾತನೆ । ಚೆನ್ನವೀರ
ನೀತಿಯುಳ್ಳವರಂತರಂಗವ ತಿಳಿವಾತನೆ । ಚೆನ್ನವೀರ
ಭೂತಳದೊಳು ಭಕ್ತಿಹಿತವಾಗಿ ಸುಳಿವಾತನೆ । ಚೆನ್ನವೀರ ೨

ವೀರಶೈವವನು ಬೋಧಿಸುವ ಆಚಾರ್ಯನೆ । ಚೆನ್ನವೀರ
ನೂರೊಂದುಸ್ಥಲವಂಬುಜಕ್ಕೆ ಚಿತ್‌ಸೂರ್ಯನೆ । ಚೆನ್ನವೀರ
ಆರುಸ್ಥಲಂಗಳಿಗಳವಾದ ಸತ್‌ಕಾರ್ಯನೆ । ಚೆನ್ನವೀರ
ಮೀರಿದಾಚರಣೆ ಮಾರ್ಗವುಳ್ಳ ಶೌರ್ಯನೆ । ಚೆನ್ನವೀರ ೩

ಶ್ರೀಮಹಾಗುರುವಿನ ಕರದೊಳು ಸೃಜಿಪನೆ । ಚೆನ್ನವೀರ
ವಾಮಹಸ್ತದೊಳಿಷ್ಟಲಿಂಗವ ಭಜಿಪನೆ । ಚೆನ್ನವೀರ
ತಾಮಸ ಮೊದಲಾದ ಭ್ರಮೆಗಳ ತ್ಯಜಿಪನೆ । ಚೆನ್ನವೀರ
ನೇಮದಿಂದಲಿ ಕ್ರಿಯಾಜ್ಞಾನವ ಭಜಿಪನೆ । ಚೆನ್ನವೀರ ೪

ಆಚಾರ ಘನವೆಂದು ವಾಚಿಸಿ ನುಡಿವನೆ । ಚೆನ್ನವೀರ
ವಾಚಕದೊಳು ತಾ ನುಡಿದಂತೆ ನಡೆವನೆ । ಚೆನ್ನವೀರ
ನೀಚವರ್ತನೆಯ ವೃಕ್ಷದ ಬೇರ ಕಡಿವಾತನೆ । ಚೆನ್ನವೀರ
ಶ್ರೀ ಚರಗುರುವಹ ಪರಮುಕ್ತಿಗೊಡೆಯನೆ । ಚೆನ್ನವೀರ ೫

ಸತ್ಯಲೋಕದೊಳಿಹ ಪ್ರಮಥರುತ್ತುಂಗನೆ । ಚೆನ್ನವೀರ
ತಥ್ಯಮಿಥ್ಯದಲಿ ಕಾಡುವ ಮಾಯಾಭಂಗನೆ । ಚೆನ್ನವೀರ
ಸತ್ತವಂಗೆ ಪ್ರಾಣವಹ ಮಹಾಲಿಂಗನೆ । ಚೆನ್ನವೀರ
ಉತ್ತಮ ಬಸವನ ಘನಗುರು ಸಂಗನೆ । ಚೆನ್ನವೀರ ೬

ಅಸಮ ಭಕ್ತರಿಗೆ ಬೇಡಿದನೀವ ಸುರತರು । ಚೆನ್ನವೀರ
ವಸುಧೆ ಪಾವನ ಮಾಡುವುದಕೆ ನಿರತರು । ಚೆನ್ನವೀರ
ಶಶಿಯಂತೆ ಷೋಡಶಕಳಾಭರಿತರೂಪನೆ । ಚೆನ್ನವೀರ
ಬಸವನ ಕರಮನ ಭಾವದೊಳಿರ್ಪ ಗುರು । ಚೆನ್ನವೀರ ೭

## ೧೬ ಛೀ ಹೆಡ್ಡ ನೀ ಎಂಥ ಶಿವಭಕ್ತ

ರಾಗ : ರೇಗುಪ್ತಿ

ಛೀ ಹೆಡ್ಡ ನೀ ಎಂಥ ಶಿವಭಕ್ತ । ಕ್ರಿಯಾ-
ಬಾಹ್ಯ ದೈವಂಗಳಿಗೆರಗುವೆ ॥ ಪಲ್ಲವಿ ॥

ಉರದ ನೆಜ್ಜೆಯೊಳಿಷ್ಟ ಲಿಂಗವು । ಇದ್ದು
ಮರಡಿ ದೇವರನೆದೆಯೊಳು ಕಟ್ಟಿ
ಕರಜಿಹ್ವೆ ಕೊನೆಯೊಳು ಶಸ್ತ್ರವ । ಹಾಕಿ
ಮರುಳುಗೊಂಡವನಂತೆ ಕುಣಿದಾಡುವೆ ೧

ಗಂಡನೆ ಶಿವಲಿಂಗವೆಂಬುತ । ನೀ
ಕಂಡ ದೈವಕೆ ಕೈಯ್ಯ ಮುಗಿಯುತ
ಕೆಂಡದ ಗಡಿಗೆ ಮಂಡೆಯ ಮೇಲೆ । ಹೊತ್ತು-
ಕೊಂಡು ಬಾಯಿಗೆ ಬೀಗಹಾಕುವೆ ೨

ಇಷ್ಟಲಿಂಗದ ಪೂಜೆ ಮಾಡುವೆ । ಬಹು
ನಿಷ್ಠೆಯಿಂದಲಿ ಕೊಂಡಾಡುವೆ
ಅಷ್ಟಾವರಣಂಗಳನರಸುವೆ । ಜಾತಿ-
ಭ್ರಷ್ಟ ದೈವಂಗಳ ಬೆರಸುವೆ ೩

ಒಡೆಯ ಸದ್ ಗುರುವಿತ್ತ ಲಿಂಗವು । ನಿನ್ನ
ಒಡಲ ಸಂಗವು ಹಿಂಗದಂತಿರ್ದು
ಮಡದಿ ಮಕ್ಕಳು ನೀನು ಸಹವಾಗಿ । ಹೋಗಿ
ಗುಡಿಯ ದೈವಂಗಳಿಗೆರಗುವೆ ೪

ಸತ್ಯ ಸದ್ಗುರು ಕೊಟ್ಟ ಲಿಂಗವ । ನೀನು
ನಿತ್ಯ ಪೂಜಿಸಿ ಮುಕ್ತಿ ಪಡೆಯದೆ
ಎತ್ತು ಕಂಟಲಿ ತೊತ್ತು ಬಂಟರು । ಹೋಗಿ
ಕ್ಷೇತ್ರದೈವಂಗಳಿಗೆರಗುವೆ ೫

ಕಟ್ಟಿದ ಲಿಂಗವನಡಿಮಾಡಿ । ನೀ
ಮೆಟ್ಟುಗಲ್ಲಿನ ಮೇಲೆ ಬೀಳುವೆ
ನೆಟ್ಟಗಲ್ಲದು ನಿನ್ನ ದೈವಹೆ । ನೀನು
ಕೆಟ್ಟ ಕೇಡಿನ್ನೇನ ಹೇಳುವೆ ೬

ಜಾಣ ಜಂಗಮದ ಪ್ರಸಾದವೆ । ಮುಕ್ತಿ-
ತಾಣವೆಂಬುದನರಿಯದೆ ಹೋಗಿ
ಕೋಣ ಮನುಜ ನಿನ್ನ ಕೈಮೊಡ್ಡಿ । ಬೇಡಿ
ಕ್ಷೀಣ ದೈವಂಗಳೆಂಜಲ ತಿನ್ನುವೆ ೭

ಶುನಿಗನ್ನ ಪಾನವ ಹಾಕಲು । ನಿನ್ನ
ಮನೆಯ ರಾತ್ರಿಯೊಳೆಲ್ಲ ಕಾಯ್ವುದು
ಶುನಿಗಿಂದ ಕರಕಷ್ಟ ದೈವವ । ನಿನ್ನ
ಮನೆಯ ದೇವರೆಂದು ಭಜಿಸುವೆ ೮

ಹಿಂಗದೆ ಸೋಮ-ಮಂಗಳವಾರ । ನೀನು
ಜಂಗಮವನು ಕರೆದುಣಿಸುವೆ
ಲಿಂಗ ಜಂಗಮ ನಿನ್ನ ದೈವವು । ವಾ-
ರಂಗಳೆ ನಿನಗೆ ದೈವಂಗಳೆ ೯

ಧರೆಯ ಪಾಂಚಾಳರಿಂದಲಿ ಪುಟ್ಟಿ । ತಾಂ-
ಬರ ಭೂತಾಳದ ಮರದೊಳಗಿರ್ದು
ನರಮನುಜರ ಬೇಡಿ ಕಾಂಡುಂಬ । ದೈವ
ವರವ ಬೇಡಿದರೇನ ಕೊಡುವದೊ ೧೦

ವೀರಶೈವಾಚಾರ ಸದ್ಗುರು । ಚೆನ್ನ-
ವೀರನ ಕರುಣವ ಪಡೆಯದೆ
ವೀರಣ್ಣ ಬಸವಣ್ಣ ಮೊದಲಾದ । ಬಹಳ
ಭೂರಿ ದೈವಂಗಳ ಭಜಿಸುವೆ ೧೧

## ೧೭ ಲಿಂಗವೆ ಗತಿ ಎನಗೆ ಸದ್ಗುರು

ರಾಗ : ಭೈರವಿ

ಲಿಂಗವೆ ಗತಿ ಎನಗೆ ಸದ್ಗುರು । ಚರ-
ಲಿಂಗವೆ ಗತಿ ಎನಗೆ
ಕಂಗಳ ಕೊನೆಯೊಳು ಬೆಳಗಿ ತೋರುವ । ಪ್ರಭು-
ಲಿಂಗವೆ ಗತಿ ಎನಗೆ ॥ ಪಲ್ಲವಿ ॥

ವರ ಸದಾಚಾರ ಸಂಯುತ ಗುರು ಭಕ್ತನ
ಕರ ಕಮಲದೊಳೆಡೆವಿಡದೆ ರಾಜಿಪ ಕ್ರಿಯಾ ೧

ಇಷ್ಟ ನೈಷ್ಠಿಕ ಶೀಲನೇಮ ವ್ರತಾಂಚಿತ
ಶಿಷ್ಟ ಮಹೇಶನಂತರದೊಳೊಪ್ಪುವ ಗುರು ೨

ರೂಪುರುಚಿ ತೃಪ್ತ್ಯಾವಿಶೇಷ ಸವಿವ ಚಿತ್ ಕ-
ಲಾಪ ನಿರ್ಲೇಪ ಪ್ರಸಾದಿಯೊಳಿಹ ಶಿವ ೩

ಜ್ಞಾನಕ್ರಿಯೆ ಸನ್ಮಾರ್ಗದೊಳ್ ನಡೆದ ಲಿಂ-
ಗಾನುಭವದ ಪ್ರಾಣಲಿಂಗಿಯೊಳಿಹಾಚಾರ ೪

ಶಿವಪಥ ಭಜನ ಶಿವಾರ್ಚನಾರತ ಪದ
ಶಿವನೊಡೆತನ ಶಿವಶರಣರನೊಳಿಹ ಶೇಷ ೫

ಸೋಹದಾಸೋಹವೆಂಬೆರಡಳಿದಚಲ ನಿರ್-
ದೇಹ ಶಿವೈಕ್ಯನೊಳ್ ನೆಲಸಿ ಶೋಭಿಪ ಮಹ ೬

ಕರಮನ ನಯನದೊಳ್ ಮೆರೆವ ಪ್ರಾಣೇಶ ಸದ್-
ಗುರುವರ ಚೆನ್ನವೀರೇಶ ನಿರಂಜನ ೭

## ೧೮ ತೂಗಿರೆ ಶರಣ ಸತಿಯರು

ರಾಗ : ಮಾಳವ

ತೂಗಿರೆ ಶರಣ ಸತಿಯರು ಶಿವ-
ಯೋಗ ಸಂಪದದೊಳು ಬಿಡದೆ ಲಿಂಗವನು ॥ ಪಲ್ಲವಿ ॥

ಗುರುವರ ಹಸ್ತಾಬ್ಜ ಮಧ್ಯದೊಳೊಪ್ಪುವ
ನಿರುಪಮ ಸತ್‌ಕ್ರಿಯಾಲಿಂಗ ಗುರುಮೂರ್ತಿ
ಪರಮ ಸತ್‌ಕ್ರಿಯಾಸ್ಥಾನಭರಿತ ಶರಣರಿಗೆ
ವರವೀವ ಪರತರ ಇಷ್ಟಲಿಂಗವನು ೧

ವರಸುಮನೈಕಕರಾಬ್ಜರಂತರದೊಳು
ಮೆರೆವ ಶ್ರೀ ಶಿವಲಿಂಗ ಚರಲಿಂಗ ಸಂಗ
ಪರಿಪೂರ್ಣ ನಡೆನುಡಿ ಸಮರಸ ಭಕ್ತರ
ಪೊರೆವ ದಯಾಪಾಂಗ ಪ್ರಾಣಲಿಂಗವ ೨

ನಿರುತ ಸದ್‌ಭಾವ ಪಾಣಿಪೀಠದೊಳಿಹ
ಚರಶೇಷಲಿಂಗ ಚಿನ್ಮಯಲಿಂಗ ಮೂರ್ತಿ
ನಿರಘ ನಿರಂಜನ ನಿರವಯ ನಿತ್ಯ ಶ್ರೀ
ಗುರು ಚೆನ್ನವೀರ ಮದ್‌ಭಾವಲಿಂಗವನು ೩

## ೧೯ ಲಿಂಗವೆ ಗತಿ ಎನಗೆ ಪಂಚಾಕ್ಷರ

ಲಿಂಗವೆ ಗತಿ ಎನಗೆ । ಪಂಚಾಕ್ಷರ । ಸಂಗವೆ ಮತಿ ಎನಗೆ
ಸಂಗನ ಶರಣರಂಗದೊಳಿಹ । ಇಷ್ಟ । ಲಿಂಗವೆ ಗತಿ ಎನಗೆ ॥ ಪಲ್ಲವಿ ॥

ನಾಶಿಕ ಮುಖದ ಸದ್‌ವಾಸನೆ ಶೇಷವ
ಸೂಸದಂತೀವ ಮಂತ್ರನ್ಯಾಸ ನಕಾರಕ್ರಿಯ ೧

ರಸನೆಯು ಮುಖದ ಚಿದ್ರಸ ಸುಪ್ರಸಾದವ
ಸಸಿನೆಯಿಂದೀ ಮಂತ್ರವಿಸರ ಮಕಾರದ ಗುರು ೨

ಕಂಗಳ ಮುಖದ ಚಿದಂಗ ಪ್ರಸಾದವ
ಲಿಂಗದಂತೀವ ಮಂತ್ರದಂಗ ಶಿಕಾರ ಶಿವ ೩

ವರತತ್ವಾಂಗ ಮುಖದ ಸುಸ್ಪರ್ಶನ ಶೇಷವ
ತ್ವರಿತದಿಂದೀವ ಮಂತ್ರದಿರವೆ ವಕಾರ ಚರ ೪

ಶ್ರವಣ ಮುಖದ ಶಬ್ದ ಪ್ರವರ ಪ್ರಸಾದವ
ತವಕದಿಂದೀವ ಮಂತ್ರದ ಯಕಾರ ಶೇಷ ೫

ಹೃದಯ ಮುಖದ ತೃಪ್ತಿ ಸದಮಲ ಶೇಷವ
ಒಲವಿನಿಂದೀವುದೆ ಮಂತ್ರ ಓಂಕಾರ ಮಹಾ ೬

ಚಾರು ಷಣ್ಮುಖ ಮಂತ್ರದಾರುವೇಷವಕೊಂಡ
ಸಾರಸದ್ಗುರು ಚೆನ್ನವೀರ ಮಹೇಶ ಪ್ರಭು ೭

## ೨೦ ಕರೆದಳು ಲಿಂಗಪತಿಯು ಶರಣಸತಿ

ರಾಗ : ಸುವ್ವಾಲಿ

ಕರೆದಳು ಲಿಂಗಪತಿಯು । ಶರಣಸತಿ
ಕರೆದಳು ಲಿಂಗಪತಿಯು ॥ ಪಲ್ಲವಿ ॥

ಭವಗಿರಿಕುಲೀಶ ಶ್ರೀಗುರು ಕರುಣಾಮೃತ-
ದವಿರಳಾಚಾರಲಿಂಗವೆ ಬಾರೆಂದು ೧

ಭಾವಮನೋವಾಕ್ಕಾಯ ಮುಕ್ತ ಚಿನ್ಮಂತ್ರ ಸಂ-
ಜೀವನೆ ಗುರುಲಿಂಗ ಮೂರ್ತಿಯೆ ಬಾರೆಂದು ೨

ಅತ್ಯತಿಷ್ಠದ್ದಶಾಂಗುಲ ಪದಯುಗ ವಿಭು
ನಿತ್ಯ ಜಂಗಮ ಶಿವಲಿಂಗವೆ ಬಾರೆಂದು ೩

ದೀಕ್ಷೆ ಶಿಕ್ಷೆ ಜ್ಞಾನ ಪಾದೋದಕ ತ್ರಿವಿಧವಿ-
ಚಕ್ಷ ಜಂಗಮಲಿಂಗವೆ ಬಾರೆಂದು ೪

ಕಾಯಚಿತ್ ಕಾರಣ ಭಾವಾರ್ಪಿತ ಶೇಷನೈ-
ಜಾಯುವೆ ಪ್ರಸಾದಲಿಂಗವೆ ಬಾರೆಂದು ೫

ಭೂತಿ ರುದ್ರಾಕ್ಷಿ ಮಂತ್ರಾಷ್ಟಾವರಣಂಗೈಕ್ಯ
ಖ್ಯಾತ ಪುನೀತ ಮಹಾಲಿಂಗವೆ ಬಾರೆಂದು ೬

ಚಾರು ಪಂಚಾಚಾರ ಪ್ರಾಣಸಂಯುತ ಚೆನ್ನ-
ವೀರ ನಿರಂಜನಲಿಂಗವೆ ಬಾರೆಂದು ೭

## ೨೧ ಸಲಹಲಿ ತಾನೆ ಒಲಿಯಲಿ

ರಾಗ : ದೇಶಿ

ಸಲಹಲಿ ತಾನೆ ಒಲಿಯಲಿ ಬಹು
ಸುಲಭದೋರುವ ನಿಜಲಿಂಗದಂಘ್ರಿಗಳೆನ್ನ ॥ ಪಲ್ಲವಿ ॥

ಅರುಹಿನಾಚರಣೆಯ ಕುರುಹಿನಂಗದ ವಾಮ-
ಕರಸಿಂಹಾಸನವಿಷ್ಟಲಿಂಗದಂಘ್ರಿಗಳೆನ್ನ ೧

ನೇತ್ರ ಪ್ರಕಾಶದ ಸೂತ್ರವಿಡಿದು ಜ್ಞಾನ
ಮಾತ್ರವಾಗಿಹ ಪ್ರಾಣಲಿಂಗದಂಘ್ರಿಗಳೆನ್ನ ೨

ಉಚ್ಚರಿಸುವ ಮಂತ್ರದೆಚ್ಚರಗುಂಪದ
ಬಚ್ಚಬರಿಯ ಭಾವಲಿಂಗದಂಘ್ರಿಗಳೆನ್ನ ೩

ಸಾಧು ಸಜ್ಜನಮುಕ್ತಿ ಹಾದಿ ಎಂದೆನಿಸುವ-
ನಾದಿ ಪಂಚಾಚಾರ ಲಿಂಗದಂಘ್ರಿಗಳೆನ್ನ ೪

ಈಕ್ಷಿಸಿ ಭಕ್ತರಾಪೇಕ್ಷೆಯ ಸಲಿಸುವ
ಮೋಕ್ಷದಾಯಕ ಗುರುಲಿಂಗದಂಘ್ರಿಗಳೆನ್ನ ೫

ಲಿಂಗದ ವಿಶ್ವಜೀವಂಗಳೊಳಗೆ ತಾನು
ಸಂಗವಾಗಿಹ ಶಿವಲಿಂಗದಂಘ್ರಿಗಳೆನ್ನ ೬

ಸ್ವಯಂಚರಪರಮೂರದ್ವಯಮಾಚರಿಸುವ-
ಕ್ಷಯನಿಧಿ ಜಂಗಮಲಿಂಗದಂಘ್ರಿಗಳೆನ್ನ ೭

ಉದ್ಧರಿಸುವ ಘನಶುದ್ಧ ಸುಸಿದ್ಧ ಪ್ರ-
ಸಿದ್ಧ ತ್ರೈವಿಧ ಶೇಷಲಿಂಗದಂಘ್ರಿಗಳೆನ್ನ ೮

ಪಿಂಡಬ್ರಹ್ಮಾಂಡದ ಖಂಡಿತವಿಲ್ಲದ-
ಖಂಡಭರಿತ ಮಹಾಲಿಂಗದಂಘ್ರಿಗಳೆನ್ನ ೯

ಮೆರೆವ ಬಾಂದಳಕೆ ಭಾಸ್ಕರನಾಗಿ ಬೆಳಗುವ
ನಿರುಪಮ ನಿಷ್ಕಲ ಲಿಂಗದಂಘ್ರಿಗಳೆನ್ನ ೧೦

ಅಕಳಂಕ ಸುಖದ ಸನ್‌ಮುಖವ ಕಾಣಿಸುವಲ್ಲಿ
ಮುಕುರವಾಗಿಹ ಶೂನ್ಯಲಿಂಗದಂಘ್ರಿಗಳೆನ್ನ ೧೧

ನರರ ವಾಙ್ಮನಕಗೋಚರವಹ ಶರಣರ
ಪೊರೆವ ನಿರಂಜನ ಲಿಂಗದಂಘ್ರಿಗಳೆನ್ನ ೧೨

ನೂರೊಂದು ಸ್ಥಲದ ವಿಚಾರ ವಿಗ್ರಹ ಚೆನ್ನ-
ವೀರ ಮದ್‌ಗುರುಲಿಂಗ ಜಂಗಮದಂಘ್ರಿಗಳೆನ್ನ ೧೩

## ೨೨ ಅಂಗದ ಲತೆ ಕಮಲಂಗಳೊಳಗೆ

ಅಂಗದ ಲತೆ ಕಮಲಂಗಳೊಳಗೆ ನವಲಿಂಗ ತುಂಬಿ
ಮಂಗಲ ಘೋಷದೆ ಝೇಂಕರಿಸುತಲಿದೆ ಲಿಂಗ ತುಂಬಿ ॥ ಪಲ್ಲವಿ ॥

ಚಾರು ಚೌದಳದರವಿಂದದೊಳಾಚಾರ ಲಿಂಗ ತುಂಬಿ
ಆರು ದಳದ ಸರಸಿಜದೊಳು ಶ್ರೀ ಗುರುಲಿಂಗ ತುಂಬಿ
ಈರೈದು ದಳದ ವಾರಿಜದೊಳು ವರಶಿವಲಿಂಗ ತುಂಬಿ
ದ್ವಾದಶದಳನಳಿನದೊಳು ಜಂಗಮಲಿಂಗ ತುಂಬಿ ೧

ಪದಿನಾರೆಸಳ ಪದುಮದೊಳು ಸುಪ್ರಸಾದಲಿಂಗ ತುಂಬಿ
ದ್ವಿದಳ ಸರೋಜದ ಸೌರಭದೊಳು ಮಹಾಲಿಂಗ ತುಂಬಿ
ವಿದಿತ ಸಾಸಿರದಳದಬ್ಜದಿ ನಿಷ್ಕಳಲಿಂಗ ತುಂಬಿ
ತ್ರಿದಳ ತಾಮರಸದೊಳು ನಿಃಶೂನ್ಯಲಿಂಗ ತುಂಬಿ ೨

ಏಕೈಕದಳದ ಕಂಜದೊಳು ನಿರಂಜನಲಿಂಗ ತುಂಬಿ
ಸಾಕಾರಾಂಗದ ವಾಮ ಕರಪೀಠದೊಳಗಿಪ್ಪಲಿಂಗ ತುಂಬಿ
ತ್ರೈಕರಣಾದಿ ಸರ್ವಾಂಗದೊಳಗೆ ಪ್ರಾಣಲಿಂಗ ತುಂಬಿ
ಶ್ರೀಕರ ಗುರುಚೆನ್ನವೀರ ತಾನಾದುದು ಲಿಂಗತುಂಬಿ ೩

## ೨೩ ಪಂಚಾಚಾರ ಸುಮಾರ್ಗದೊಳು

ರಾಗ : ಸ್ವರವಚನ

ಪಂಚಾಚಾರ ಸುಮಾರ್ಗದೊಳು
ಸಂಚರಿಸುತ ಘನಲಿಂಗಯ್ಯ ॥ ಪಲ್ಲವಿ ॥

ಕರದೊಳು ಪರಶಿವಲಿಂಗವ ಭಜಿಸುತ
ಪರದೈವಂಗಳ ತ್ಯಜಿಸುತಲಿ
ಪರತರ ನೈಷ್ಠೆಯೊಳಿರಲದು ಲಿಂಗಾ-
ಚರಣೆ ಕ್ರಿಯಾಚಾರ ಲಿಂಗಯ್ಯ ೧

ಅವರವರೊಡವೆಯು ಅವರವರಿಗೆ ಸಲಿಸುತೆ
ವಿವರದೆ ತನುಮನಧನವ ಗುರು-
ಶಿವ ಚರ ತ್ರಿವಿಧಕೆ ಕೊಡುವ ಸದಾಚಾ-
ರವನರುಹಿದ ಗುರುಲಿಂಗಯ್ಯ ೨

ಕಂಗಳ ಕೋಡಿನೊಳುದಿಸಿದ ಲಿಂಗವ-
ನಂಗದ ಕರ ಮನ ಭಾವದೊಳು
ಅಂಗವಿಸಿರುತಿಹ ವ್ರತವೆ ಶಿವಾಚಾ-
ರಂಗದಕಳೆ ಶಿವಲಿಂಗಯ್ಯ ೩

ಉತ್ತಮ ಗುರುಚರ ಲಿಂಗಭಕ್ತರ
ಕರ್ತರೆನಗೆ ನಾ ಬಳಿದೊತ್ತು
ಸತ್ಯವಿದೆಂಬುದು ಭೃತ್ಯಾಚಾರದ
ವರ್ತನೆ ಜಂಗಮಲಿಂಗಯ್ಯ ೪

ಚಾರುವ್ರತ ಸುಶೀಲರ ಕಂಡರೆ
ನೇರದೆ ನಿಂದಿಸಿ ಬೊಗಳುವರ
ದೂರ ತ್ಯಜಿಸುವುದು ವೀರಶಿವಗಣಾ-
ಚಾರ ಪ್ರಸಾದವು ಲಿಂಗಯ್ಯ ೫

ಸದಮಲಲಿಂಗ ಸದಾಶಿವ ಭೃತ್ಯ-
ವಧಿಕ ಗಣಾಚಾರಂಗಳನು
ಮುದದಿಂದಾಚರಿಸುವ ಸದ್ಭಕ್ತರ
ಹೃದಯದೊಳಿಹ ಮಹಲಿಂಗಯ್ಯ ೬

ಪಾವನಕರ ಶ್ರೀ ಪಂಚಾಚಾರವೆ
ಜೀವನವಾಗಿರುತಿಹ ವೀರ-
ಶೈವ ಸುದಾಬ್ಧಿಗೆ ಚೆನ್ನವೀರಗುರು-
ದೇವ ಸುಧಾಕರ ಲಿಂಗಯ್ಯ ೭

## ೨೪ ನವಬ್ರಹ್ಮ ಲಿಂಗಗಳ ಭಜಿಸುವೆ

ರಾಗ : ರೇಗುಪ್ತಿ

ನವ ಬ್ರಹ್ಮ ಲಿಂಗಗಳ ಭಜಿಸುವೆ । ನಾಂ ಭಜಿಸುವೆ ನಿತ್ಯ ಸಿ-
ಜವಾಮುಕರದಿಷ್ಟ ಬ್ರಹ್ಮದಂಘ್ರಿಯ ನಂಬಿ ॥ ಪಲ್ಲವಿ ॥

ಶೀಲಸದ್ಭಕ್ತನೈದಾಚಾರಾಂಗದ ಮುಕ್ತಿ
ಮೂಲಾಧಾರದ ಮೂರ್ತಿ ಬ್ರಹ್ಮದಂಘ್ರಿಯ ನಂಬಿ ೧

ಅಹಮಳಿದ ಮಹೇಶನ ಗೌರವಾಂಗದ
ಗುಹ್ಯಸ್ಥಾನದ ಖಂಡ ಬ್ರಹ್ಮದಂಘ್ರಿಯ ನಂಬಿ ೨

ಶೋಭಿಪ ಸುಪ್ರಸಾದಿಯ ಶ್ರೀ ಶಿವಲಿಂಗದ
ನಾಭಿಸ್ಥಲದ ಕಲಾನಂದ ಬ್ರಹ್ಮದಂಘ್ರಿಯ ನಂಬಿ ೩

ಸದಮಲ ಪ್ರಾಣಲಿಂಗಿಯ ಜಂಗಮಾಂಗದ
ಹೃದಯ ಸ್ಥಾನಾನಂದ ಬ್ರಹ್ಮದಂಘ್ರಿಯ ನಂಬಿ ೪

ವಿಳಸಿತ ಶರಣನ ಸುಪ್ರಸಾದಾಂಗದ-
ಗಳದ ಶ್ರೀ ವಿಜ್ಞಾನ ಬ್ರಹ್ಮದಂಘ್ರಿಯ ನಂಬಿ ೫

ಸಕಲ ಲಿಂಗೈಕ್ಯನ ಶ್ರೀ ಮಹದಂಗದ
ಭೃಕುಟಸ್ಥಾನದ ವರ ಬ್ರಹ್ಮದಂಘ್ರಿಯ ನಂಬಿ ೬

ತಂದೆ ಶ್ರೀಗುರುವಿನ ತ್ಯಾಗಾಂಗದ ಬ್ರಹ್ಮ-
ರಂಧ್ರದ ನಿಷ್ಕಳ ಬ್ರಹ್ಮದಂಘ್ರಿಯ ನಂಬಿ ೭

ಲಿಂಗಜಂಗಮದ ಭೋಗಾಂಗದ ಶಿಖಿಕರ್ಪು
ರಂಗಳಾಲಿಯ ಶೂನ್ಯಬ್ರಹ್ಮದಂಘ್ರಿಯ ನಂಬಿ ೮

ಅಸಮ ಜಂಗಮಲಿಂಗ ಯೋಗಾಂಗದ-
ಹಿಸುವ ನಿರಂಜನ ಬ್ರಹ್ಮದಂಘ್ರಿಯ ನಂಬಿ ೯

ಅವಿರಳ ಲಿಂಗಾಂಗ ಸಂಗ ಸಂಯೋಗದ
ಸುವಿವೇಕ ನವವಿಧ ಬ್ರಹ್ಮದಂಘ್ರಿಯ ನಂಬಿ ೧೦

ವೀರಶೈವಾಚಾರ ಸಾರ ಸದ್‌ಗುರುಚೆನ್ನ-
ವೀರ ಪರಾತ್ಪರ ಬ್ರಹ್ಮದಂಘ್ರಿಯ ನಂಬಿ ೧೧

## ೨೫ ಲಿಂಗವಾಡಿದರುಯ್ಯಾಲೆ

ರಾಗ : ಭೈರವಿ

ಲಿಂಗವಾಡಿದರುಯ್ಯಾಲೆ । ಷಟುಸ್ಥಲ ಸು ।
ಸಂಗಿಗಳ ಕರದೊಳ್ ಸಲೆ ॥ ಪಲ್ಲವಿ ॥

ಸತ್ಯದಿಂ ಕ್ರಯವಿಕ್ರಯ । ಮಾಡಿ ಬಂದ ।
ಅರ್ಥ ಚರಗುರುವಿನುಭಯ
ನಿತ್ಯದಾಸೋಹ ಪ್ರಿಯ
ಭಕ್ತನ ಸುಚಿತ್ತಹಸ್ತದಿ ಸತ್‌ಕ್ರಿಯ ೧

ಬದ್ಧಭವಿ ಶೈವರೊರವ । ಬೇಡದತಿ ।
ಶುದ್ಧ ನೈಷ್ಠೆಯೊಳ್ ಮೆರೆವ
ನಿರ್ಧಾರನಿರವ ಬೀರುವ । ಸು-
ಬುದ್ಧಿಕರದೊಳ್ ಗೌರವ ೨

ಆರೈದು ನಿಜಶೇಷವ । ಪಡೆದುಂಡು
ಮೂರಾವಸ್ಥೆಯ ದಹಿಸುವ ।
ಧೀರ ಪ್ರಸಾದಿಗೆಸೆವ । ನಿರಹಂ-
ಕಾರಕರಪೀಠದಿ ಶಿವ ೩

ಅಮಲ ಶಿವಲಿಂಗದೀ ಕ್ರಮು । ಸುಖದುಃಖ
ಸಮಗಂಡು ಅಳವಟ್ಟಾ । ಚರಿಸುವ ಸಮು
ಶಮಯುಗ್ರ ಕೆಡಕೋತ್ತಮು । ಅಸುಲಿಂಗಿ
ಸುಮನಕರದೊಳ್ ಜಂಗಮು ೪

ನಾನುನೀನಳಿದ ಭೇದ । ಲಿಂಗಕ್ಕೆ
ತಾನೆ ನಿಜ ಸತಿಯಾಳಾದ
ದಾನಿ ಶರಣನ ವಿನೋದ-
ಮೆನಿಪ ಸುಜ್ಞಾನಹಸ್ತದಿ ಪ್ರಸಾದ ೫

ಜೀವಪರಮರ ಸಂಗ್ರಹ । ದಂತೆ ಸಂ-
ಜೀವಲಿಂಗದೊಳೊಂದಿಹ ।
ನಾವನವನ್ಯೈಕಾಸ್ಪೃಹ । ನಮಲ ಸದ್-
ಭಾವಕರಪೀಠದಿ ಮಹಾ ೬

ಕಾಲಕಲ್ಪಿತವಿದೂರ । ತತ್ತ್ವದ ಸ-
ಕೀಲ ಮರ್ಮದ ಸುಸಾರ
ಶೀಲ ನಡೆನುಡಿವಿಚಾರ । ಪರಮಸುಖವಿ-
ಲೋಲ ಗುರುಚೆನ್ನವೀರ ೭

## ೨೬ ಪಾಹಿ ಮಾಂ ಪಾಹಿ

ರಾಗ : ಮಧುಮಾಧವಿ

ಪಾಹಿ ಮಾಂ ಪಾಹಿ
ಪಾಹಿ ಮಾಂ ಶಿವಶರಣರ ಮೋಹಿ ॥ ಪಲ್ಲವಿ ॥

ನಡೆಯಾಚಾರಂಗ । ನುಡಿಗುರುಲಿಂಗ
ಮೃಡಶಿವಸಂಗ ಎ । ನ್ನೊಡಲಿಷ್ಟಲಿಂಗ ೧

ಗುರುಚರತ್ಯಾಗಿ । ಚರಶೇಷಭೋಗಿ
ಪರಮಹಾಯೋಗಿ ಎ । ನ್ನುರೆ ಪ್ರಾಣವಾಗಿ ೨

ತನುಕ್ರಿಯಾಧೀರಾ । ಮನಜ್ಞಾನಸಾರಾ
ಧನತೃಪ್ತಿಹಾರಾ ಚಿದ್ । ಘನ ಚೆನ್ನವೀರಾ ೩

## ೨೭ ಬಾರೋ ಗುರುಲಿಂಗ ದೇವನೆ ತ್ರೈಕರ

ರಾಗ : ಮೋಹನ ಕಲ್ಯಾಣಿ

ಬಾರೋ ಗುರುಲಿಂಗ ದೇವನೆ ತ್ರೈಕರ
ಸಾರಸ ಪೀಠಕೆ ಕರುಣದೊಳೆದ್ದು ॥ ಪಲ್ಲವಿ ॥

ಆಚಾರಾಂಗದ ಹಸ್ತಪೀಠಕೆ ಪಂ-
ಚಾಚಾರೈಕ ನಿಜೇಷ್ಟ ಲಿಂಗಯ್ಯನೆದ್ದು ೧

ಜ್ಞಾನಾಂಗದ ಕರಪೀಠಕೆ ಮಂತ್ರ
ಧ್ಯಾನ-ಸ್ತೋತ್ರ-ಜಪ ಪ್ರಾಣಲಿಂಗಯ್ಯನೆದ್ದು ೨

ಯೋಗಾಂಗದ ಕರಕಮಲಕೆ ನಡೆನುಡಿ
ಯೋಗ ಸಮಂಚಿತ ಚೆನ್ನವೀರನೆ ಎದ್ದು ೩

## ೨೮ ಬಾರೈ ಲಿಂಗವೆ ಶ್ರೀ ವೀರ ಕರಾಬ್ಜಕೆ

ಬಾರೈ ಲಿಂಗವೆ ಶ್ರೀ ವೀರ ಕರಾಬ್ಜಕೆ
ಬಾರೈಯ್ಯ ಲಿಂಗವೇ ॥
ಬಾರೋ ಭಾವಮನ ಮೀರಿ ಕಣ್ಣ ನಿಜ-
ದೋರಿ ಎನ್ನ ಕರವಾರಿಜಕೊಲಿದು ॥ ಪಲ್ಲವಿ

ಸಪ್ತದ ಜಡಭೂತ ಅಷ್ಟಾಂಗದ ಶಿಪಿ-
ವಿಷ್ಟನ ಫಲಪದಭೀಷ್ಟೆಯ ತೊಲಗಿಸಿ
ಶ್ರೇಷ್ಠ ಷಡಾಕ್ಷರ ಗೋಷ್ಠಿಯೊಳನುಪಮ
ದೃಷ್ಟಿಗೆ ಶ್ರೀಕರದಿಷ್ಟಲಿಂಗವೆ ಬಾ ೧

ಧರಣಿಗುನ್ನತ ಶಿವಶರಣ ಸನ್ಮತದಾ-
ಚರಣೆ ಸಂಬಂಧದ ಸರಣದೋರಿಸುವಷ್ಟಾ-
ವರಣವಂಗದ ಗುರುಕರುಣ ಷಣ್ಮಂತ್ರದ
ಸ್ಮರಣ ರೂಪಕವೆನ್ನ ಹರಣಲಿಂಗವೆ ಬಾ ೨

ಶೃಂಗಾರದೆಳಬೆಳುದಿಂಗಳ ಧರಿಸಿದ-
ಮಂಗಳೆಯುರಸನ ಹಂಗನಳಿದು ಗುರು-
ಸಂಗನ ಶರಣರ ಕಂಗಳ ಕೊನೆಯೊಳು
ಅಂಗವಿಸಿದ ನಿಜಲಿಂಗರಮಣ ಬಾ ೩

ಸ್ವರ್ಗವ ಬಯಸುವವರ್ಗಳ ಮಾಯಾ
ದುರ್ಗತಿಗೊಳಿಸುವ ಭರ್ಗನ ಶರಣಗೆ
ನಿರ್ಗಮನದ ಶರಣರ್ಗಳ ಸದ್ಗುರು
ಮಾರ್ಗದಿ ನಡೆಸುವನರ್ಘ ಲಿಂಗವೆ ಬಾ ೪

ಆರುಸ್ಥಲದ ಸುವಿಚಾರ ಸದಾಮೃತ
ಸಾರವನುಣಿಸುವಪಾರದಯಾಪರ
ಕಾರುಣ ನಿಜಸುಖವಾರಿಧಿ ಚಿದ್ಘನ
ವೀರಶೈವ ಚೆನ್ನವೀರಮಹೇಶ್ವರ ಬಾ ೫

## ೨೯ ಪಾದವೆ ಗತಿ ಎನಗೆ ಜಂಗಮ ಶ್ರೀ

ರಾಗ : ಭೈರವಿ

ಪಾದವೆ ಗತಿ ಎನಗೆ । ಜಂಗಮ ಶ್ರೀ । ಪಾದವೆ ಗತಿ ಎನಗೆ
ಆದಿ ಚೈತನ್ಯರೂಪ ನಾದಿಜಂಗಮ ಶ್ರೀ । ಪಾದವೆ ಗತಿ ಎನಗೆ ॥ ಪಲ್ಲವಿ ॥

ಶೈವ ಮೊದಲಾದನ್ಯ ದೈವಪೂಜೆಯೆನನು
ಶೈವನಲ್ಲ ವೀರಶೈವ ಜಂಗಮು ಶ್ರೀ ೧

ಆಶೆ ರೋಷ ಹಮ್ಮು ವಾಸಿ ಪಂಥಗಳಿಂದ
ಗಾಸಿಯಾಗದ ಸುಪ್ರ । ಕಾಶ ಜಂಗಮದ ಶ್ರೀ ೨

ತಮೆಭ್ರಮೆಗಳ ನೀಗಿ ಶಮದಮೆಯುಗಿ ಸತ್-
ಕ್ರಮಸುಮನದೊಳಿಹ । ವಿಮಲ ಜಂಗಮದ ಶ್ರೀ ೩

ನಾನು ನೀನೆಂಬ ಭೇದವನು ತೋರದ ನಿತ್ಯ
ತಾನು ತಾನಾದ ಮಹಾ । ಜ್ಞಾನ ಜಂಗಮು ಶ್ರೀ ೪

ಶಕ್ತಿರಹಿತ ಸದ್ವ್ಯೋನ್ ಮುಕ್ತ ಸ್ವರೂಪ ವಿ-
ರಕ್ತರೊಳ್ ನಿರುಪಾದಿ । ಭಕ್ತಜಂಗಮದ ಶ್ರೀ ೫

ಈಷಣತ್ರಯದಭಿಲಾಷೆದೋರದ ಮಾಯಾ-
ಪಾಶವಿನಾಶ ಮ । ಹೇಶ ಜಂಗಮದ ಶ್ರೀ ೬

ಭೇದದೋರದ ನಿರುಪಾಧಿ ಭಕ್ತಿಯು ಸುಪ್ರ-
ಸಾದತೃಪ್ತಿಯೊಳಿರ್ಪ । ನಾದಿ ಜಂಗಮದ ಶ್ರೀ ೭

ಅಂಗದ ಕರದಿಷ್ಟಲಿಂಗದ ತನ್ನನುಬಿಷ
ಕಂಗಳೊಳಿಹ ಪ್ರಾಣ । ಲಿಂಗ ಜಂಗಮದ ಶ್ರೀ ೮

ಹರಣದ್ವೆಂದ್ರಿಯ ಕರಣವನೆಲ್ಲ ಲಿಂಗ-
ಕಿರಣವೆಂದಿನಿಸಿದ । ಶರಣ ಜಂಗಮದ ಶ್ರೀ ೯

ಮುಖ್ಯವಾಗಿಹ ಪರಸೌಖ್ಯದೋರದ ಚಿತ್‌ಸಾ-
ದಾಖ್ಯ ಷಡ್ವಿಧ ಲಿಂಗಾಂ । ಗೈಕ್ಯ ಜಂಗಮದ ಶ್ರೀ ೧೦

ಬೀರುವಾರಂಗಸ್ಥಲದ ಚಾರು ಲಿಂಗಾನುಭವದ
ಸಾರ ಸದ್‌ಗುರು ಚೆನ್ನ । ವೀರ ಮತ್‌ಪ್ರಭುವಿನ ೧೧

## ೩೦ ಪಾಲಿಸು ಪರಮ ಸುಜ್ಞಾನ ಕಾರಣಮುಕ್ತಿ

ರಾಗ : ದ್ವಿಜಾವಂತಿ

ಪಾಲಿಸು ಪರಮ ಸುಜ್ಞಾನ ಕಾರಣ ಮುಕ್ತಿ-
ಮೂಲ ಷಡಕ್ಷರ ಲಿಂಗವೆ
ಸಾಲೋಕ್ಯ ಮೊದಲಾದ ಪದವನುಳಿವಸು ಸ-
ಶೀಲವನೆನಗೆ ಬೋಧಿಸಿದ ಜಂಗಮದೇವ ॥ ಪಲ್ಲವಿ ॥

ಗುದದೊಳೊಪ್ಪುವಾಧಾರ ಚಕ್ರ । ಚೌದಳದ
ಮಧ್ಯದೊಳು ಶೋಭಿಸುವ ನಕಾರಮಂತ್ರ-
ವದಕೆ ಸದ್‌ಭಕ್ತನಂಗವಾಚಾರಲಿಂಗ । ಘ್ರಾಣ-
ವದನ ಸತ್‌ಕ್ರಿಯಾ ಶಕ್ತಿ ಶ್ರದ್ಧಾ ಭಕ್ತಿ
ವಿದಿತ ಸುಚಿತ್ತ ಹಸ್ತ ಗಂಧ ಪದಾರ್ಥ । ಸೂಸದು
ಗಂಧ ಶೇಷವೆಂದೊರೆದ ಜಂಗಮದೇವ ೧

ಲಿಂಗಸ್ಥಾನದ ಸ್ವಾಧಿಷ್ಠಾನ ಚಕ್ರದ । ಷಡ್ ದ-
ಳಂಗಳ್ ಮಧ್ಯ ಮಕಾರ ಮಂತ್ರ-
ದಂಗಮಹೇಶ ಗುರುಲಿಂಗ ರಸನೆ । ಮುಖ
ಮಾಂಗಲ್ಯ ಜ್ಞಾನಶಕ್ತಿ ನಿಷ್ಠಾ ಭಕ್ತಿ
ಥಾಂಗೆ ಸುಬುದ್ಧಿ ಹಸ್ತರಸವೆ ಪದಾರ್ಥ । ಸ್ವಾ-
ದಂಗಳೆ ಶೇಷವೆಂದೊರೆದ ಜಂಗಮದೇವ ೨

ನಡುನಾಭಿ ಮಣಿಪೂರಕ । ದಶದಳ-
ದೆಡೆಯೊಳೊಪ್ಪುವ ಶಿಕಾರ ಪ್ರಣವ-
ಮೊಡಲು ಪ್ರಸಾದಿ ಶಿವಲಿಂಗನಯನ । ಮುಖ
ವಿಡಿದಿಚ್ಛಾಶಕ್ತಿ ಸಾವಧಾನ ಭಕ್ತಿ
ಕಡುನಿಗರ್ವವೆ ಹಸ್ತರೂಪು ಪದಾರ್ಥ । ನಿರ್-
ಜಡ ರೂಪು ಶೇಷವೆಂದೊರೆದ ಜಂಗಮದೇವ ೩

ರಸಿಕ ಹೃದಯದನಾಹತ ಚಕ್ರ । ದ್ವಾದಶ
ಎನಳಮಧ್ಯದಿ ವಕಾರ ಪ್ರಣವ-
ಕಸುಲಿಂಗಿಯಂಗ ಜಂಗಮಲಿಂಗ ತ್ವಜ್ । ಮುಖ
ಎಸೆವಾದಿ ಶಕ್ತಿಯನುಭಾವಭಕ್ತಿ
ಅಸಮ ಸುಮನ ಹಸ್ತ ಸ್ಪರ್ಶನ ಪದಾರ್ಥ । ಸಂತ-
ತ ನೊಂಕು ಶೇಷವೆಂದೊರೆದ ಜಂಗಮದೇವ ೪

ಗಳದೊಳೊಪ್ಪುವ ವಿಶುದ್ಧಿಯ ಚಕ್ರ । ಷೋಡಶ-
ದಳದ ಮಧ್ಯದ ಯಕಾರ ಪ್ರಣವ
ವೊಳೆವಂಗ ಶರಣ ಪ್ರಸಾದಲಿಂ । ಗಾನನ
ತಿಳಿ ಶ್ರೋತ್ರಾನಂದಭಕ್ತಿ ಪರಶಕ್ತಿ
ಮಿಳಿತ ಸುಜ್ಞಾನ ಹಸ್ತ ಶಬ್ದ ಪದಾರ್ಥ । ನಿಷ್
ಕಳಶಬ್ದ ಶೇಷವೆಂದೊರೆದ ಜಂಗಮದೇವ ೫

ಭ್ರೂಮಧ್ಯದಾಜ್ಞೇಯ ಚಕ್ರದುಭಯ । ದಳ-
ದಾ ಮಧ್ಯದೊಳಗಿಹ ಮೂಲಮಂತ್ರ-
ಕಾ ಮಹಲಿಂಗೈಕ್ಯ ಹೃದಯ । ಮುಖ
ನಾಮರಸವೆ ಭಕ್ತಿ ಚಿತ್‌ಶಕ್ತಿ
ರಾಮಸದ್‌ಭಾವ ಹಸ್ತ ತೃಪ್ತಿ ಪದಾರ್ಥ । ಸು-
ಪ್ರೇಮವೆ ಶೇಷವೆಂದೊರೆದ ಜಂಗಮದೇವ ೬

ಆರುಸ್ಥಾನದೊಳೊಪ್ಪುವಾರುಚಕ್ರದ । ಮಧ್ಯ-
ದಾರು ಸತ್‌ಪ್ರಣವಾದಿ ಶೋಭಿಸುವ
ಆರುಲಿಂಗ ಷಣ್‌ಮುಖ ಹಸ್ತ । ಶಕ್ತಿ ಭಕ್ತಿ
ಆರು ಪದಾರ್ಥ ಪ್ರಸಾದಂಗಳನು
ತೋರಿ ಎನ್ನನು ನಿನ್ನ ಸ್ಮರಣೆಯೊ । ಳಿರಿಸಿದ
ವೀರ ಮಹೇಶ ಚೆನ್ನವೀರ ಜಂಗಮದೇವ ೭

## ೩೧ ಶೈವನಲ್ಲದ ವೀರಶೈವ ಷಟುಸ್ಥಳ ಬ್ರಹ್ಮಿ

ರಾಗ : ಕುಸುಮ ಷಟ್ಪದಿ

ಶೈವನಲ್ಲದ ವೀರಶೈವ ಷಟುಸ್ಥಳ ಬ್ರಹ್ಮಿ
ಐವರಧಿದೈವ ಜಂಗಮದೇವನು ॥ ಪಲ್ಲವಿ ॥

ನಾಮರೂಪಿಗನಲ್ಲ । ಸೀಮೆ ಹಂಗಿಗನಲ್ಲ ।
ಹೇಮದಾಸಿಗನಲ್ಲ ಕಾಮಿನಿಯರ ॥
ಕಾಮದವನಲ್ಲ ಜಡ । ನೇಮಬಿಡಿದವನಲ್ಲ
ಸ್ವಾಮಿ ಚರಮೂರ್ತಿ ಜಂಗಮದೇವನು ೧

ಓತು ಷಣ್ಮತನಲ್ಲ । ಭೂತಭವಿಷ್ಯನಲ್ಲ ।
ಜಾತಿಸ್ಮರ ತಾನಲ್ಲ ಭೂತಳದೊಳು ॥
ಖ್ಯಾತಿಯುತನಲ್ಲವವ । ಧೂತಮಾರ್ಗಿಗನಲ್ಲ
ಈತನೆ ಸಹಜ ಜಂಗಮದೇವನು ೨

ಮದುವೆಯಾದವನಲ್ಲ । ವಧುವನಾಳ್ದವನಲ್ಲ ।
ಮದವನೀಳ್ದವನಲ್ಲ ಮಚ್ಚರಿಸುತ ॥
ಕದನಕರ್ಕಶನಲ್ಲ । ಮದಡಜನ ವಶನಲ್ಲ ।
ಸದಮಲಾನಂದ ಜಂಗಮದೇವನು ೩

ಖಂಡಿತ್ರೆಮೊಗನಲ್ಲ । ಕೆಂಡಗಣ್ಣಿಗನಲ್ಲ ।
ಕಂಡ ನಿಂದವರೊಡನೆ ಕಲಹವಿಲ್ಲ ॥
ರುಂಡಮಾಲಿಗನಲ್ಲ । ಗಂಡುಗಾಸಿಗನಲ್ಲ ।
ಗಂಡರಿಗೆ ಗಂಡ ಜಂಗಮದೇವನು ೪

ಪಡಿಯ ಚಾಟಕನಲ್ಲ । ಒಡನೆ ಬೂಟಕನಲ್ಲ ।
ನಡುವೆ ಚಾಟಕನಲ್ಲ ಶೈವನಂತೆ ॥
ಕಡಿವ ಕಾಟಕನಲ್ಲ । ಬಡಿವ ಕೀಟಕನಲ್ಲ ।
ಒಡೆಯರಿಗೆ ಒಡೆಯ ಜಂಗಮದೇವನು ೫

ಮುಗಿಲೊಳಿದ್ದವನಲ್ಲ । ತೊಗಲ ಪೊದ್ದವನಲ್ಲ ।
ಬಗೆಬಗೆಯ ಗಾರುಡದ ಸಿದ್ಧನಲ್ಲ ॥
ಹಗಲ ಗೆದ್ದವನಲ್ಲ । ಮಗನ ಮೆದ್ದವನಲ್ಲ ।
ಹಗರಣಿಗನಲ್ಲ ಜಂಗಮದೇವನು ೬

ಎಲುವಮಾಲೆ ಧರನಲ್ಲ । ತಲೆಯೋಡಕರನಲ್ಲ ।
ಜಲಜಡನೆವೆಣ್‌ಪೊತ್ತು ಮೆರೆವನಲ್ಲ ॥
ಒಲುವಾ ಹಿಮೆ ಪರನಲ್ಲ । ಕಲಹಧಾರಕನಲ್ಲ ।
ಸುಲಭ ಚರಮೂರ್ತಿ ಜಂಗಮದೇವನು ೭

ಕಣಿಯುನುಸುರುವನಲ್ಲ । ಮಣಿಯ ಧರಿಸುವನಲ್ಲ ।
ಕ್ಷಣಕೊಂದರೂಪ ಬೋಧಿಸುವನಲ್ಲ ॥
ಪೆಣನ ಮೆರೆಸುವನಲ್ಲ । ಪಣವ ಸುರಿಸುವನಲ್ಲ ।
ತ್ರಿಣಯನಧಿದೈವ ಜಂಗಮದೇವನು ೮

ಈ ರೀತಿಯೊಳು ಶೂನ್ಯಾ । ಕಾರ ಮೂರ್ತಿಯು ತನ್ನ ।
ವೀರಶೈವಾಚಾರ ಸುಪ್ರಸನ್ನ ॥
ದೋರಿ ಸಲಹಿದನೆನ್ನ । ಚಾರುನಡೆನುಡಿ ಚೆನ್ನ- ।
ವೀರ ಮಹೇಶ ಜಂಗಮದೇವನು ೯

## ೩೨ ಜಯದೇವ ಜಯದೇವ ಜಯ ಜಂಗಮಲಿಂಗ

ರಾಗ : ಶಂಕರಾಭರಣ

ಜಯದೇವ ಜಯದೇವ ಜಯ ಜಂಗಮಲಿಂಗ । ಶುಭಗೌರವಲಿಂಗ
ಜಯವಾಚಾರ ಗುರುಶಿವಚರಶೇಷ ಮಹಲಿಂಗ ॥ ಪಲ್ಲವಿ ॥

ಗುರುಕರದೀಕ್ಷಿತನಾಗಿ । ಗುರುಸೇವೆಯ ಮಾಡಿ
ಹರಪೂಜೆಯ ಮಾಡಿ । ಚರಲಿಂಗವೆಂದೆಂಬ
ನಿರುವಂಚನೆಯರಿದು । ವಂಚನೆಯ ಮರೆದು
ಗುರುಲಿಂಗಜಂಗಮದಾಸೋಹ ಎನಿಸಿರುವ । ಸನ್ಮೋಹಿ ಎನಿಸಿರುವ
ಸ್ಥಿರಭಕ್ತರಿಗೊಲಿದಿಹ ಪರಮಚರಲಿಂಗ । ಶುಭ ೧

ಪರದೈವ ಪರಧನ ಪರಸತಿಯು ಸುಸಾಂಕ್ಷೆಯುನು ।
ಪರಜೀವರ ಹಿಂಸೆಯುನು
ಪರನಿಂದೆಯುವೈದು ಪಾತಕವ ಪರಿಹರಿಸಿ । ಸೂತಕವ ಪರಿಹರಿಸಿ
ಗುರುಕೊಟ್ಟ ಲಿಂಗದಿ ಬಹುನಿಷ್ಠಾ ಪರನಾದ । ನಿಜಶಿಷ್ಯಕರನಾದ
ಚರಮಹೇಶಂಗೊಲಿದಿಹ ಪರಮ ಗುರುಲಿಂಗ । ಶುಭ ೨

ಗುರುವಿಂಗೆ ತನುಗೊಡೆ ತನುರೂಪೆಲ್ಲ ಶುದ್ಧ । ಘನರೂಪೆಲ್ಲ ಶುದ್ಧ
ಚರಲಿಂಗದಿ ಮನಪಿಡೆ ಮನರುಚಿಯೆ ತಾ ಸಿದ್ಧ । ಘನರುಚಿಯೆ ತಾ ಸಿದ್ಧ
ಚರಕೆ ಧನಗೊಡಲು ಧನತೃಪ್ತಿ ಪ್ರಸಿದ್ಧ । ಘನತೃಪ್ತಿ ಪ್ರಸಿದ್ಧ
ಪರತರ ಶೇಷಂಗೊಲಿದಿಹ ನಿರುಪಮ ಶಿವಲಿಂಗ । ಶುಭ ೩

ಪ್ರಾಣಾದಿ ದಶವಿಧ ವಾಯುಗಳ ಪರಿಹರಿಸಿ । ಜೀವಗಳ ಪರಿಹರಿಸಿ
ಪ್ರಾಣಸ್ಥಾನದೊಳಿಷ್ಟಲಿಂಗವೆಂದರಿದು । ಮಹಲಿಂಗವೆಂದರಿದು
ರೇಣುಮಹಸುಖದುಃಖ ಸ್ತುತಿನಿಂದಾಪರವ । ಸಮಗಂಡಿರುತಿರುವ
ಪ್ರಾಣಲಿಂಗಿಗೆ ಒಲಿದಿಹ ತ್ರಾಣಶಿವಲಿಂಗ । ಶುಭ ೪

ಪಂಚೇಂದ್ರಿಯಂಗಳ ಪ್ರಪಂಚವ ಮರೆದು । ವಂಚನೆಯ ಕಳೆದು
ಪಂಚೇಂದ್ರಿಯಂಗಳೆ ಪಂಚಲಿಂಗವೆಂದರಿದು । ಮಹಲಿಂಗವೆಂದರಿದು
ಪಂಚಮಹಲಿಂಗವೆ ಪತಿಯೆಂದು ತಿಳಿದು । ತಾ ಸತಿಯೆಂದು ತಿಳಿದು
ಪಂಚಮುಖ ಶರಣಂಗೊಲಿದಿಹ ಶೇಷಲಿಂಗ । ಶುಭ ೫

ಅರಿಷಡುವರ್ಗವನಳಿದು ಆರೂರ್ಮೆಯು ಗೆಲಿದು ।
ನಿಜಮರ್ಮವನೆ ತಿಳಿಮು
ನಿರುತಾಷ್ಟವಿಧಾರ್ಚನೆಯು ಪಲುಬಗೆಯಲಿ ಮಾಡ ।
ಫಲಪದವಿಯು ಬೇಡ
ಉರಿಕರ್ಪುರ ಯೋಗದಂತಿಹ ಲಿಂಗಾಂಗ । ಯೋಗದ ನಿಜಸಂಗ
ಪರತತ್ತ್ವ ನಿಜೈಕ್ಯಂಗೊಲಿದಿರುತಿಹ ಮಹಲಿಂಗ । ಶುಭ ೬

ಶಿವಭಕ್ತ ವೀರಮಹೇಶ ಪ್ರಸಾದಿ । ಮಹಶೇಷ ಪ್ರಸಾದಿ
ತವೆ ಪ್ರಾಣಲಿಂಗಿ ಶರಣೈಕ್ಯ ಸ್ಥಲವಾರು । ಗುರುಚರಪರ ಮೂರು
ನವಸ್ಥಲದೊಳಿರುತಿಹ ನವಲಿಂಗವೆ ತಾನಾಗಿ । ಶಿವಲಿಂಗವೆಂದಾಗಿ
ತವೆ ರಾಜಿಪ ಗುರು ಚೆನ್ನವೀರ ಮಹಾಯೋಗಿ ೭

## ೩೩ ಜಯಮಂಗಳಂ ಸದಾ ಶುಭಮಂಗಳಂ

### ಮಂಗಳಾರತಿ ಪದ

ಜಯಮಂಗಳಂ ಸದಾ ಶುಭಮಂಗಳಂ
ಜಯಜಯತು ಜಯತು ಜಂಗಮದಂಘ್ರಿಗೆ ॥ ಪಲ್ಲವಿ

ನಿರುಪಮ ನಿರಾಲಂಬ ನಿರ್ಗುಣ ನಿಜಾನಂದ
ನಿರಘ ನಿರುಪಾಧಿಕನು ನಿತ್ಯತೃಪ್ತ
ನಿರವಯ ನಿರಾವರಣ ಪರತರ ಪರಬ್ರಹ್ಮ-
ದಿರವೆ ನಿಜವೆನಿಪ ಜಂಗಮದಂಘ್ರಿಗೆ ೧

ಚಿರನಿರಂಜನ ಶೂನ್ಯವರನಿಷ್ಕಳಂಕ ಮಹ
ಪರಮಪ್ರಸಾದ ಚರಶಿವಗುರು ಕ್ರಿಯ-
ನಿರುತ ಸದ್ಭಾವ ಪ್ರಾಣೇಷ್ಟಲಿಂಗಂಗಳಂ-
ತರ ಸುಚೈತನ್ಯ ಜಂಗಮದಂಘ್ರಿಗೆ ೨

ಅಂಗಲಿಂಗಾನನವು ಹಾಂಗೆ ಹಸ್ತವು ಶಕ್ತಿ
ಮಾಂಗಲ್ಯ ಭಕ್ತಿಯು ಪದಾರ್ಥ ಶೇಷ
ಸಾಂಗಮಾಗಿಯೆ ಸಕೀಲಗಳಂ ತಿಳಿದ ಮಹ-
ಲಿಂಗಾಂಗದೈಕ್ಯ ಜಂಗಮದಂಘ್ರಿಗೆ ೩

ಪರಮಪಾವನ ಚರಿತ ಪರಿಪೂರ್ಣ ಕಳಾಭರಿತ
ಗುರುಲಿಂಗವೆರಡಕ್ಕೆ ಹರಣ ನಿರುತ
ಪರತತ್ತ್ವವನೆ ಅರಿತ ಚರರೂಪಿನಿಂ ಬರುತ
ಪರಿಮಳಿಸುತಿರ್ಪ ಜಂಗಮದಂಘ್ರಿಗೆ ೪

ಮುನ್ನನಾದಿಯು ಶರಣ ತನ್ನಯ ಸ್ವರೂಪವನು
ಭಿನ್ನವಿಲ್ಲದೆ ವಾಮಕರದಿ ಪಿಡಿದು
ಇನ್ನೊಂದು ಕಾಮಿಸದೆ ನನ್ನಿಯಿಂ ಪೂಜಿಸುವ
ಚೆನ್ನ ಸತ್ಕ್ರಿಯ ಜಂಗಮದಂಘ್ರಿಗೆ ೫

ಬೋಳುದಲೆ ತಿಳಿಗಾವಿ ತೋಳಿಗಾಧಾರ ಜಪ-
ಮಾಲೆವಿಡಿದಡಿಗೆ ಪಾವುಗೆಯು ಧರಿಸಿ
ಕಾಳು ಮಾಯಾಕೋಳಾಹಲನಲ್ಲಮನಿರವ
ತಾಳಿ ಚರಿಸುವ ಜಂಗಮದಂಘ್ರಿಗೆ ೬

ಕರಪೀಠದೊಳು ಲಿಂಗ ವರಲಲಾಟದಿ ಭಸಿತ
ಕೊರಳಲ್ಲಿ ರುದ್ರಾಕ್ಷಿ ಮಾಲೆಗಳ ಧರಿಸಿ
ಪರಮ ಪಂಚಾಕ್ಷರಿಯನವರತ ಜಪಿಸುತಿಹ
ಗುರು ಚೆನ್ನವೀರ ಜಂಗಮದಂಘ್ರಿಗೆ ೭

## ೩೪ ಪಾದೋದಕವೆ ದೇವ ಭಕ್ತರ್ಗೆ

ರಾಗ : ಕಾಪಿ

ಪಾದೋದಕವೆ ದೇವಭಕ್ತರ್ಗೆ ಸಂಜೀವ-
ವಾದುದೆಂಬುದನ್ವೆದೆ ತಿಳಿಯಲನುಭಾವದೊಳು
ವೇದಾಂತ ಸಿದ್ಧಾಂತ ಕ್ರಿಯಾ ಜ್ಞಾನ ಬಾಹ್ಯ ದುರ್-
ಬೋಧಕರಿಗೆ ನೆಲೆಗಾಣದೊಪ್ಪ ಗುರು ॥ ಪಲ್ಲವಿ ॥

ಗುರುಲಿಂಗದಂಘ್ರಿಯುಗಳ ಮೂಲದೆಡೆಯೊಳು
ಪರಿವಿಡಿದು ಮೂರು ಮೂರು ವೇಳೆ
ಕರಸ್ಪರ್ಶವನು ಗೈಯ್ಯಲದೆಯಭಿಷೇಕದಾ-
ಚರಣೆಗೆ ಮುಖ್ಯ ಸದ್ಗುರು ಧೂಳ ದೀಕ್ಷಾ ೧

ಕೆರೆ ಬಾವಿ ಹೊಳೆ ಹಳ್ಳ ಮಡು ಹೊಂಡ ಕಾಲುವೆ
ಒರತೆ ಹೊಕ್ಕರಣೆ ಕಲ್ದೋಣಿ ಜಡಜಲವ-
ನುರುತದಿಂದೊಮ್ಮೆ ಮುಟ್ಟಿದ ಷಡ್ವಕ್ತ್ರ
ನಿರುಪಮ ಶೀಲ ಷಟ್‌ಸ್ಥಲ ಬ್ರಹ್ಮಿಯು ೨

ಶಿವಲಿಂಗಮೂರ್ತಿಯ ಪಾವನವುಂಗುಷ್ಠಯು-
ಗ್ಮವನು ತ್ರೈ ತ್ರೈ ವೇಳೆಯೊಳಂಗುಲ್ಯಾಷ್ಟಕ-
ವೊರ್ಮೆ ತರ್ಜನಿ ಬೆರಳಿಂ ಸ್ಪರ್ಶಿಸಲದೆ
ತವೆ ಭಸ್ಮಶುದ್ಧ ಕಾರಣ ಲಿಂಗಕ್ರಿಯ ಶಿಕ್ಷೆ ೩

ಪರಬ್ರಹ್ಮ ನಿರ್ಮಲಂ ಘನಶ್ಯಾಮ ಜಡ ಶ್ರೀ-
ಕರತ್ರಿಪಾದೋದಕ ನಿಜರೂಪಭೂತಿ
ಶರಣನಂಗವನೆ ಸ್ನಾನೋದ್ಧೂಳನ ಧಾರಣ
ಕರದಿಂದ ಹರಮಂತ್ರ ಸ್ಮರಣೆಯಿಂ ಬೆಳಗುವ ೪

ಪರಮಚೈತನ್ಯ ಜಂಗಮಲಿಂಗದಮಳ ಶ್ರೀ
ಚರಣವನರ್ಚಿಸಿ ನಮಿಸಿ ಬಳಿಕಾಗ-
ಲೆರಡಂಗುಷ್ಠಾಗ್ರದೊಳ್ ಮಂತ್ರದಿಂ ಪಾದಾಂಬು-
ವೆರೆಯಲಂತದೆ ಮಹತ್ತ್ವದ ಚರಸುಜ್ಞಾನ ೫

ಸ್ಪರುಶನವಾಧಾರವಾಪ್ಯಾಯನ ಹಸ್ತ ತತ್-
ಪರಿಣಾಮ ನಿರ್ನಾಮ ಗುರುಲಿಂಗಚರದ
ವರಸತ್ಯ ದಶವಿಧೋದಕ ಮುಖ್ಯವಾಗಳಾ-
ಚರಣೆಗೆ ಕಾರಣವಾಗಿ ರಾಜಿಪ ಪ್ರಭು ೬

ಪರಧೇಕದಶ ಸುಪ್ರಸಾದರಸವೊಲ್ದವ-
ಧರಿಸಿ ಷಟ್‌ಕೃತಿಯಾಂತು ಕರಣಹಸಿಗೇಕೋ-
ತ್ತರ ಷಟ್ಸ್ಥಲ ಮಂತ್ರಗೋಪ್ಯಕೆ ಟಿಪ್ಪಣಿಯ
ವಿರಚಿಸಿದ ಪ್ರಸಾದ ಸ್ವಾಮಿ ಚೆನ್ನವೀರನ ೭

## ೩೫ ಪಾದೋದಕದೊಳಂಗ ಲಿಂಗ

ರಾಗ : ದ್ವಿಜಾವಂತಿ

ಪಾದೋದಕದೊಳಂಗ ಲಿಂಗ ಮಜ್ಜನಗೈವ-
ನಾದಿ ಶ್ರೀ ವೀರಶೈವಾಚಾರ ಭಕ್ತ
ಭೇದರಹಿತ ಶುದ್ಧ ಸಿದ್ಧ ಪ್ರಸಿದ್ಧ ಪ್ರ-
ಸಾದ ಚಿತ್‌ಕಾಯ ಸದ್ಗುರು ಲಿಂಗ ಜಂಗಮ ॥ ಪಲ್ಲವಿ

ತಾನಾಗಿ ಬಂದಡಿಗೆರಗಿದ ಶಿಷ್ಯ ಸು-
ಜ್ಞಾನಿಯೆಂದವಗಿಷ್ಟ ಲಿಂಗವಿತ್ತು
ಧ್ಯಾನ ಮೌನವು ನೇಮ ನಿತ್ಯ ಚತುರ್‌ವಿಧ
ಸ್ವಾನುಭಾವದ ಸುಸದ್‌ಬೋಧೆಯನು
ತಾನೆ ಬೋಧಿಸಿಯಂಗಲಿಂಗ ಸಂಯೋಗ ಸಂ-
ಧಾನವ ತೋರಿ ತನ್ನಂತೆ ಮಾಡಿದ ಗುರು ೧

ಭಕ್ತನ ಚಿತ್‌ಕಳೆಯು ಕಂಗಳ ಮುಖ-
ದಿತ್ತಲೈತಂದು ಕರಕಂಜದೊಳು
ವೃತ್ತ ವರ್ತುಳ ಮಧ್ಯ ಗೋಮುಖ ನಾಳ ಪೀಠ
ಸತ್ಯ ಸದ್‌ರೂಪ ತಾಳಿ ಪೂಜೆಗೊಂಬ
ಅತ್ಯತಿಷ್ಠದ್ದಶಾಂಗುಲ ಮಧ್ಯವೆಂಬ ವೇದ
ಸ್ತೋತ್ರಕೆ ಪಾತ್ರಪಾವನ ಘನದಿಷ್ಟಲಿಂಗ ೨

ಆರಂಗ ಲಿಂಗ ಷಣ್ಮುಖ ಹಸ್ತ ಶಕ್ತಿ ಭಕ್ತಿ
ಆರು ಪದಾರ್ಥ ಪ್ರಸಾದಂಗಳೆಂಬ
ಆರೆಂಟು ತೆರದ ಸಕೀಲ ಮರ್ಮವ ತಿಳಿ-
ದಾರುಸ್ಥಲವೆಚುಂಗದಾಚರಣೆ
ನೂರೊಂದು ಸ್ಥಲವು ಸಂಬಂಧವಾಗಿರುತಿಹ
ವೀರಮಹೇಶ ಚೆನ್ನವೀರ ಸುಜಂಗಮ ೩

## ೩೬ ಪಡೆದನುಭಾವಿಸು ಪ್ರಸಾದವನು

ರಾಗ : ಶುದ್ಧ ಕಾಂಬೋದಿ

ಪಡೆದನುಭಾವಿಸು ಪ್ರಸಾದವನು
ಎಡೆವಿಡದಿಹ ಸುಖವೋದವನು ॥ ಪಲ್ಲವಿ ॥

ತನುವನು ಗುರುವಿಗೆ ನೆರೆ ಕೊಟ್ಟು
ಮನವನು ಲಿಂಗದೊಳಿಂಬಿಟ್ಟು
ಧನವನು ಚರಕೆ ಹರಿಗೊಟ್ಟು
ಅನಘ ಶರಣರಿಗೆ ಪೊಡಮಟ್ಟು ೧

ಅಂಗಶುದ್ಧದ ಕ್ರಿಯಾದೀಕ್ಷೆಯನು
ಲಿಂಗಶುದ್ಧದ ಮಂತ್ರ ಶಿಕ್ಷೆಯನು
ಸಂಗಪ್ರಸಿದ್ಧ ವೇದವೋಕ್ಷವನು
ಕಂಗಳ ಕಳೆಯ ಪ್ರತ್ಯಕ್ಷವನು ೨

ಗುರುವಿನೊಳುದಿಸಿದ ಶುದ್ಧವನು
ಚರಲಿಂಗದ ನಿಜ ಸಿದ್ಧವನು
ಪರಜಂಗಮದ ಪ್ರಸಿದ್ಧವನು
ಗುರುಚರಪರದ ನೈವೇದ್ಯವನು ೩

ತ್ಯಾಗಾಂಗದ ವರ ಸದ್ಗತಿಯು
ಭೋಗಾಂಗದ ವರ ಸನುಮತಿಯು
ಯೋಗಾಂಗದ ನಿಜದುನ್ನತಿಯು
ಜೋಗೈಸುವ ಶಿವಸುಖರತಿಯು ೪

ನಡೆನುಡಿಗಳ ಚೈತನ್ಯವನು
ಬಿಡದೆ ಭೋಗಿಪರ ಸುಧನ್ಯವನು
ಷಡುರುಚಿದೋರದ ಚಿಹ್ನವನು
ಮೃಡನ ಭಕ್ತಿಯು ಸುಪ್ರಸನ್ನವನು ೫

ನರಜನ್ಮದ ಭವದೂರವನು
ಅರಿವರ್ಗದ ಸಂಹಾರವನು
ಶರಣಹರಣದುಪಕಾರವನು
ನಿರುಪಮ ನಿಜಸುಖಸಾರವನು

ಶರಣಸಂತತಿಗಳ ಹರಣವನು
ಹರಣಲಿಂಗದ ನಿಜಕಿರಣವನು
ಕಿರಣ ಜಂಗಮದಾವರಣವನು
ಗುರು ಚೆನ್ನವೀರನ ಕರುಣವನು ೭

## ३೭ ಘನ ಶಿವಭಕ್ತರು ಒಲಿದುದ್ಧರಿಸಿಹ

ರಾಗ : ಷಟ್ಪದಿ

ಘನ ಶಿವಭಕ್ತರು ಒಲಿದುದ್ಧರಿಸಿಹ
ವನಕರ ಶ್ರೀ ವಿಭೂತಿಯನು
ಚಿನುಮಯ ಮಂತ್ರ ಶರೀರಿಯ ಮಾಡುವ-
ದನುಪಮ ನಡೆನುಡಿಗಲಿಸುವುದು ॥ ಪಲ್ಲವಿ ॥

ಆದಿಪರಶಿವನಂಗಚ್ಛಾಯವ-
ನಾದಿ ಜಂಗಮದಂತ್ಯವ ಜ್ಞಾನವ
ಶೋಧಕ ಭಕ್ತನ ಸರ್ವಾಂಗದ ಮಂಗಳ ವಿಭೂಷಣವಾ
ಆದಿಗೆ ಮೂಲಾಧಾರ ಸುದೀಕ್ಷಾ-
ಬೋಧೆಗೆ ಕಾರಣ ಘನಪರಬ್ರಹ್ಮ ವಿ-
ನೋದಿಗೆ ಕಾಣುವ ಕಂಗಳ ಬೆಳಗಿನ ತೇಜದ ಪುಂಜವನು ೧

ಸಕಲಾಚಾರ ಕ್ರಿಯಂಗಳ ಕವಚವ
ಸಕಲ ಸುವಸ್ತ್ಯದ ಶುಭತಿಲಕವ
ಸಕಲೈಶ್ವರ್ಯ ಸುಸಂಪದ ಸೌಖ್ಯಾನಂದದ ತಾಣವನು
ಸಕಲಾಗಮನಿಗಮಂಗಳ ಸಾರವ
ಸಕಲ ನಿಷ್ಕಲ ಉಭಯಾಕಾರವ
ಅಖಿಲಾಂಡಗಳನೊಳಕೊಂಡೊಪ್ಪುವ ಚುಳಕ ಚಿದಾನಂದವನು ೨

ಇಂತೆಸೆವನಾದಿ ಚಿದ್‌ಭಸಿತವ ಕಾ-
ಲಾಂತಕನ್ನೆಮೊಗದಿಂ ಮಹ ಋಷಿಗಳು
ಚಿಂತಿಸಿ ಪಡೆದೈದಾಕಳ ಬಳಿಕಾ ಗೋವಿನ ಸಗಣವನು
ತಂತ್ರಾಗಮದಿಂ ದಹಿಸಿದ ಭಸಿತ
ಚಿಂತಾಕಾಯಕ ಚಿದ್‌ಘನ ಪಂಚಾಕ್ಷರಿ
ಮಂತ್ರ ನ್ಯಾಸಸ್ಥಾನದೊಳವಧರಿಸುವ ತ್ರೈಪುಂಡ್ರವನು ೩

ಜ್ಞಾನಪ್ರಕಾಶದ ತೇಜ ವಿಭೂತಿಯು
ಸ್ವಾನುಭಾವ ಸದ್‌ಗುರುವರನಂಘ್ರಿಗೆ
ಆನತನಾಗುವ ಭಯಭಕ್ತಿಯೊಳಾ ಭಸಿತವಾಂತುಕೊಂಡು
ಮಾನಸವಾಚಕ ಕಾಯಕ ತ್ರಿವಿಧದೆ
ಧ್ಯಾನಸ್ತೋತ್ರನ್ಯಾಸಂಗಳ ಮಾಡುತ
ಸ್ಥಾನ ಸ್ಥಾನಗಳಲ್ಲಿ ಸ್ನಾನ ಧೂಳನ ಧಾರಣಗೈಯುತಲಿ ೪

ಶ್ರೀಗುರುದೇವನು ತನ್ನಂಘ್ರಿಗೆ ತಲೆ-
ವಾಗಿದ ಶಿಷ್ಯೋತ್ತಮನ ಲಲಾಟದೆ
ರಾಗವಿರಾಗ ವಿದೂರ ವಿಭೂತಿಯ ಧರಿಸಿದ ಮಾತ್ರದೊಳು
ತ್ರೈಗುಣ ಕರಣೇಂದ್ರಿಯ ಜಡದೇಹವ
ನೀಗಿ ಸುಮಂತ್ರ ಶರೀರಿಯ ಮಾಡಿಹ
ಭೋಗವನುರೆ ಪರಮೋಕ್ಷವನೀವ ಸುಧರ್ಮದ ಸಾಯುವನು ೫

ಪಾಣಿಕುರಂಗಾಕಾರದಿ ಪಿಡಿಯುತೆ
ವಾಣಿ ಷಡಾಕ್ಷರ ಮಂತ್ರವ ನುಡಿಯುತೆ
ಮಾಣದೆ ಸರ್ವಾಂಗದೊಳು ವಿಭೂತಿಯನೊಲಿದು ಧರಿಸಲಾಗಿ
ಜಾಣಾ ಜಲದೊಳೆದಂತೆ ತನ್ನಯೆ
ಆಣವಮಾಯಾಕಾರ್ಮಿಕ ಮಲದತಿ
ಕ್ಷೀಣವನೆಲ್ಲವ ತೊಳೆದು ನಿರಂತರ ತಾನೆ ಬೆಳಗುತಿದೆಕೊ ೬

ಕಿಂಚಿತು ಭಸಿತವ ಭಾಳದಿ ಧರಿಸಲು
ಸಂಚಿತ ಲಿಖಿತವ ತೊಡೆದಾಕ್ಷಣ ಘನ-
ಪಂಚಪ್ರಣವವನು ಲೇಖನಗೈದ ಬಳಿಕಾನೆಂಬ

ವಂಚಕತನವಳಿದು ಎನ್ನನು ನಿರ್-
ವಂಚಕ ಲಿಂಗಾಂಗೈಕ್ಯ ಷಟ್‌ಸ್ಥಲ
ವಾಂಛಿತನೆನಿಸಗಿದ ಚೆನ್ನವೀರೇಶನಂಘ್ರಿಯ ಧೂಳಿತವ ೭

## ೩೮ ಭಸಿತವ ಧರಿಸುವಾತನೆ ಯೋಗಿ

ರಾಗ : ವಡ್ಡಿ ಧನ್ಯಾಸಿ

ಭಸಿತವ ಧರಿಸುವಾತನೆ ಯೋಗಿ ಶೋ-
ಭಿಸುವಡೆ ಮೃಡಲಿಂಗದೊಡಲಾಗಿ ॥ ಪಲ್ಲವಿ ॥

ವಾಯು ಭೂತೇಂದ್ರಿಯ ಗುಣಗಳ । ದುರ್-
ಮಾಯಾ ಮೋಹದ ಮೂಡು ಬಲೆಗಳ
ಕಾಯದ ಕರ್ಮಕೋಟಲೆಗಳ । ಸತ್-
ಕ್ರಿಯಾ ವಹ್ನಿಯೊಳ್ ಹೊಂದಿ ದಹಿಸಿದಘಹರ ೧

ಹಸಿವು ತೃಷೆಗಳೇಳು ವ್ಯಸನವ । ಪಂಚ-
ವಿಷಯಗಳರಿಷಡುವರ್ಗವ
ವಿಷಮಷ್ಟಮದ ಶೋಕಮೋಹವ । ಲಿಂಗ-
ದಸಮ ಜ್ಞಾನಾಗ್ನಿಯಿಂ ದಹಿಸಿದುಪಮಾನುಪಮ ೨

ದುರಿತಪಂಚಕದ ದುರ್ಗತಿಯನು । ದುಷ್-
ಕರಣದ ಗುಣದುಪಹತಿಯನು
ಮರಹುಗೊಂಡಿಹ ಮಂದಮತಿಯನು । ಲಿಂಗ-
ದರುಹೆಂಬ ವಹ್ನಿಯೊಳುರುಹಿದವಿರಳ ೩

ಅಂಗದ ಗುಣವನೆಲ್ಲವ ನೀಗಿ । ಸರ್-
ವಾಂಗವೆಲ್ಲವು ಲಿಂಗಮಯವಾಗಿ
ಸಂಗಸುಖದ ನಿಜ ಶಿವಯೋಗಿ । ಈತ
ಮಂಗಳಾತ್ಮಕನೆನಿಸುವನಾಗಿ

ವಂಚನೆಗಳನೆತ್ತಿ ತೂರುವ । ನಿಷ್ ಪ್ರ-
ಪಂಚ ಭಾವವ ಕೈ ಸಾರುವ
ಸಂಚಿತಾದಿಗಳನು ಮೀರುವ । ನಿಜ
ಪಂಚ ಬ್ರಹ್ಮವ ತಂದು ತೋರುವ ೫

ಸ್ನಾನ ಧೂಳನ ಧಾರಣಗಳಿಂದ । ತತ್-
ಸ್ಥಾನಕ್ಕೆ ಕೈ ಕರಣಗಳಿಂದ
ಧ್ಯಾನ ಮಂತ್ರೋಚ್ಚಾರಗಳಿಂದ । ಮಹ-
ಜ್ಞಾನ ಭಸ್ಮವಿದೆಂದು ಮುದದಿಂದ ೬

ಚಾರು ಸತ್‌ಕ್ರಿಯಾ ಸಂಹಿತವನು । ನಿತ್ಯ
ಧಾರಣ ಗೈವರೂರ್ಜಿತವನು
ವೀರಶೈವಾಚಾರ ಮತವನು । ಚೆನ್ನ-
ವೀರಸಂಪ್ರಿಯ ಧೂಳಿತವನು ೭

## ೩೯ ಗೋವಿಂದನಾದಿ ಗೋವಿಂದ

ರಾಗ : ಆಸಾವೇರಿ

ಗೋವಿಂದನಾದಿ ಗೋವಿಂದ । ನಮ್ಮ
ಗೋವಿಂದಲಾದ ಪಾವನ ಪಾಂಡುರಂಗ ॥ ಪಲ್ಲವಿ ॥

ಶ್ರೀ ವಿಭೂತಿಯು ಪಂಚ ಗೋವಿಂದ । ವೀರ-
ಶೈವಾಗಮೋಕ್ತವು ಗೋವಿಂದ
ಪೀವ ಪಂಚಾಮೃತ ಗೋವಿಂದ । ಜಗ-
ಜ್ಜೀವ ಸಂತೃಪ್ತಿಯು ಗೋವಿಂದ ೧

ಹವ್ಯ ಕವ್ಯಗಳೆಲ್ಲ ಗೋವಿಂದ । ಷಡು-
ಗವ್ಯ ಸಮ್ಮಾರ್ಜನೆ ಗೋವಿಂದ
ದ್ರವ್ಯ ಸಂಗಳಿಕೆಯು ಗೋವಿಂದ । ಮಹ
ದಿವ್ಯ ಪ್ರಕಾಶವು ಗೋವಿಂದ ೨

ಗೋತ್ರ ಪೋತ್ರವು ನಮ್ಮ ಗೋವಿಂದ । ಪುಣ್ಯ
ಕ್ಷೇತ್ರ ಯಾತ್ರೆಗಳೆಲ್ಲ ಗೋವಿಂದ
ಧಾತ್ರಿ ಪಾವನಗಾತ್ರಿ ಗೋವಿಂದ । ಸುಪ-
ವಿತ್ರ ಚಾರಿತ್ರವು ಗೋವಿಂದ ೩

ಅಭವ ವಾಹನವು ತಾ ಗೋವಿಂದ । ಬಹು
ಶುಭಮಂಗಲೆಯು ಜಾತ ಗೋವಿಂದ
ವಿಬುಧಗಮುನಶ್ವೇತ ಗೋವಿಂದ । ಕೃಷ್ಣ-
ನುಭಯಾಂಬಕವು ತಾ ಗೋವಿಂದ ೪

ಮೂರುತಾಪ ವಿನಾಶ ಗೋವಿಂದ । ಸುವಿ-
ಚಾರ ಮೋಕ್ಷ ವಿಲಾಸ ಗೋವಿಂದ
ಸಾರ ಸುಖ ವಿಶೇಷ ಗೋವಿಂದ । ಚೆನ್ನ-
ವೀರ ಮದ್‌ಗುರುವಾಸ ಗೋವಿಂದ ೫

## ೪೦ ಧರಿಸಿದೆ ನಂಬಿ ಧರಿಸಿದೆ

ಧರಿಸಿದೆ ನಂಬಿ ಧರಿಸಿದೆ । ಆದಿ-
ಪುರುಷನಾಭರಣವೆಂದರಿದು ರುದ್ರಾಕ್ಷಿಯ ॥ ಪಲ್ಲವಿ ॥

ಎರಡಾರು ಮಣಿಗೊಂದು ಎರಡು ಮಾಲೆಯನು ದ್ವಿ-
ಕರದ ಮುಂಗಡೆಯೊಳು ಹರಡಿಕಂಕಣವೆಂದು ೧

ಪದಿನಾರು ಮಣಿಗೇಕ ದ್ವಿವಿಧ ಮಾಲೆಯನು ಮದ್-
ವಿವಿತ ಬಾಹುಗಳಲ್ಲಿ ತೋಳಬಾಪುರಿ ಎಂದು ೨

ವಿರಳವಿಲ್ಲದಲೆನ್ನ ಕೊರಳಗೊಪ್ಪುವ ಮೂವ-
ತ್ತೆರಡು ಮಣಿಗಳ ಮಾಲೆಯನೇಕಾವಳಿ ಎಂದು ೩

ಚೆನ್ನ ಷಡಕ್ಷರದುನ್ನತಮಣಿಯು ದ್ವಿ-
ಕರ್ಣದೊಳಾರಾರು ರನ್ನದೋಲೆಗಳೆಂದು ೪

ನೆತ್ತಿ ತ್ರೈಶಿಖಿಗೊಂದು ಸುತ್ತೆ ಮೂವತ್ತಾರು
ಮುತ್ತಿನ ದಂಡೆಯೆಂದುತ್ತಮಾಂಗದೊಳಾನು ೫

ಕರ ಕಂಠ ಕರ್ಣ ಮಸ್ತಕ ಬಾಹು ಶಿಖಿಯೊಳು
ಧರಿಸಿ ಶೋಭಿಸುವ ಭಕ್ತರ ಚಿಂತಾಮಣಿ ಎಂದು ೬

ಕರದಿಷ್ಟಲಿಂಗದ ಶರಣ ಸತಿಯಳೆಂದು
ಶರಣರು ತಮ್ಮತ್ತ ಕರೆದು ಮನ್ನಿಪರೆಂದು ೭

ಪರತತ್ತ್ವ ಮೂರ್ತಿಗಳೆನಿಸುವ ಘನ ಶಿವ
ಶರಣ ಚಿದಂಗಾಭರಣ ರುದ್ರಾಕ್ಷಿಯು ೮

ನಿರುಪಮದ್ವಯ ಚೆನ್ನವೀರ ಮದ್‌ಗುರುವಿನ
ಪರಮಾಂತಃಕರಣ ಕಟಾಕ್ಷಮಾಲೆಗಳೆಂದು ೯

## ೪೧ ಸುಲಭದೆ ಜಪಿಸೋ ಷಣ್ಮಂತ್ರವ

ರಾಗ : ರೇಗುಪ್ತಿ

ಸುಲಭದಿ ಜಪಿಸೋ ಷಣ್ಮಂತ್ರವ । ಮನ-
ವೊಲಿದಿಷ್ಟಲಿಂಗ ಸ್ವತಂತ್ರವ ॥ ಪಲ್ಲವಿ ॥

ಬಿಡು ವೇದಪದಗಳಾಪೇಕ್ಷೆಯು । ಇನ್ನು
ಕಡಿಯೋ ದುರ್ಭವದ ಜಾಲಿವೃಕ್ಷವ
ಪಡೆಯೊ ದೇಶಿಕನಿಂದ ದೀಕ್ಷೆಯ ನೀ-
ನಿಡು ಲಿಂಗದೊಳು ಪಿಂಗದಕ್ಷವ ೧

ಪರದ್ರವ್ಯಕೆ ಕೈಯ ನೀಡದೆ । ಕಾಮಾ-
ತುರದಿಂದ ಪರವೆಣ್ಣ ನೋಡದೆ
ಮರೆದೊಮ್ಮೆ ನರರ ಕೊಂಡಾಡದೆ । ಸ್ಥಾ-
ವರದೈವ ಘನವೆಂದು ಪಾಡದೆ ೨

ವಿಷಯದಿಚ್ಛೆಗೆ ಮುಂದುವರಿಯದೆ । ದು-
ರ್ವ್ಯಸನವೇಳನು ಕೂಡಿ ಬೆರೆಯದೆ
ಅಸಮವಿಶ್ವಾಸ ಹಿಂಜರಿಯದೆ । ಮಾ-
ನಸದೊಳೀಶ್ವರವನು ಮರೆಯದೆ ೩

ಅರಿವರ್ಗವನು ಗೆಲ್ವ ಶೌರ್ಯವ । ಅಂತಃ-
ಕರಣವಿಜಯ ನಿಜ ಧೈರ್ಯವ
ನಿರುತ ನಿಶ್ಚಯ ಭಕ್ತಿ ತೂರ್ಯವ । ನಿತ್ತು-
ಪೊರೆವ ಕಾರಣ ಸತ್ಕಾರ್ಯವ ೪

ದುಷ್ಟ ದುರ್ಮದ ಗಜಸಿಂಗವ । ಬಹು
ಭ್ರಷ್ಟ ಕಾಮನ ಮಾಯಭಂಗವ
ಅಷ್ಟವರಣಂಗಳಂತರಂಗವ । ತೋರು-
ವಿಷ್ಟಲಿಂಗದ ಸುಪ್ರಸಂಗವ ೫

ಪರತರ ಪರಬ್ರಹ್ಮನಾದವ । ವಾಮ-
ಕರದಿಷ್ಟಲಿಂಗ ನಿರ್ಭೇದವ
ಗುರುಚರಪರ ಶ್ರೀಪಾದವ । ಅನ-
ವರತ ಸಂತೃಪ್ತಿ ಪ್ರಸಾದವ ೬

ಅನುಭಾವಿಗಳ ಚಿಂತಾಮಣಿಯನು । ತನ್ನ-
ನೆನೆವರ ಪೊರೆವ ಸದ್ಗುಣಿಯೆನು
ಮನುಮಹಾ ಮಂತ್ರದಗ್ರಣಿಯನು । ಚಿದ್-
ಘನ ಪಂಚಪರುಷದ ಕಣಿಯನು ೭

ಮರುತಸಂಚಲ ಗುಣವೈರಿಯು । ಭಕ್ತಿ-
ವಿರತಿ ಸುಜ್ಞಾನಾಧಿಕಾರಿಯು ।
ದುರಿತ-ದುರ್ಮಲ ವಿದೂರಿಯು । ಶಾಂತಿ
ಕರುಣ ವಿನಯ ಸುವಿಚಾರಿಯು ೮

ಭೃತ್ಯಭಕ್ತರ ಕಲ್ಪತರುವನು । ಪರ-
ತತ್ತ್ವಜ್ಞಾನದ ನಿಜದಿರವನು
ಸತ್ತುಚಿತ್ತಾನಂದಕರವನು । ನಿಜ
ಸತ್ಯವಾರಿಧಿಯ ಚಂದಿರವನು ೯

ಮರಣವಿಲ್ಲದ ನಿಜಹರಣವ । ಅಷ್ಟಾ-
ವರಣದಂಗದ ಗುರುಕರುಣವ
ಶರಣಸಂಗದ ಲಿಂಗ ಕಿರಣವ । ಮಾಯಾ-
ವರಣವಿಲ್ಲದ ಪರಿಪೂರಣವ ೧೦

ವೀರಶೈವದ ಕಾಮಧೇನುವ ಜ್ಞಾನ-
ಸಾರ ಹೃದಯಕಂಜಭಾನುವ
ಮೀರಿದಾಚರಣೆ ಸಂಧಾನವ । ಚೆನ್ನ-
ವೀರದೇಶಿಕನಭಿಧಾನವ ೧೧

## ೪೨ ಬಸವಲಿಂಗವೆಂಬೈದಕ್ಷರಗಳು

ಬಸವಲಿಂಗವೆಂಬೈದಕ್ಷರಗಳು ರಸನೆಯೊಳಿರಬೇಕು
ಶಶಿಕಾಂತದೊಳಿಹ ರಸದ ಪರಿಯೊಳೀ ವಸುಧೆಯೊಳಿರಬೇಕು ॥ ಪಲ್ಲವಿ ॥

ಅರುಹಿನ ಕುರುಹಿಡಿದವನೀ ತಲದೊಳವಧರಿಸಿದ ಗಣಪಾಲ
ವರಗುರುಲಿಂಗ ಸುಜಂಗಮ ಸೌಖ್ಯಾಕರ ಪಾವನಶೀಲ
ಪರಮ ಷಡಕ್ಷರ ಪಂಚಾಕ್ಷರವೆಂಬೆರಡರಾದಿ ಮೂಲ
ಶರಣಕರ ಮನಭಾವದಿಂದಲುಪಚರಿಸಿಕೊಂಬ ಲೋಲ ೧

ವೇದಶಾಸ್ತ್ರ ಪೌರಾಣ ನಿಗಮದಧಿಮಥನದ ನವನೀತ
ನಾದೇಹದೊಳಿಹ ನಾದಬಿಂದುಕಳೆಗಳಿಗತ್ತಲತ್ತತೀತ
ಮೂದೇವರ ಮುತ್ತಯ್ಯನ ಪೊತ್ತು ಸಲಹಿದೆನ್ನ ದಾತ
ಭೇದಿಸಲಗಣಿಶ ಬ್ರಹ್ಮಾಂಡಗಳ ಧರಿಸುವ ಪ್ರಖ್ಯಾತ ೨

ಭಕ್ತಿಯನೊಲ್ಲದ ನಿರುಪಾಧಿಕ ಸದ್‌ಭಕ್ತರಂತರಂಗ
ಮುಕ್ತಿಯ ಸೀಮೆಯ ಮೆಟ್ಟಿದವರ ಬಹಿರಂಗವಿಷ್ಟಲಿಂಗ
ಯುಕ್ತಿಯಿಂದ ಸದ್‌ಭಕ್ತಿಯ ಮಾಡುವರಂಗಲಿಂಗಸಂಗ
ಶಕ್ತಿಸಮೇತ ವಿರಕ್ತಿಯ ಮಾಡುವ ದೇಶಿಕರುತ್ತುಂಗ ೩

ಕಲಿಯುಗದೊಳು ಕಲ್ಯಾಣ ಪುರವರಾಧೀಶ್ವರ ಪ್ರಧಾನಿ
ಹಲಬರ ಮಧ್ಯದಿ ಬಿದ್ದ ಲಿಖಿತವ ತೆಗೆದೋದಿದ ಸನ್ಮಾನಿ
ಕುಲಛಲ ಮೊದಲಾದಷ್ಟಮದಗಳ ನೀಗಿದ ಸುಯ್ಜ್ಞಾನಿ
ನೆಲಜಲಾಗ್ನಿ ಮರುತಂಬರಾತ್ಮ ಷಡುತತ್ತ್ವದ ಸುಜ್ಞಾನಿ ೪

ಭಿನ್ನಭಕ್ತಿಯೆನಗನ್ಯವೆಂಬ ಸದ್‌ಭಕ್ತದೇಹಿಕದೇಹಿ
ತನ್ನ ಭಜಿಸಿ ಬಳಿಕನ್ಯವನರಿಯದ ಸಜ್ಜನಜನಮೋಹಿ
ಚಿನ್ನಬಣ್ಣದಂತೆರಡರಿಯದ ಶಿವಶರಣರಲ್ಲಿ ಸ್ನೇಹಿ
ಚೆನ್ನವೀರ ಮಹೇಶನಿರಂಜನ ಜಂಗಮದಾಸೋಹಿ ೫

## ೪೩ ಬದುಕಿದೆ ನಾಂ ಬದುಕಿದೆ ಸತ್ಯ

ಬದುಕಿದೆ ನಾಂ ಬದುಕಿದೆ ಸತ್ಯ
ಸದಮಲ ಸಂಗನಬಸವನಂಘ್ರಿಯ ಕಂಡು || ಪಲ್ಲವಿ ||

ಬಾಗಿ ಬಂದವರ ತನ್ನಂತೆ ಮಾಡುವ ಕರ್ತು
ಶ್ರೀಗುರುಸಂಗನಬಸವನಂಘ್ರಿಯ ಕಂಡು ೧

ಕಂಗಳಾಲಯದಿಷ್ಟಲಿಂಗಕ್ಕೆ ತನುವೆ ಸ-
ರ್ವಾಂಗಯ್ಯ ಸಂಗನಬಸವನಂಘ್ರಿಯ ಕಂಡು ೨

ಮಂಗಳಾತ್ಮಕ ಪರತತ್ತ್ವವೆ ನಿರುಪಾಧಿ
ಜಂಗಮ ಸಂಗನಬಸವನಂಘ್ರಿಯು ಕಂಡು ೩

ಸ್ವಯಚರಪರದ ಶ್ರೀ ಚರಣದಿಂದೊಗೆದ ಚಿ-
ನ್ಮಯತೀರ್ಥ ಸಂಗನಬಸವನಂಘ್ರಿಯು ಕಂಡು ೪

ತನುಶುದ್ಧ ಮನಸಿದ್ಧ ಭಾವಪ್ರಸಿದ್ಧ ಚಿದ್-
ಘನ ಶೇಷ ಸಂಗನಬಸವನಂಘ್ರಿಯು ಕಂಡು ೫

ಅಸಮತ್ರ್ಯೈಪಣವ ರೂಪಕದ ತ್ರೈಪುಂಡ್ರ ಚಿದ್-
ಭಸಿತ ಶ್ರೀ ಸಂಗನಬಸವನಂಘ್ರಿಯು ಕಂಡು ೬

ಚರಣಸಖನ ನಾಮವೆರಸದ ಮಾಲೆಯು
ವರಕಳೆ ಸಂಗನಬಸವನಂಘ್ರಿಯು ಕಂಡು ೭

ಲಿಂಗಾಭಿದಾನ ಷಣ್‌ಮಂತ್ರವೇ ಚಿತ್‌ಪ್ರಾಣ-
ಲಿಂಗ ಶ್ರೀ ಸಂಗನಬಸವನಂಘ್ರಿಯು ಕಂಡು ೮

ವೀರಶೈವಾಚಾರ ಸಾರಸದ್‌ಗುರುಚೆನ್ನ-
ವೀರ ಶ್ರೀ ಸಂಗನಬಸವನಂಘ್ರಿಯು ಕಂಡು ೯

## ೪೪ ಜಡವೆಂದು ನುಡಿಯುಬಹುದೆ

ರಾಗ : ಭೈರವಿ

ಜಡವೆಂದು ನುಡಿಯುಬಹುದೇ । ಶರಣ ಜನ-
ರೊಡಲೆನಿಪ ಸತ್‌ಕ್ರಿಯೆಯಾ ಮರುಳೆ ॥ ಪಲ್ಲವಿ ॥

ಸರಸದಿಂದಡಿಗೆರಗಿದ । ಶಿಷ್ಯನಂ-
ತರದ ಚಿತ್‌ಕಳೆಯ ತೆಗೆದುಕೊಟ್ಟ
ಕರಪೀಠದಿಷ್ಟಲಿಂಗ । ವಿದು ನಿನ್ನ
ಹರಣವೆಂದೊರೆದ ಗುರುವಾ ಮರುಳೆ ೧

ಕಂಗಳಾಲಯದೊಳೊಗೆದು । ಸದ್ಭಕ್ತ-
ನಂಗಮನ ಭಾವಂಗಳನೊಳಕೊಂಡು
ಜಂಗಮವೆ ಪ್ರಾಣವಾಗಿ । ಸತ್ಕ್ರಿಯ
ಲಿಂಗ ಪೆಸರೊಡೆದಿಪ್ಪವಾ ಮರುಳೆ ೨

ಅರಿವೆ ಆಚಾರವಾಗಿ । ಆಚಾರ-
ದಿರವಿಷ್ಟಲಿಂಗವಾಗಿ ಆ ಲಿಂಗ-
ವರ ಮಂತ್ರಮೂರ್ತಿಯಾಗಿ । ಸಂ-
ಚರಿಪ ಪರಮಪಾವನ ಜಂಗಮವಾ ಮರುಳೆ ೩

ಪಾದೋದಕದಾಚರಣೆಯ । ಪಿಡಿದಿಹ-
ನಾದಿ ಶರಣನ ಘನತೆಯ ನೆರೆ ಕಂಡು
ಪಾದಾಂಬು ಪರಬ್ರಹ್ಮವು ಎಂದು । ಶಿವನೋ-
ದಿದಾಗಮವ ಕೇಳು ಕೇಳು ಮರುಳೆ ೪

ಗುರು ಕೊಟ್ಟ ಲಿಂಗ ಶುದ್ಧ । ಲಿಂಗದೆ-
ಚ್ಚರದೊಳಿಹ ಮನವೆ ಸಿದ್ಧ । ಉಭಯದನು-
ವೊಲಿದ ಭಾವ ಪ್ರಸಿದ್ಧ । ಇಂತಪ್ಪ
ಗುರುಲಿಂಗ ಚರಪ್ರಸಾದವ ಮರುಳೆ ೫

ಸುಳಿವ ಜಂಗಮಲಿಂಗದಾ । ಸದುಹೃದಯ
ನಳಿನದಳಕುಳದಿ ಪೊಳೆವ ಶಾಂತ ಚಿತ್-
ಕಳೆಯ ಬೆಳಗಿನ ಪುಂಜವು । ಬಲಿದು ಒ-
ಬ್ಬುಳಿಯಾದ ಚಿದ್ಭಸಿತವಾ ಮರುಳೆ ೬

ಅಂಗ ಗುಣಗಳ ದಹಿಸಿದ । ಸುಜ್ಞಾನ
ಕಂಗಳಭಿದಾನದಿಂದಾ ಲಿಂಗದ ಚಿ-
ದಂಗದಾಭರಣವಾಗಿ । ರಂಜಿಸುವ
ಮಂಗಳಕರಕ್ಷಿಮಣಿಯಾ ಮರುಳೆ ೭

ಪರಮ ಶ್ರೀ ಗುರುದೇವನ । ಚೈತನ್ಯ-
ದಿರವೆನಿಪ ಚರಮೂರ್ತಿಯು ಕರದೊಳಿಹ
ನಿರುತ ಚಿದ್ಘನಲಿಂಗದ । ಪೆಸರೆನಿಪ
ವರಷಡಕ್ಷರ ಮಂತ್ರವಾ ಮರುಳೆ ೮

ಸನ್ನುತ ಅಷ್ಟಾವರಣವೆ । ಕ್ರಿಯಾಂಗ
ಚಿನ್ಮಯಾತ್ಮಕ ಲಿಂಗವೆ । ಪ್ರಾಣ ಪ್ರ-
ಸನ್ನ ಚರಮೂರ್ತಿಯಾಗಿ ಸುಳಿವಾ । ಗುರು-
ಚೆನ್ನವೀರನ ವಿಗ್ರಹವಾ ಮರುಳೆ ೯

## ೪೫ ಶರಣನೆ ಶಿವನಲ್ಲದೆ ಬೇರೆ ಶಿವನಿರುವನೆ

ರಾಗ : ಭೈರವಿ

ಶರಣನೆ ಶಿವನಲ್ಲದೆ ಬೇರೆ । ಶಿವ-
ನಿರುವನೆ ನೀ ತಂದು ತೋರಾ ನಾ ಕಾಣೆ ॥ ಪಲ್ಲವಿ ॥

ಪರಮ ಶ್ರೀ ಗುರುಲಿಂಗವು ಜಂಗಮವು
ಚರಣಜಲ ಸುಪ್ರಸಾದ ವರಭಸಿತ ಚಿದಂ-
ಗ ರುದ್ರಾಕ್ಷ ಮಂತ್ರವೆನಿಪಷ್ಟಾ-
ವರಣ ತನುಮೂರ್ತಿಯಾಗಿ ತೋರುತಿಹ ೧

ಶಿವನಿಗೀರೈದು ಹಸ್ತ ಉಂಟು । ನೋ-
ಡಿವನಿಗಿಲ್ಲೆಂಬ ಶುಂಭ ನೀ ಕೇಳು
ತವೆ ಶರಣರೊಳು ತೋರುವ । ದಶವಾಯು-
ನಿವಹವೆ ದಶಕರುಗಳು ಅಹುದಾಗಿ ೨

ಈಶಂಗೆ ಪಂಚವದನ ಉಂಟು । ನೋ-
ಡೀ ಶರಣಗಿಲ್ಲೆಂಬುವಾ ಶುಂಭ
ನಾಶಿಕವು ಜಿಹ್ವೆ ನೇತ್ರತ್ವಕ್ಕು । ಶ್ರೋ-
ತ್ರಾಸ್ಯ ಪಂಚಕವೀತಗೆ ಉಂಟಾಗಿ ೩

ಅಗ್ನಿಗಣ್ಣೊಂದೀಶಗೆ ಉಂ । ಟೆಂದು
ಪ್ರಾಜ್ಞಕವಿಗಳು ಪೇಳ್ವರು ಅಂತಿರಲಿ
ಆಜ್ಞೆ ಚಕ್ರಸ್ಥಾನದಿ ಶರ । ಣಂಗೆ
ಸುಜ್ಞಾನ ನೇತ್ರ ಒಂದುಂಟಾಗಿ ೪

ಹರಿಯ ವಂಶದೊಳೊಪ್ಪುವ ತರಣಿ । ಶಶಿ
ಕಿರಣವುಳ್ಳುಭಯ ನಯನ ಒಂದಾಗಿ
ಶರಣನಂಘ್ರಿಯ ಕೊನೆಯೊ । ಳಿರಲಾಗಿ
ಹರಿನಯನ ಚರಣವೆಂಬ ಪೆಸರೊಡೆದ ೫

ಮೃಡನಡಿಯುಳೊರ್ವ ಮಡದಿಯುಂಟು । ಎಂದು
ನುಡಿವ ಜಾಣರು ಕಾಣರು ಬಿಡು ಮರುಳೆ
ಕಡು ವ್ರತದಿ ನಡೆವ ಶರಣನಡಿಯೊಳತಿ-
ದೃಢಮಡದಿ ಕ್ರಿಯಾಶಕ್ತಿಯುಂಟಾಗಿ ೬

ಕಂಗಳ ಶಿರೋಭಾಗವೆ ಸು । ಜ್ಞಾನ
ದಿಂಗಿತ ಪರಬ್ರಹ್ಮದ ಶಿರವೆನಿಸಿ
ಮಂಗಳಾತ್ಮಕ ಶರಣನ ಕರದೊ । ಳಿಹ
ಲಿಂಗವೆ ಕರಕಪಾಲವಾಗಿರ್ಪ ೭

ಅರುವೆ ಶಿರ ಮರವೆ ಮುಂಡ । ಅಹುದಾಗಿ
ಮರವೆನಿಸುವ ಮುಂಡವನತಿಗಳೆದು
ಪರತರ ಪರಬ್ರಹ್ಮದ ಷಣ್ಮಂತ್ರ । ದರುವೆಂಬ
ಶಿರಮಾಲೆ ಕೊರಳೊಳಿಹ ೮

ಹಾಂಗೆ ಸುಜ್ಞಾನಶಕ್ತಿ । ತಾನುತ್ತ-
ಮಾಂಗದೊಳು ಸತ್ತ್ಯೋದಕವಾಗಿ ಸುರ
ಗಂಗೆ ಎನಿಸುವುದರಿಂದ । ಶರ-
ಣಂಗೆ ಶಶಿಮೌಳಿ ಎಂಬ ನಾಮವುಂಟಾಗಿ ೯

ಶಶಿಯು ಶಾಂತಿಯು ಷೋಡಶ ಚಿತ್ । ಕಳೆಯೊ-
ಳೆಸೆವ ಜಂಗಮು ಶರಣನ ಶಿರದ ಹಿಂ-
ದೆಸೆಯೊಳಿಹನದುಕಾರಣ । ಶರಣಂಗೆ
ಶಶಿಮೌಳಿ ಎಂಬ ನಾಮವುಂಟಾಗಿ ೧೦

ಎಂಜಲತಿಭುಂಜಕರಿಗೆ ಅದು । ಬಹಳ
ನಂಜುಳ್ಳ ಸುಪ್ರಸಾದ ಅನುಭವಿಸು-
ತಂಜದಿಹನದು ಕಾರಣ । ಶರಣಂಗೆ
ನಂಜುಂಡನೆಂಬ ಪೆಸರುಂಟಾಗಿ ೧೧

ಪೋಷಿಸುವ ಶದ್ಧ ಸಿದ್ಧ ಪ್ರಸಿದ್ಧ । ಮಹ
ಶೇಷ ಪ್ರಸಾದಮಯ ತನ್ನಂಗ
ವಾಸವಾಗಿಹ ಕಾರಣ । ಶರಣಂಗೆ
ಶೇಷಧರನೆಂಬ ನಾಮವುಂಟಾಗಿ ೧೨

ಅಗ್ರಹಂಕಾರವೆಂಬ ಪುಲಿ । ಗಜದ
ಉಗ್ರದುರುವಣೆಯ ಕೆಡಿಸಿ । ಉಳಿದ ಶಮೆ
ಶೀಘ್ರ ನಿರಹಂಕಾರಗಳೆಂ । ದೆಂಬ
ವ್ಯಾಘ್ರ ಗಜದಖಿಲಾಂಬರವನು ಪೊದೆವ ೧೩

ಕಾಲಕಲ್ಪಿತವನುಳಿದು । ಅನವರತ
ಮೂಲಪಂಚಾಕ್ಷರಿಯನು ಜಪಿಸಿ ಸುಖ-
ಶೀಲನಾಗಿಹ ಕಾರಣ । ಶರಣಂಗೆ
ಕಾಲಹರನೆಂಬ ನಾಮವುಂಟಾಗಿ ೧೪

ಕಾಮವೆನಿಸುವ ಬಯಕೆಯ । ಲಿಂಗದೊಳು
ನೇಮದಿಂದಿರಿಸಿ ಬಳಿಕ ತಾನು ನಿಃ-
ಕಾಮಿಯಾಗಿಹ ಕಾರಣ । ಶರಣಂಗೆ
ಕಾಮಹರನೆಂಬ ನಾಮವುಂಟಾಗಿ ೧೫

ಮಂದಮತಿ ಎಂದೆನಿಸುವ । ಅಜ್ಞಾನ-
ದಂಧಕಾರವನ್ನೆಲ್ಲಿ ಸುಜ್ಞಾನ-
ದಿಂದಲಡಿಮೆಟ್ಟಿ ತುಳಿದ ಕಾರಣದೊ-
ಳಂಧಕಾಸುರವೈರಿಯು ಪೆಸರ್ವಡೆದ ೧೬

ಸುಪಥಸುಜ್ಞಾನನೇತ್ರದಿಂ । ನೋಡಿ
ಗುಪಿತಕೀಲದೊಳೊಪ್ಪುವ ತನುತ್ರಯುಗ-
ಳುಪಹತಿಯು ನೆರೆ ಕೆಡಿಸಿದ । ಶರಣಂಗೆ
ತ್ರಿಪುರಹರನೆಂಬ ನಾಮವುಂಟಾಗಿ ೧೭

ಲೋಲಭಕ್ತಿ ಜ್ಞಾನ ವೈರಾಗ್ಯ । ತ್ರೈ-
ಶೂಲವನು ದೃಢಹಸ್ತದಿ ಪಿಡಿದು ಭವ-
ಮೂಲವನು ಕಿತ್ತೆತ್ತಿದ । ಶರಣಂಗೆ
ಶೂಲಧರನೆಂಬ ನಾಮವುಂಟಾಗಿ ೧೮

ಅವನಿಯೊಳು ರಜತಮಗಳು । ಬಹುದೋಷ ।
ನಿವಹವೆಂದವನು ತ್ಯಜಿಸಿ ಉಳಿದ ಸ-
ತ್ವವನಂಗೀಕರಿಸಲೊಡನೆ । ಶರಣಂಗೆ
ಧವಳಾಂಗನೆಂಬ ನಾಮವುಂಟಾಗಿ ೧೯

ಶೈವಶಾಸ್ತ್ರದಿ ಪೇಳುವ । ಇಂದ್ರಾದಿ
ದೇವತೆಗಳಿರವ ಕೇಳಾ ಶರಣನ
ಮೂವತ್ತುಮೂರು ಕೋಟಿ । ಇಂದ್ರಿಗಳು
ದೇವತೆಗಳೆನಿಸುತಿರ್ಪುವದರಿಂದೆ ೨೦

ಹರಿವಿರೋಧಿಗಳೆನಿಸುವ । ರಕ್ಕಸರ
ಪರಿಯ ಕೇಳಾ ಶರಣನಂತರದೊಳಿಹ
ಅರುವತ್ತಾರು ಕೋಟಿ । ಕರಣಗುಣ
ದಿರವೆ ರಕ್ಕಸರ ಮೊತ್ತವಾಗಿರ್ಪ ೨೧

ವರಮುಭಕ್ತಿಗು ಬಸವಗು । ಎಳ್ಳಿನಿತು
ವಿರಳವಿಲ್ಲದೆ ಒಪ್ಪುವ ಭಕ್ತಿಯನು
ಪೊರೆಯೇರಿ ನಡೆಸಲಾಗಿ । ಶರಣ ತಾ
ವರವೃಷಭರೂಢನೆಂಬ ನಾಮವುಂಟಾಗಿ ೨೨

ನೊಗನುದೋರುವ ಚತುರ್ದಶ । ಇಂದ್ರಿಯಂಗಳ-
ನಗಲದವಕಧ್ಯಕ್ಷನೆ ತಾನಾಗಿ
ನಗುತಲಾಳುವ ಶರಣಗೆ । ಹದಿನಾಲ್ಕು
ಜಗದ ಪತಿಯೆಂಬ ನಾಮವುಂಟಾಗಿ ೨೩

ವಿಶ್ವ ತೈಜಸ ಪ್ರಾಜ್ಞ । ಜೀವತ್ರಯದ
ವಿಶ್ವಪ್ರಪಂಚುವುಳಿದು ಲಿಂಗೈಕ್ಯ-
ದಸ್ವತಂತ್ರರ ಮಾಡಿದ । ಕಾರಣದಿ
ವಿಶ್ವಾಧಿಕರ್ತನೆಂಬ ಪೆಸರೊಡೆದ ೨೪

ಚರಣದೊಳು ಪಾವುಗೆಯನು ಧರಿಸಿ । ಎಡ
ಕರದೊಳಿಷ್ಟ ಬ್ರಹ್ಮವ ಪಿಡಿದು ತಾ
ವರಭಸಿತ ರುದ್ರಾಕ್ಷಿಯ । ನಲಂಕರಿಸಿ
ಗುರು ಚೆನ್ನವೀರನೆಂಬ ಪೆಸರ್ವಡೆದ ೨೫

## ೪೬ ಶರಣರೊಡವೆರಸೆನ್ನನು

ರಾಗ : ಭೈರವಿ

ಶರಣರೊಡವೆರಸೆನ್ನನು । ದುರಿತ ದುರ್-
ಮರಣ ಜನರೊಡವೆರಸದೆ ಗುರುವೆ ॥ ಪಲ್ಲವಿ ॥

ಗುರುವಿನಡಿಗೆರಗಿ ಪಡೆದ । ಕರದಿಷ್ಟ-
ದರುವೆ ಗುರುವೆಂದರುಹಿಸಿ ಬೇರೆ
ನರಜನ್ಮ ಕರಮುರವೆಯ । ಮರೆಗೊಂಡು
ದುರುಳತರಳವೆರಸದೆ ಗುರುವೆ ೧

ಪ್ರಾಣಲಿಂಗಾಣತಿಯನು ಕಾಣು । ತವೆ
ಪ್ರಾಣವಾಯು ಲಿಂಗವೆನಿಸಿ ಕಡೆಗೆ
ಮಾಣದಿಹ ಕ್ಷೀಣಭೂತ ಪ್ರಾಣ । ವಹ
ಕ್ಷೋಣಿತಾತ್ಮರವೆರಸದೆ ಗುರುವೆ ೨

ನಾನಲ್ಲ ನೀನಲ್ಲವೆ ತಾನೆ । ಸು-
ಜ್ಞಾನ ಜಂಗಮವೆನಿಸಿದ ಮೇಲೆ
ನಾನೆಂಬ ಹೀನಮತಿಯ । ಮಾನವನ-
ಜ್ಞಾನ ಜನರವೆರಸದೆ ಗುರುವೆ ೩

ಪರಮಗುರುಚರಣೋದಕ । ವೆರಡೈದು-
ನುರುಜಿಹ್ವೆಯೊಳುಗರುಹಿಸಿ ಬಳಿಕ
ಪರಸತಿಯರಧರಸವಿಯ । ಮರೆಯದಲೆ
ದುರಸಕಾಂಕ್ಷರವೆರಸದೆ ಗುರುವೆ ೪

ಅಸಮೈಕದಶಪ್ರಸಾದ । ಅಸುವಿದೆಂ-
ದೊಸೆದು ಘ್ರಾಣದಿ ಬೇಸಸಿದ ತುದಿಗೆ
ಪುಸಿದೈವ ಕೊಸರ ಮುಡಿದ । ಕುಸುಮವಾ-
ಸಿಸುವ ಪಿಸುಣರವೆರಸದೆ ಗುರುವೆ ೫

ಲಿಂಗಾಗ್ನಿಸಂಗದಿಂದ ಲಿಂಗ । ದಹ-
ನಂಗಮಹಭಸಿತವೆನಿಸಿ ಮುಂದೆ
ಲಿಂಗವಿಹೀನಾಂಗ ಭವಿಯ । ಹಿಂಗದಾ-
ಲಿಂಗಿಸುವರಂಗವಿಸದೆ ಗುರುವೆ ೬

ಚಿದ್ರಸವೆ ಭದ್ರವಾದ । ರುದ್ರಾಕ್ಷಿ
ಮುದ್ರೆ ನೇತ್ರದೊಳರುಹಿಸಿ ಸದ್ಯೋ-
ಪದ್ರ ಧನಂ ದ್ರವ್ಯವ । ದೃಷ್ಟಿಸುವ
ಕ್ಷುದ್ರಜನರವೆರಸದೆ ಗುರುವೆ ೭

ಭವರಹಿತ ಶಿವಮಂತ್ರವ । ಅವಿರತಂ
ಪ್ರವರ ಶ್ರೋತ್ರದೊಳರುಹಿಸಿ ಬಳಿಕ
ಭುವಿಯೊಳತಿ ಶಿವನಿಂದೆಯಾ । ಭವಿನುಡಿಗೆ
ಕಿವಿಗೊಡುವರೊಡವೆರಸದೆ ಗುರುವೆ ೮

ಅಷ್ಟತನು ನಷ್ಟವಾಗಿ । ನೈಷ್ಠೆಯಿಂ-
ದಷ್ಟಾವರಣಂಗವೆನಿಸಿ ನೆಲೆಸಿ
ದುಷ್ಟಹರ ಶಿಷ್ಟಪಾಲ । ಈಕ್ಷಿನೆ-
ನ್ನಿಷ್ಟಗುರು ಚೆನ್ನವೀರ ಗುರುವೆ ೯

## ೪೭ ನರರ ದುರ್ನಡತೆಗಳಂತಲ್ಲ

ರಾಗ : ಭೈರವಿ

ನರರ ದುರ್ನಡತೆಗಳಂತಲ್ಲ । ಶಿವ-
ಶರಣರಾಚರಣೆಯ ಪರಿ ಬೇರೆ ॥ ಪಲ್ಲವಿ ॥

ಶರಿರದ ರುಜೆಗಂಜಿ ಪರಕೆಯ । ಪೊತ್ತು
ನರರಂತೆ ಪರದೈವಕೆರಗದೆ
ಗುರುವಿತ್ತ ನಿರುಪಮಲಿಂಗವ । ವಾಮ-
ಕರಪೀಠದೊಳು ಭಜಿಸುವರಾಗಿ ೧

ಕಾಮವಿಕಾರದುನ್ಮತ್ತದಿ । ಪರ-
ಕಾಮಿನಿಯರನೊಮ್ಮೆ ನೆನೆಯದೆ
ಕಾಮಿತಾರ್ಥವನೀವ ಲಿಂಗದೊಳ್ । ಮನ-
ಪ್ರೇಮವಿರಿಸಿ ಧ್ಯಾನಿಸುವರಾಗಿ ೨

ತನುವ ದಂಡಿಸಿ ತಂದ ಧನವನ್ನು । ಮುಂದೆ
ಮನೆಗೆ ಮಕ್ಕಳಿಗೆಂದು ಬಳಸದೆ
ಅನಘಜಂಗಮಕೆ ದಾಸೋಹವಾ । ಒಂ-
ದಿನಿತು ವಂಚಿಸದೆ ಮಾಡುವರಾಗಿ ೩

ಮಡು-ಹೊಂಡ ಕೆರೆ-ಬಾವಿ ನದಿ-ಹಳ್ಳ । ಚಿಲುಮೆ
ಜಡನೀರನೊಲಿದೊಮ್ಮೆ ಬಳಸದೆ
ಒಡೆಯ ಜಂಗಮಲಿಂಗ ದೇವನ । ವಿಮಲ-
ಲಡಿಯುದಕವ ಬಳಸುವರಾಗಿ ೪

ಹಸುವಿನಿಚ್ಛೆಗೆ ಭೌಕ್ತಿಕನ್ನವ । ನೊಮ್ಮೆ
ರಸನೆಯೊಳಿಟ್ಟು ತಾ ರುಚಿಸದೆ
ಅಸಮಭಕ್ತಿಯ ಸುಪ್ರಸಾದವ । ನನು-
ಮಿಷಲಿಂಗಸಹಿತ ಭೋಗಿಪರಾಗಿ ೫

ಅಂಗದ ಕುರು ತದ್ದು ತುರಿಗಳ್ಗೆ । ಔಷ-
ಧಂಗಳನೊಲಿದೊಮ್ಮೆ ಧರಿಸದೆ
ಲಿಂಗ ಚಿತ್‌ಕಳೆಯ ಚಿದ್‌ಭಸಿತವ । ಸರ್ವ-
ಅಂಗದೊಳಗೆ ಧರಿಸುವರಾಗಿ ೬

ಪ್ರೇತ ಭೂತ ಗ್ರಹ ಭಯಕಂಜಿ । ಮನ
ಸೋತು ಯಂತ್ರವನೊಮ್ಮೆ ಧರಿಸದೆ
ಓತು ರುದ್ರಾಕ್ಷಿಯ ಮಾಲೆಯ । ಸಂ-
ಪ್ರೀತಿಯಿಂದಲಿ ಧರಿಸುವರಾಗಿ ೭

ಗಾರುಡಕುಟಿಲ ಕುಹಕ ವಿದ್ಯೆ । ಎಂಬ ನೂ-
ರಾರು ಮಂತ್ರವ ಕಲಿಯದೆ
ವೀರಶೈವಾಚಾರ ಷಡ್‌ವಿಧ । ಲಿಂಗ-
ದಾರು ಮಂತ್ರವ ಜಪಿಸುವರಾಗಿ ೮

ಮರ್ತ್ಯಲೋಕದ ಜಡ ನರರಂತೆ । ದು-
ರ್ವತನೆಗಳನೊಂದಾಚರಿಸದೆ
ಕರ್ತೃ ಸದ್‌ಗುರು ಚೆನ್ನವೀರನ । ಸದ್‌-
ವರ್ತನೆಗಾಚರಿಸುವರಾಗಿ ೯

## ೪೮ ಶಿವನಪಶ್ಯೈವನ ಸುವಿಚಾರವಿಚಾರ ವಿವರವ ಕೇಳಿ

ರಾಗ : ಮಾಳವ

ಶಿವನಪಶ್ಯೈವನ ಸುವಿಚಾರವಿಚಾರ
ವಿವರವ ಕೇಳಿ ಶಿವಭಕ್ತಜನ ॥ ಪಲ್ಲವಿ ॥

ಪರಮ ಪಾವನ ಗುರುಕರದೊಳೊಗೆದ । ತನ್ನ
ಗುರುವಿನ ಗುರುವಹ ಪರಶಿವನು
ಪರಿವಿಡಿಯಿಂದನಾದಿ ಗುರುವಿನೊಳೊಗೆ । ಯುದೆ
ಬರಿದೆ ತಾ ಗುರುವಹನಪಶ್ಯೈವ ೧

ಅಂಗದ ಮೇಲಿಷ್ಟಲಿಂಗವ ಧರಿಸಿ । ಸರ್ವ-
ಅಂಗವ ಲಿಂಗವಹ ಪರಶಿವನು
ಅಂಗಜಗಳ್ಕಿ ತನ್ನಂಗದಿ ಜಡ । ಮಾಯಾ
ಅಂಗನಹವಾಗಿಹನಪಶ್ಯೈವ ೨

ಭಕ್ತಿಸುಜ್ಞಾನ ವಿರಕ್ತಿಸಂಯುತ । ಸದ್ಯೋ-
ನ್ಮುಕ್ತ ಸುಜಂಗಮ ಪರಶಿವನು
ರಕ್ತಾಸುರನ ಚರ್ಮರಕ್ತಗಾವಿಯು । ಪೊದ್ದು
ಶಕ್ತಿ ಸಂಗದೊಳಿಹನಪಶ್ಯೈವ ೩

ಗುರುಚರಲಿಂಗವ ಚರಣ ಜಲದ । ಕ್ರಿಯಾ-
ಚರಣೆಯೊಳಿರುತಿಹ ಪರಶಿವನು
ವಿರಹತಾಪದಿ ಹೆಣ್ಣ ಶಿರವನೇರಿಸಿ । ಕೊಂಡು
ಸುರನದಿ ಜಾಲನೆಂಬನಪಶ್ಯೈವ ೪

ಭೇದರಹಿತ ಭಕ್ತಿ ಮೋದವೆನಿಪ । ಸುಪ್ರ-
ಸಾದ ತೃಪ್ತಿಯೊಳಿಹ ಪರಶಿವನು
ಸಾಧು ಸದ್ಗುಣಶೀಲನಾದ । ಚಿಲ್ಲಾಳನ
ಕೊಯ್ದು ಮಾಂಸವತಿಂಬನಪಶ್ಯೈವ ೫

ಬಸವನಾಮದೊಳೊಪ್ಪುವಸಮ ತ್ರೈಪುಂಡ್ರ । ಚಿದ್-
ಭಸಿತ ಧಾರಣಾಗ್ರೈವ ಪರಶಿವನು
ಕಿಸುಕುಳ ಭೂತನಂತೆ ಮಸಣಖೂದಿಯ । ತನ್ನ
ನೊಸಲೊಳು ಧರಿಸುವನಪಶೈವ ೬

ಪರಮನಕ್ಷಿ ಮಣಿಯ ಸರವಗೊಳಿಸಿ । ತನ್ನ
ಕೊರಳೊಳು ಧರಿಸುವ ಪರಶಿವನು
ದುರುಳರಕ್ಕಸರಸ್ತಿಶಿರದ ಮಾಲೆಯ । ತನ್ನ
ಕೊರಳೊಳು ಧರಿಸುವನಪಶೈವ ೭

ತನ್ನಭಿದಾನದ ಚೆನ್ನಷಡಾ । ಕ್ಷರ-
ವನ್ನು ತಾ ಜಪಿಸುವ ಪರಶಿವನು
ಅನ್ಯ ಸ್ತ್ರೀ ಮೋಹರಾಜಮನ್ನಣೆ । ಜನವಶ್ಯ-
ವನ್ನು ತಾ ಜಪಿಸುವನಪಶೈವ ೮

ಅಷ್ಟಾವರಣವೆ ಅಂಗ ಇಷ್ಟಲಿಂಗವೆ । ಪ್ರಾಣ
ಶ್ರೇಷ್ಠನಾಗಿರುತಿಹನು ಪರಶಿವನು
ಅಷ್ಟಭೂತವೆ ಅಂಗ ಕಷ್ಟ ಜೀವವೇ । ಪ್ರಾಣ
ಭ್ರಷ್ಟನಾಗಿರುತಿಹನಪಶೈವ ೯

ನಡೆಗೆ ದೀಕ್ಷೆಮಾಡಿ ನುಡಿಗೆ ಶಿಕ್ಷೆಯ । ಪೇಳಿ
ಕಡೆಗೆ ಮೋಕ್ಷವನೀವ ಪರಶಿವನು
ನಡೆಗೆ ಭೇದವ ತೋರಿ ನುಡಿಗೆ ವೇದವ । ಸಾರಿ
ಕಡೆಗೆ ನಾದವ ಬೀರುವಪಶೈವ ೧೦

ನಾಮಶೀಮೆಯ ಮೀರಿದಾ ಮಹಲಿಂಗ । ತನ್ನ
ವಾಮಹಸ್ತದೊಳಿಹ ಪರಶಿವನು
ತಾಮಸಬ್ರಹ್ಮನ ವ್ಯೋಮಮಸ್ತಕ । ತನ್ನ
ವಾಮ ಹಸ್ತದೊಳಿಹನಪಶೈವ ೧೧

ಮರವೆಯುಳಿದ ಮಹದರುವೆಯು ಕಾವಿ । ಕಾಷಾಂ-
ಬರವನು ಧರಿಸುವ ಪರಶಿವನು
ಕರಿಯದನುಜ ವ್ಯಾಘ್ರಾಸುರನ ದೇಹದ ಚರ್ಮಾಂ-
ಬರವನು ಧರಿಸುವನಪಶೈವ ೧೨

ಒಡೆಯ ಜಂಗಮದೇವನಡಿಯುದಕದಿ । ಲಿಂಗ-
ದೊಡಲ ಮಜ್ಜನಗೈವ ಪರಶಿವನು
ಕಡುಜಡವಾಗಿ ತನ್ನ ಮುಡಿಯನೇರಿದ । ನೀರೊಳ್
ಒಡಲಮಜ್ಜನಗೈವನಪಶೈವ ೧೩

ಅನಘಶೇಷವ ತನ್ನ ನೆನಹಿನಿಂದಲಿ । ಚಿದ್‌ಭಾ-
ಜನದಿ ಭೋಜನಗೈವ ಪರಶಿವನು
ತನುವಿನಿಚ್ಛೆಗೆ ತಾ ಬ್ರಹ್ಮನ ತಲೆಯೋಡಿನೊಳು
ಮನೆಮನೆ ತಿರಿದುಂಬನಪಶೈವ ೧೪

ಬೆಳಗಿನ ಪುಂಜದೊಬ್ಬುಳಿ ಭಸ್ಮವ । ಭಾಳಸ್ಥಳ-
ದೊಳು ಧರಿಸುವ ಪರಶಿವನು
ಮುಳಿದು ಕಾಮನ ಸುಟ್ಟು ಉಳಿದ ಬೂದಿಯು । ನಂಗ
ಸ್ಥಳದೊಳು ಧರಿಸುವನಪಶೈವ ೧೫

ಗುರುಕಟಾಕ್ಷಿಯ ಮಣಿಯು ಕರ ಶಿರ ಕರ್ಣ । ಕಂಠಾ-
ಭರಣವಾಗಿರುತಿಹ ಪರಶಿವನು
ಧರೆಯ ಗಾರುಡಿಗನಂತೆ ಉರುಗನಾ । ಭರಣವ
ಶರಿರದಿ ಧರಿಸುವನಪಶೈವ ೧೬

ಕಂಗಳಾಲಯದಿಷ್ಟಲಿಂಗ ಷಣ್ । ಮಂತ್ರವ
ಹಿಂಗದೆ ಜಪಿಸುವ ಪರಶಿವನು
ಹೆಂಗಳೆಯರ ಮೋಹನಾಂಗ । ಮಂತ್ರವೆ
ಸಂಗದೊಳಿರುತಿಹನಪಶೈವ ೧೭

ಇಷ್ಟಲಿಂಗದನುವಿಷದೃಷ್ಟಿನಟ್ಟಿಗಲದ । ಉತ್-
ಕೃಷ್ಟ ಶ್ರದ್ಧೆಯೊಳಿಹ ಪರಶಿವನು
ಶಿಷ್ಟ ಸುವೀರಶೈವೋಚ್ಛಿಷ್ಟವಾದಣಿ । ಮಾದಿ
ಅಷ್ಟಸಿದ್ಧಿಯೊಳಿಹನಪಶೈವ ೧೮

ಶರಣನಂಗವ ತನ್ನಂತರದೊಳಿರಿಸಿ । ತಾನಾ-
ಶರಣನಂತಿರುತಿಹ ಪರಶಿವನು
ಶಿರದೊಳೊಪ್ಪುವ ಶಶಿಯು ಕೊರಗುತಿರಲು । ತನ್ನ
ಬರಿಯ ಬಿಂಕವ ಬೀರುವನಪಶೈವ ೧೯

ಪೊಡವಿಯೊಳಗೆ ನಡೆನುಡಿವ ಪ್ರಾಣಿಗಳ । ತ-
ನ್ನೊಡಲ ಕಂಡಂತೆ ಕಾಂಬಾ ಪರಶಿವನು
ಹಡೆದ ಮಗನ ಶಿರಗಡಿದು ನಂಬಿಯು । ಕೂಸ
ಹೆಡಕೆ ಬಡಿಸಿದವನಪಶೈವ ೨೦

ಶರಣಸುಲಿಂಗಿ ಮಾಹೇಶ್ವರ ಸುಪ್ರಸಾದಿ । ಭಕ್ತೈ-
ಕ್ಯರ ಹೃದಯದೊಳಿಹ ಪರಶಿವನು
ಕುರಿಯು ಓಕ್ಕೆಯು ಕುಚ ಕಲ್ಲರೆಯು । ಬಳ್ಳಾದಿ ಸ್ಥಾ-
ವರದ ಗರ್ಭದೊಳಿಹನಪಶೈವ ೨೧

ಸತ್ಯಸದ್‌ಗುಣಶೀಲ ತತ್ತ್ವಸುಜ್ಞಾನ । ಮೂಲ
ಮರ್ತ್ಯಕೈಲಾಸಲೋಲ ಪರಶಿವನು
ಸತ್ತ ಆಕಳಕರುವನುತ್ತಮಾಂಗದಿ । ಹೊರುವ-
ನತ್ತ ಸ್ವರ್ಗದೊಳಿರುವನಪಶೈವ ೨೨

ಶರಣಸಂತತಿ ತನ್ನ ಸ್ಮರಣೆಯ ಮಾಡ । ಲಂತಃ-
ಕರುಣದಿ ಸಲಹುವ ಪರಶಿವನು
ಇರುಳು ಹಗಲು ತನ್ನಾಚರಿಪಜಹರಿಯು । ಭವಾಂ-
ತರದೊಳು ಬರಿಸುವನಪಶೈವ ೨೩

ಜಾತಿ ಜನನೋಚ್ಛಿಷ್ಟ ಪ್ರೇತರಾಜಸ। ಪಂಚ-
ಸೂತಕವರ್ಜಿತ ಪರಶಿವನು
ಜಾತಿ ಬ್ರಾಹ್ಮಣನಾಗಿ ಸೂತಕ। ವಿಡಿದಿಹ
ಪಾತಕರೊಡನಾಡುವನಪಶೈವ ೨೪

ವೀರಶೈವಾಚಾರಸಾರ ಸದ್‌ಗುರು। ಚೆನ್ನ
ವೀರಮಹೇಶ ತಾನೆ ಪರಶಿವನು
ಚಾರು ಸತ್‌ಕ್ರಿಯಾವಂತರಾರು ಮೆಚ್ಚದ। ಕ್ಷೀಣಾ-
ಚಾರದೊಳಿರುತಿಹನಪಶೈವ ೨೫

## ೪೯ ಭವಿಯ ಭಕ್ತರಭೇದ ವಿವಿಧ ವರ್ತನೆಯಿಂದ

ರಾಗ : ಕೇದಾರಗೌಳ

ಭವಿಯು ಭಕ್ತರ ಭೇದ ವಿವಿಧ ವರ್ತನೆಯಿಂದ
ಭವಿ ಭವಜೀವಿ ಭಕ್ತ ನಿತ್ಯಮುಕ್ತ ॥ ಪಲ್ಲವಿ ॥

ಅಂಗವಿಷಯಂಗಳಿಚ್ಛೆಯು। ಪರ
ಹೆಂಗಳೆಯರ ಕಾಮಿಸುವುದೆ ಭವಿ
ಅಂಗತ್ರಯವ ಗುರು ಲಿಂಗ ಜಂಗಮಕಿತ್ತು।
ಸಂಗಸಂಯೋಗಕಾಮಿ ಶ್ರದ್ಧಾಭಕ್ತ ೧

ಪರತತ್ವದಿರವನು ಕರತಳಕಿತ್ತ। ಗುರು-
ನರನೆಂದು ಕೋಪಿಸುವ ಪಾತಕ ಭವಿ
ದುರಿತ ಪಂಚಕದಿಚ್ಛೆಗೆರಗುವ। ಮನಸಾದೀ-
ಕರಣಗಳಲ್ಲಿ ಕೋಪಿ ನಿಷ್ಠಾಭಕ್ತ ೨

ಒಡಲಾಸೆಯಿಂದ ದ್ರವ್ಯ ಕೊಡನ ಗಳಿಸಿ। ಧರ್ಮ-
ಕೊಡೆನೊಂದ ಕಾಸವೆಂಬ ಲೋಭಿಯೆ ಭವಿ
ಒಡೆಯು ಜಂಗಮಲಿಂಗದಡಿಯಾಂಬು। ಶೇಷವ
ಬಿಡೆನೆಂಬ ಲೋಭಿ ಸಾವಧಾನಿಭಕ್ತ ೩

ಅತಿಮೂಢ ಪಿತಮಾತೆ ಮತಿಹೀನ ಸತಿಸುತ । ರತಿ-
ಹಿತರೆಂದು ಮೋಹಿಸುವನೆ ಭವಿ
ಕ್ಷಿತಿಯೊಳು ಶರಣಸಂತತಿಯೆ । ಬಂಧುಗಳೆಂದು
ಅತಿಮೋಹವಿರಲನುಭಾವಿಭಕ್ತ ೪

ಸದಮಲಾತ್ಮಾಕರ ಕಂಡು ಇದಿರೆದ್ದು । ಶರಣೆನ್ನ-
ದಧಮ ದುರ್ಮದ ಸದಮಾರಿ ಭವಿ
ವಿಧಿತ ಶೈವಂಗಳಲ್ಲಿ ಮೂವೆತ್ತ । ವೀರಶೈವ-
ಕಧಿಕವಿಲ್ಲೆಂಬ ಮದಾನಂದಭಕ್ತ ೫

ಸಚ್ಚಿದಾನಂದ ಬ್ರಹ್ಮದೆಚ್ಚರಿಗಳ । ಕೂಡೆ
ಮುಚ್ಚರಿಸುವನವ ಹುಚ್ಚ ಭವಿ
ಇಚ್ಛೆಯೊಳಿರದನ್ಯತುಚ್ಛ ಸಂ । ಸಾರದಿ
ಮಚ್ಚರಿಸುವ ಸಮರಸಭಕ್ತ ೬

ಆರು ಭಕ್ತಿಗಳಾರು ವೈರಿವರ್ಗವ । ಗೆಲ್ವ
ಶೂರನಲ್ಲದ ನರ ಕ್ರೂರ ಭವಿ
ವೀರಮಹೇಶ ಚೆನ್ನವೀರ ಮದ್ಗುರು । ವಿನ
ಕಾರುಣ್ಯದಿಂದ ಗೆಲ್ವ ಧೀರಭಕ್ತ ೭

## ೫೦ ಸೂತಕ ಪಾತಕವಿಲ್ಲವೆಂದೊರೆವ

ರಾಗ : ಪುನ್ನಾಗ-ತೋಡಿ-ಆದಿತಾಳ

ಸೂತಕ ಪಾತಕವಿಲ್ಲವೆಂದೊರೆವ ಪು-
ನೀತ ಸದ್ಗುರು ವಚನವ ॥ ಪಲ್ಲವಿ ॥

ಶಿವಭಕ್ತರ್ಗೆ ಗರ್ಭದಿಂದೊಗೆದ ಶಿಶುವಿಗಾಗ
ಶಿವಲಿಂಗವನು ಕಂಠದೊಳ್ ಧರಿಸಿ
ಶಿವಮಂತ್ರ ಸ್ಮರಣೆಯಿಂ ಫಣೆಯೊಳ್ ವಿಭೂತಿಯು
ತವೆ ಪಟ್ಟಿಗಟ್ಟಿ ಹುರಿಗೊಯ್ದು ಬಳಿಕ ೧

ಶರಣೆ ಸತಿಯುರೊಲ್ದು ಶಿಶುವ ಕರದಿಂ ಪಿಡಿ-
ದುರು ಬೆಣ್ಣೆ ಎಣ್ಣೆಯ ಮೈಯೊಳು ಪೂಸಿ
ಗುರುಪಾದೋದಕದಿಂದಲೆರೆದು ವಸ್ತ್ರವ ಪೊಚ್ಚಿ
ವರವಿಭೂತಿಯನು ಫಾಲದೊಳಿಟ್ಟು ಮುದದಿ ೨

ಗುರುಮಾರ್ಗಾಚಾರದ ಕ್ರಮದಿಂದೆಲಾಗಳು
ನೊರೆವಾಲು ಬೆಣ್ಣೆ ಮೊಲೆವಾಲು ಸಕ್ಕರೆಯ
ಸರಸದಿ ಪೊರೆಯುುತಮೃತವನುಣಿಸಲುದಯ-
ದಿರವಿನಿಂ ಪೊರೆವುದು ದಿನ ದಿನಂಪ್ರತಿಯೊಳ ೩

ಗುರುಲಿಂಗಜಂಗಮದೇವ ಭಕ್ತರ್ಗನ-
ವರತ ಭಕ್ತಿಯೊಳ್ ಆರಾಧನೆ ತೃಪ್ತಿಮಾಡಿ
ನಿರುತದಿಂ ತನು ಮನ ಧನ ಮುಖ್ಯ ದ್ರವ್ಯವ
ಪರಿಣತೆಯಿಂ ಕೊಡುವುದೇ ಭಕ್ತಿಮಾರ್ಗ ೪

ಇನಿತಲ್ಲದನ್ಯ ಬಿನುಗು ಭವಿಜನದಂತೆ
ಜನನಸೂತಕ ಕರ್ಮವನು ಸಂಕಲ್ಪಿಸುತ
ಮನೆಯೊಳೈದನೆಯ ದಿನದೊಳ್ ನೀರಲ್ಲಿ ಗೂಳು ಸೋಂ-
ಕನು ಮೂವೇಳೆಯ ದೃಷ್ಟಿಪಾತರ ಬಾಲಗ್ರಹ ೫

ಸಕಲಸಂಕಲ್ಪ ಸೂತಕ ಜಡಜನ್ಮ ಪಾ-
ತಕ ಕರ್ಮವನು ಕಣಿ ಜೋಯಿಸಿಗ ಮುಖದಿಂ
ವಿಕಳತೆಯಿಂ ಕೇಳಿ ಮಾಡುವ ಹೀನ ನ-
ರಕಿಯುವ ಭವಿಯುವಗಾಚಾರವಿಲ್ಲ ೬

ಅವಗೆ ಗುರುಲಿಂಗಜಂಗಮ ತೀರ್ಥಪ್ರಸಾದ
ಅವಿರತವಿಲ್ಲ ಮತ್ತವ ಭಕ್ತನಲ್ಲ
ರವಿಚಂದ್ರರುಳ್ಳನ್ನಬರ ನರಕದೊಳು ಬೀ-
ಳುವ ಪ್ರಾಪ್ತಿಯೆಂದಾದ್ಯರ ವಚನ ಸಾರುವುದು ೭

ಗುರುಕರಜಾತಂಗೆ ಲಿಂಗಾರ್ಚಕಂಗೆ ಶ್ರೀ
ಚರಲಿಂಗ ಭಜಕಂಗೆ ತೀರ್ಥಸೇವಿತಗೆ
ಕರುಣಪ್ರಸಾದ ಭೋಗಿಗೆ ದೇವಭಕ್ತರ್ಗ-
ತ್ಯಾರು ಪಂಚಸೂತಕಮೆಂದೆಂದಿಗಿಲ್ಲ ೮

ಕರಕಂಜಪೀಠದೊಳ್ ಮೆರೆವ ಪ್ರಾಣೇಶ ಮದ್-
ಗುರುಚೆನ್ನವೀರನ ಪದ ಸೇವೆಯೊಡನೆ
ಸ್ಥಿರವಾಗಿ ಕರುಣದೊಳ್ ಬಾಳುವ ಸದ್‌ಭಕ್ತ
ಶರಣರೆ ಇಹಪರದೊಳು ಪೂಜ್ಯರಾವಾಗಲು ೯

## ೫೧ ನೋಡಿರಮ್ಮ ಮೈಲಾರಲಿಂಗನ ಜಾತ್ರೆಯಾಗುತಿದೆ

ನೋಡಿರಮ್ಮ ಮೈಲಾರಲಿಂಗನ ಜಾತ್ರೆಯಾಗುತಿದೆ
ನಾಡಜನರಿಗೆ ತಿಳಿಯದು ಇದರ ಗೋಪ್ಯ ಬೇರಿದೆ ॥ ಪಲ್ಲವಿ ॥

ಧರೆಯಾಕಾಶಕೆ ಮರ ಸೋಂಕದ ಘನತೇರು ಕಾಣುತಿದೆ
ಪರಕಿಸಿ ನೋಡಲು ನವನೆನೆಗಳ ಕೀಲೊಂದು ಕಾಣುತಿದೆ
ಹುರಿಗೂಡಿದ ಮಣಿಹತ್ತರಿಂದ ಬಿಗಿದೊಪ್ಪಿ ತೋರುತಿದೆ
ಗೊರವಮಂಡಲದತ್ತ ನೋಡಲುರೆ ಕಳಸವೆಸೆಯುತಿದೆ ೧

ಮತ್ತೆ ದ್ವಿಶತ ಷೋಡಶಪಟದ ವಿಚಿತ್ರಕಾಣುತಿದೆ
ಸುತ್ತಿ ನೋಡಲೊಂಭತ್ತು ಬಾಗಿಲದ ಕತ್ತಲಳಿಯುತಿದೆ
ಬತ್ತಿ ತೈಲಗಳಿಲ್ಲದೆ ಬೆಳಗುವ ಜ್ಯೋತಿ ಕಾಣುತಿದೆ
ಕರ್ತು ನೀಲ್ಗಿರಿ ಲಿಂಗಸಹಿತ ರಥ ತಾನೆ ಸಾಗುತಿದೆ ೨

ಮುಂದಣ ದಿಕ್ಕಿಲಿ ನಂದಿನಾಮದ ಬೆಟ್ಟ ಒಪ್ಪುತಿದೆ
ಚೆಂದಚೆಂದದಿ ಸಾಲುದೀವಿಗೆ ಮೇಲು ಕಾಣುತಿದೆ
ದುಂದುಭಿ ನಗಾರಿ ಕಹಳೆ ಗಂಟೆಯು ಬಹುನಾದ ಕೇಳುತಿದೆ
ಇಂದು ಮಲಾಸುರ ದೈತ್ಯನ ಕೊಂದಾನಂದ ತೋರುತಿದೆ ೩

ಅಷ್ಟವರಣದ ಕುದುರೆಗೆ ಹಲ್ಲಣವೈದು ಕಾಣುತಿದೆ
ಕಷ್ಟಜೀವರು ನಡೆವ ಮಾರ್ಗವ ಬಿಟ್ಟು ಚಲಿಸುತಿದೆ
ಮೆಟ್ಟಿ ಹಾರಲು ಶತಸೋಪಾನ ನವಮಿಕ್ಕು ನಿಲ್ಲುತಿದೆ
ದಿಟ್ಟ ನೀಲ್ಗಿರಿ ರಾಹುತನಿಗೆ ಮೈಗೊಟ್ಟು ಮೆರೆಯುತಿದೆ ೪

ಹಿರಿಯ ಗುಡ್ಡದ ಮಧ್ಯದೊಳೊಂದಾಶ್ರಯು ಕಾಣುತಿದೆ
ಅರಿತ ಮಹಿಮರಿಗಾರು ವರ್ಣದ ವೃಕ್ಷ ತೋರುತಿವೆ
ಸ್ಮರಿಸಿ ನೋಡಲು ಮೂರು ಬಣ್ಣದ ಎಲೆಗಳುಲಿಯುತಿವೆ
ಮರೆಯ ಮಾಜಲಕಿನ್ನು ಕೇಳು ಕರಿಯಾಲವೆನಿಸುತಿವೆ ೫

ಗಂಧ ಪರಿಮಳದಂಗಡಿ ಸಾಲೊಂದು ಕಾಣುತಿದೆ
ಒಂದು ಕಡೆಯಲಿ ಅರವಟಿಗೆ ಅನ್ನಛತ್ರ ಒಪ್ಪುತಿದೆ
ಒಂದು ದಿಕ್ಕಿಲಿ ಮುತ್ತು ನವರತ್ನಗಳಿಂದೆಸೆವುತಿದೆ
ಒಂದು ದಿಶೆಯಲಿ ಸುಸಂಗೀತ ವಾದ್ಯಗಳಿಂದ ಮೆರೆವುತಿದೆ ೬

ಭವಗರ್ವರದನುಕೂಲಕೆ ವಗ್ಗರನೇಕರಲ್ಲಿಹರೆ
ತವೆ ಏಳ್‌ಕೋಟಿಗೆ ಮಿಗೆ ಮಂತ್ರವ ಸನಗೊರವರೊಪ್ಪುತಾರೆ
ಶಿವನಿಂದಕರೆದೆ ದಲ್ಲಣ ಕಡುಗಲಿ ವೀರರೆಸೆವುತಾರೆ
ಇವರೊಳಧಿಕ ಗುರು ಚೆನ್ನವೀರ ಮೈಲಾರಲಿಂಗವಹರೆ ೭

## ೫೨ ನಂಬುವುದೆಮ್ಮ ಮೈಲಾರಲಿಂಗದ ಸೊಲ್ಲ ಕೇಳಿ ಕೇಳಿ

### ಕಾರಣೀಕ ಪದ

ನಂಬುವುದೆಮ್ಮ ಮೈಲಾರಲಿಂಗದ ಸೊಲ್ಲ ಕೇಳಿ ಕೇಳಿ
ಡಂಭಕ ಮಾತಲ್ಲ ಕಾರಣಿಕನೆ ಬಲ್ಲ ಕೇಳಿ ಕೇಳಿ ॥ ಪಲ್ಲವಿ ॥

ಪರತತ್ತ್ವದಿರವೆಮ್ಮ ಗೊರವನ ಶೌರ್ಯವ ಕೇಳಿ ಕೇಳಿ
ನೆರೆಮೂರು ಲೋಕವನಿರದೆತ್ತಿ ತೂರುವ ಕೇಳಿ ಕೇಳಿ
ಹರಿಯಜರುದ್ರರುಗಳಿಗಧಿಕಾರವ ಕೇಳಿ ಕೇಳಿ
ಮುರಿದೊತ್ತಿ ಹರನ ಕೈಸೆರೆ ತಂದು ತೋರುವ । ಕೇಳಿ ಕೇಳಿ ೧

ಕರಿಯಾಲದೊಳಗೊಂದು ಮರುಜೇವಣಿ ಪುಟ್ಟಿ ಕೇಳಿ ಕೇಳಿ
ಕರದಲ್ಲಿ ಬರುತಿದೆ ಸುಪಥ ದಾರಿಯು ಮೆಟ್ಟಿ । ಕೇಳಿ ಕೇಳಿ
ನೆರೆ ನಂಬಿದವರಿಗೆ ವರ ಪರುಷದ ಗಟ್ಟಿ ಕೇಳಿ ಕೇಳಿ
ನಿರುಪಮರೈತಂದು ಗಮಿಸುವ ನಿಜಬಟ್ಟೆ ಕೇಳಿ ಕೇಳಿ ೨

ಮೂರು ಲೋಕದೊಳೆಮ್ಮ ಹೆಗ್ಗಯ್ಯ ಮಂತ್ರಿಯು ಕೇಳಿ ಕೇಳಿ
ಸಾರಿದುರ್ಗ ಇಲ್ಲದಂತಿಹ ಪರತಂತ್ರಿಯು ಕೇಳಿ ಕೇಳಿ
ಗಾರುಡ ಕುಟಿಲ ಕುಹಕದೊಳಭ್ಯಂತ್ರಿಯು ಕೇಳಿ ಕೇಳಿ
ಬೇರಿಟ್ಟು ಕಾಣದವರಿಗೆ ಸ್ವತಂತ್ರಿಯು ಕೇಳಿ ಕೇಳಿ ೩

ಮರ್ತ್ಯಲೋಕವೆ ವಗ್ಗರಣ್ಣ ತಂಗಿಯು ಕೂಡಿ ಕೇಳಿ ಕೇಳಿ
ಸತ್ಯ ಪುತ್ರನ ಪಡೆದರ್ಥಿಯಿಂ ಮುಖ ನೋಡಿ ಕೇಳಿ ಕೇಳಿ
ಹತ್ತಭಿಧಾನವನಿಟ್ಟು ಜೋಗಳ ಪಾಡಿ ಕೇಳಿ ಕೇಳಿ
ಕರ್ತೃ ಮೋಳ್ಗಿರಿಲಿಂಗವೆಂದೆತ್ತಿ ಮುದ್ದಾಡಿ ಕೇಳಿ ಕೇಳಿ ೪

ಹನ್ನೊಂದು ಹೆಡೆಯುಳ್ಳ ಪನ್ನಂಗಮಹಿಮೆಯ ಕೇಳಿ ಕೇಳಿ
ಪನ್ನಂಗ ಸೇವಿಸಿದಣ್ಣನೆಂದಿಗು ಸಾಯು ಕೇಳಿ ಕೇಳಿ
ತನ್ನಂಗ ತ್ರೈವಿಧ ಪನ್ನಂಗ ನಿಜಕಾಯು ಕೇಳಿ ಕೇಳಿ
ಚೆನ್ನ ಮೋಳ್ಗಿರಿ ಲಿಂಗದುನ್ನತದೊಲುಮೆಯ ಕೇಳಿ ಕೇಳಿ ೫

ಧವಳಾಂಗದವಳೊಬ್ಬಳನಘ ಮನ್ಮಥೆಯು ಕೇಳಿ ಕೇಳಿ
ಶಿವವಂಶಿಭೂತರಿಗಗಣಿತ ಪ್ರೀತೆಯು ಕೇಳಿ ಕೇಳಿ
ಭವವಿದೂರನ ಪೂಜಾ ಪ್ರಥಮ ಪ್ರಖ್ಯಾತೆಯು ಕೇಳಿ ಕೇಳಿ
ಅವಸಾನ ಕಾಲಕ್ಕೆ ಅವಳೆ ಸಂಗಾತಿಯು ಕೇಳಿ ಕೇಳಿ ೬

ಶರಣರಾಭರಣವಾಗಿಹಳೊಬ್ಬ ಬಾಲೆಯು ಕೇಳಿ ಕೇಳಿ
ಪರಿಕಿಸಲೀರೇಳು ಮುಖದ ಚಿಜ್ಜ್ವಾಲೆಯು ಕೇಳಿ ಕೇಳಿ
ಚರಣಸಖನನಾಮವೆರಸಿದ ಮಾಲೆಯು ಕೇಳಿ ಕೇಳಿ
ಉರಗಭೂಷಣನಂತೆ ಧರಿಸುವ ಲೀಲೆಯು ಕೇಳಿ ಕೇಳಿ ೭

ಪಂಚಾಂಗದವನೊಬ್ಬ ಪಾರುವ ಬರುತಾನೆ ಕೇಳಿ ಕೇಳಿ
ಸಂಚಿತವನು ಮೀರಿ ಸಾರುತ್ತೈತರುತಾನೆ ಕೇಳಿ ಕೇಳಿ
ವಂಚಿಸಿದವರಿಗೆ ದೂರನಾಗಿರುತಾನೆ ಕೇಳಿ ಕೇಳಿ
ಹಿಂಚುಮುಂಚೆಡಬಲ ಮಧ್ಯಸ್ವಸ್ಥಿರ ತಾನೆ ಕೇಳಿ ಕೇಳಿ ೮

ಕಾರಣಿಕವ ನಮ್ಮ ಗೊರವಯ್ಯ ದಯವಿಟ್ಟು ಕೇಳಿ ಕೇಳಿ
ಸಾರುತ ಬರುವ ನೋಡಿತರ ಮಾರ್ಗವ ಬಿಟ್ಟು ಕೇಳಿ ಕೇಳಿ
ಮೀರಿದಾಚರಣೆಯುಳ್ಳವರೆಲ್ಲ ಕಿವಿಗೊಟ್ಟು ಕೇಳಿ ಕೇಳಿ
ಧಾರುಣಿಯ ಜನರಿಗೆ ತಿಳಿಯಬಾರದ ಗುಟ್ಟು ಕೇಳಿ ಕೇಳಿ ೯

ಅರಗಿನ ಪುರಕೆ ಬಾಳುರಿ ಹತ್ತಿ ಸುಡುತಿದೆ ಕೇಳಿ ಕೇಳಿ
ಅರಗು ಕರಗಗದುರಿ ನಂದದಲಿರುತಿದೆ ಕೇಳಿ ಕೇಳಿ
ಕರಿಯಾಲದೊಡೆಯನ ಪುರವನು ಪೊಗಲಾಗ
ಅರಗು ಕರಗಿತುರಿ ನಂದಿತು ಕಡುಬೇಗ ಕೇಳಿ ಕೇಳಿ ೧೦

ನೀರ ಮಧ್ಯದಿ ಕಿಚ್ಚು ಊರೆಲ್ಲ ಸುಡುತಿದೆ ಕೇಳಿ ಕೇಳಿ
ಮೀರಿ ತಾ ಮೊದಲಿರ್ಪ ನೀರಟ್ಟಿ ಸುಡುತಿದೆ ಕೇಳಿ ಕೇಳಿ
ಊರು ನೀರನು ಸುಟ್ಟು ಮೂರು ಬೊಟ್ಟಿಡುತಿದೆ ಕೇಳಿ ಕೇಳಿ
ಮೂರು ಲೋಕದ ಪ್ರಜೆ ನೋಡಿ ಕಂಗೆಡುತಿದೆ ಕೇಳಿ ಕೇಳಿ ೧೧

ಹತ್ತು ನಡೆವದಾರಿ ಗೊತ್ತಿನೊಳಗೆ ಒಂದು ಕೇಳಿ ಕೇಳಿ
ಸತ್ತ ಶವಕೆ ಜಗ ಮುತ್ತಿ ಮೋಹಿಪುದೆಂದು ಕೇಳಿ ಕೇಳಿ
ಕರ್ತೃ ನೀಲ್ಗಿರಿಲಿಂಗವರ್ತಿಯಿಂದ್ಯೆತಂದು ಕೇಳಿ ಕೇಳಿ
ಸತ್ತವನಿಗೆ ಪ್ರಾಣವಿತ್ತ ಸುದ್ದಿಯನಿಂದು ಕೇಳಿ ಕೇಳಿ ೧೨

ಮಡದಿ ಒಬ್ಬಳು ನೀರ ಕೊಡಹೊತ್ತು ಬರುತಾಳೆ ಕೇಳಿ ಕೇಳಿ
ಕೊಡನ ಒಡೆದು ನೀರ ಬಿಡದೆ ಹೊತ್ತು ತರುತಾಳೆ ಕೇಳಿ ಕೇಳಿ
ದೃಢದಿಂದ ಸುತ್ತೇಳುಕಡಲ ಬತ್ತಿಸುತಾಳೆ ಕೇಳಿ ಕೇಳಿ
ಪೊಡವಿ ಈರೇಳಕ್ಕೆ ಒಡತಿಯೆನೆನಿಸುತಾಳೆ ಕೇಳಿ ಕೇಳಿ ೧೩

ಕೋಣನ ಕೊಂಬಿಲಿ ನೇಣು ಕಾಣಿಸುತಿದೆ ಕೇಳಿ ಕೇಳಿ
ನೇಣುವಿನ ಬಲೆಯೊಳು ಮೂಲೋಕವಡಗಿದೆ ಕೇಳಿ ಕೇಳಿ
ನೇಣುಕೋಡುಗಳ ಕಿತ್ತೊಗೆಯಲು ಕಡು ಬೇಗ ಕೇಳಿ ಕೇಳಿ
ಕೋಣನಳಿದು ಮುಕ್ತಿತಾಣವೆನಿಸಿತಿದೆ ಕೇಳಿ ಕೇಳಿ ೧೪

ಆನೆಯನೇರಿ ಮಾವುತನೊಬ್ಬ ಬರುತಾನೆ ಕೇಳಿ ಕೇಳಿ
ಆನೆಮಾವುತನೊಂದು ಆಡು ನುಂಗುತಲಿದೆ ಕೇಳಿ ಕೇಳಿ
ಆನೆಮಾವುತ ಸಹ ಭಕ್ಷಿಸದಾಡನು ಕೇಳಿ ಕೇಳಿ
ಏನು ಹೇಳಲಿ ಬೆಕ್ಕು ನುಂಗಿದ ಕೇಡನು ಕೇಳಿ ಕೇಳಿ ೧೫

ಕತ್ತಲೆಪುರವನು ತೊತ್ತೊಬ್ಬಳಾಳ್ವಳು ಕೇಳಿ ಕೇಳಿ
ತಥ್ಯಮಿಥ್ಯವ ಮಾಡಿ ಪತ್ರವ ಬರೆವಳು ಕೇಳಿ ಕೇಳಿ
ತೊತ್ತಿನ ಮೊಲೆಮೂಗ ಕೆತ್ತಿ ಬಿಸುಡಲಾಗ ಕೇಳಿ ಕೇಳಿ
ತಥ್ಯಮಿಥ್ಯದ ಕತ್ತಲಳಿದಿತು ಕಡುಬೇಗ ಕೇಳಿ ಕೇಳಿ ೧೬

ಕರವೂರ ದೊರೆಯೊಬ್ಬ ಧರೆಮೂರನಾಳ್ವನು ಕೇಳಿ ಕೇಳಿ
ಕರಕರದೊಳುಬಂದು ತಿರಿದುಂಡು ಬಾಳ್ವನು ಕೇಳಿ ಕೇಳಿ
ನೆರೆನಂಬಿದವರ ಭವದ ಬೇರ ಕೀಳ್ವನು ಕೇಳಿ ಕೇಳಿ
ಹರಣವನಳಿದು ಶನ್ನಿರವನು ಪೇಳ್ವನು ಕೇಳಿ ಕೇಳಿ ೧೭

ಕರಿಯಬಣ್ಣದ ಪಕ್ಷಿ ಗರಿಯು ಗಾಳಿಯು ಕೂಡಿ ಕೇಳಿ ಕೇಳಿ
ಬರಿದೆ ಮೂಲೋಕವ ಚರಿಸಾಡುತಿದೆ ನೋಡಿ ಕೇಳಿ ಕೇಳಿ
ಕರಿಯಬಣ್ಣದ ಪಕ್ಷಿ ಗರಿಯ ಕಿತ್ತೊಗೆಯಲು ಕೇಳಿ ಕೇಳಿ
ನೆರೆ ಮೂರು ಲೋಕವು ಸ್ಥಿರ ಬಾಳುತಿರೆ ಮೇಲು ಕೇಳಿ ಕೇಳಿ ೧೮

ಕುಲವಂತರೊಳಗೊಬ್ಬ ತಲೆಯಿಲ್ಲದಿರುತಾನೆ ಕೇಳಿ ಕೇಳಿ
ಛಲದಿಂದ ತ್ರೈವಿಧ ಮಲವ ಭುಂಜಿಸುತಾನೆ ಕೇಳಿ ಕೇಳಿ
ಮಲವ ಭುಂಜಿಸುವಂತ ಛಲವಳಿದ ಮೇಲೆ ಕೇಳಿ ಕೇಳಿ
ಕುಲಗೆಟ್ಟು ತಲೆಬಂದು ಸುಲಭದೋರುವ ಲೀಲೆ ಕೇಳಿ ಕೇಳಿ ೧೯

ಆರುಬಣ್ಣದ ಪಕ್ಷಿ ಹಾರಿತು ಗಗನಕೆ ಕೇಳಿ ಕೇಳಿ
ಮೀರಿತು ನೋಡಿನ್ನು ಈರೇಳುಭುವನಕೆ ಕೇಳಿ ಕೇಳಿ
ತೋರಿತು ತಲೆಯ ತನ್ನಿರವಿನ ಸುಮನಕೆ ಕೇಳಿ ಕೇಳಿ
ಹಾರಿತು ಶರಣರ ಹೃದಯ ಚಿದ್‌ಭುವನಕೆ ಕೇಳಿ ಕೇಳಿ ೨೦

ಪರತತ್ವದಿರವಿನ ಕುರುಹ ಪೇಳಿದ ಸೊಲ್ಲು ಕೇಳಿ ಕೇಳಿ
ಅರಿತ ಮಹಿಮರಿಗೆ ಚಿನಿಪಾಲು ಸವಿಬೆಲ್ಲ ಕೇಳಿ ಕೇಳಿ
ಅರಿಯದ ಜನರಿಗೆ ತಿಳಿಯಲಿಕ್ಕಳವಲ್ಲ ಕೇಳಿ ಕೇಳಿ
ನಿರುಪಮಧ್ವಯ ಚೆನ್ನವೀರ ಮದ್ಗುರು ಬಲ್ಲ ಕೇಳಿ ಕೇಳಿ ೨೧

## ೫೩ ಕಣಿಯ ಕೇಳಿರಣ್ಣಗಳಿರಾ । ಕಣಿಯ ಕೇಳಿರೋ

### ಕಾಲಜ್ಞಾನ ಪದ

ಕಣಿಯ ಕೇಳಿರಣ್ಣಗಳಿರಾ । ಕಣಿಯ ಕೇಳಿರೋ । ಗುರುವಿ-
ನಣುಗ ಧರೆಯೊಳೊರೆಯ ಬಂದ । ಕಣಿಯ ಕೇಳಿರೋ ॥ ಪಲ್ಲವಿ ॥

ಧರೆಗೆ ಹಿರಿಯಭೂತನೊಬ್ಬ । ಕಣಿಯ ಕೇಳಿರೋ । ಅವಗೆ
ಎರಡು ಕೋಡು ಮೂಡುತಿವೆ । ಕಣಿಯ ಕೇಳಿರೋ
ನಿರುತ ಪರಮ ಶಿವನು । ಅವನು ಕಣಿಯ ಕೇಳಿರೋ । ಕೈಯ್ಯ
ಸೆರೆಯ ಸಿಕ್ಕು ಹೋಗುತಾನೆ । ಕಣಿಯ ಕೇಳಿರೋ ೧

ಕಂಡಮಂಡಲೀಕನೊಬ್ಬ । ಕಣಿಯ ಕೇಳಿರೋ । ಭೂ-
ಮಂಡಲವನು ಕೆಡಿಸುತಾನೆ । ಕಣಿಯ ಕೇಳಿರೋ
ಭಂಡಭಜನೆಗಳನು ಬಿಡಿಸಿ । ಕಣಿಯ ಕೇಳಿರೋ । ಜಗದ
ಗಂಡನೆನಿಸಿಕೊಂಬುತಾನೆ । ಕಣಿಯ ಕೇಳಿರೋ ೨

ಬಿಳಿಯ ತಲೆಯ ಹಿಡಿದುಕೊಂಡು । ಕಣಿಯ ಕೇಳಿರೋ । ಜೀವ-
ಬಳಿದು ಜಗದಿ ಸುಳಿವನೊಬ್ಬ । ಕಣಿಯ ಕೇಳಿರೋ
ಇಳೆಯೊಳವನ ಹೊಲಬುದಪ್ಪಿ । ಕಣಿಯ ಕೇಳಿರೋ ಲೋಕ-
ವಳಿದು ಹೋಗುತಿದೆ । ಕಣಿಯ ಕೇಳಿರೋ ೩

ಮತ್ತೆ ಕಲಿಯ ಕಟ್ಟಳೆಯನು । ಕಣಿಯ ಕೇಳಿರೋ । ಮೋಹಿ-
ಸುತ್ತ ಅಣ್ಣತಂಗಿ ಕೂಡಿ । ಕಣಿಯ ಕೇಳಿರೋ
ಹತ್ತುಮಕ್ಕಳನ್ನು ಹಡೆದು । ಕಣಿಯ ಕೇಳಿರೋ । ಅವರು
ಸತ್ಯವಂತರೆನಿಸುತಾರೆ । ಕಣಿಯ ಕೇಳಿರೋ ೪

ತಂದೆಮಕ್ಕಳಿಬ್ಬರಿಂದ । ಕಣಿಯ ಕೇಳಿರೋ । ಹುಟ್ಟಿ
ಬಂದ ತಾಯಿಭೋಗಿಸುವರು । ಕಣಿಯ ಕೇಳಿರೋ
ಕುಂದುಕೊರತೆಗಳನು ನೀಗಿ । ಕಣಿಯ ಕೇಳಿರೋ । ಅವರು
ಸಂದ ಶರಣನೆನಿಸುತಾರೆ । ಕಣಿಯ ಕೇಳಿರೋ ೫

ಶ್ವೇತಭೂತಿಯಂಗ ಫಣಿಯ । ಕಣಿಯ ಕೇಳಿರೋ । ತಾನು
ನೋತು ಮನೆಯಮಾಡಿಕೊಂಡು । ಕಣಿಯ ಕೇಳಿರೋ
ನೀತಿದಪ್ಪಿ ನಡೆವರನ್ನು । ಕಣಿಯ ಕೇಳಿರೋ । ಭವದ
ಘಾತಿಯೊಳಗೆ ಕೆಡಹುತಿಹುದು ಕಣಿಯ ಕೇಳಿರೋ ೬

ತಿಣಿಯೊಳೊಗೆದು ಶರಣರಡಿಗೆ । ಕಣಿಯ ಕೇಳಿರೋ । ಮಣಿದು
ಮಣಿಯ ಪೆಸರಪಡೆದಳಬಲೆ । ಕಣಿಯ ಕೇಳಿರೋ
ಅಣಿಮ ಗರಿಮ ಮಹಿಮೆಯಿಂದ । ಕಣಿಯ ಕೇಳಿರೋ । ಜಗವ
ತೃಣವಮಾಡಿ ದಹಿಸುತಾಳೆ । ಕಣಿಯ ಕೇಳಿರೋ ೭

ಆರುವರ್ಣವುಳ್ಳ ಪಕ್ಷಿ । ಕಣಿಯ ಕೇಳಿರೋ । ಮುಂದೆ
ಹಾರುತ್ತೈತಿ ಗಗನದತ್ತ । ಕಣಿಯ ಕೇಳಿರೋ
ಮೀರಿ ಶರಣಹೃದಯ ಗೂಡ್ಡ । ಕಣಿಯ ಕೇಳಿರೋ । ತಾನು
ಸೇರಿ ಹಾರದಿನ್ನು ಮತ್ತೆ । ಕಣಿಯ ಕೇಳಿರೋ ೮

ಸೃಷ್ಟಿಯೊಳಗೆ ಜನಿಸಿದವರು । ಕಣಿಯ ಕೇಳಿರೋ । ಮುಂದೆ
ಅಷ್ಟು ಇಷ್ಟು ಪಡೆಯಬಹುದು । ಕಣಿಯ ಕೇಳಿರೋ
ಇಷ್ಟಸಿದ್ಧಿ ಇಲ್ಲದವಗೆ । ಕಣಿಯ ಕೇಳಿರೋ । ಮುಂದೆ
ಕಷ್ಟ ಕರ್ಮ ಭಯಗಳುಂಟು । ಕಣಿಯ ಕೇಳಿರೋ ೯

ಎಮ್ಮ ಪುತ್ರಗೆ ಮಗನು ಒಬ್ಬ । ಕಣಿಯ ಕೇಳಿರೋ । ಅವಗೆ
ಧರ್ಮಯೆಂಬ ನಾಮವುಂಟು । ಕಣಿಯ ಕೇಳಿರೋ
ಕರ್ಮಜಗವ ಕೊಲ್ಲುತಾನೆ । ಕಣಿಯ ಕೇಳಿರೋ । ಹೇಳ-
ಲಮ್ಮ ಅವನ ಬಾಧೆಗಳನು । ಕಣಿಯ ಕೇಳಿರೋ ೧೦

ಪೂಷರಂಕ ಪೆಸರಿನವರು । ಕಣಿಯ ಕೇಳಿರೋ । ತಾನು
ಮೋಸದಿಂದ ಮರೆಯಮಾಡಿ । ಕಣಿಯ ಕೇಳಿರೋ
ಆನೆಯೆಂಬ ಗುಟಕನಿಕ್ಕಿ । ಕಣಿಯ ಕೇಳಿರೋ । ಬಲೆಯ
ಬೀಸಿ ಜಗವ ಕೊಲ್ಲುತಾನೆ । ಕಣಿಯ ಕೇಳಿರೋ ೧೧

ತಲೆಯು ಇಲ್ಲದಂಗನೆಯಳು । ಕಣಿಯ ಕೇಳಿರೋ । ತಾನು
ಹಲವು ಜಗವನಾಳುತಾಳೆ । ಕಣಿಯ ಕೇಳಿರೋ
ಹುಲಿಯ ತಲೆಯ ಧರಿಸಿಕೊಂಡು । ಕಣಿಯ ಕೇಳಿರೋ । ಜಗವ
ಸುಲಭದಿಂದ ನುಂಗುತಾಳೆ । ಕಣಿಯ ಕೇಳಿರೋ ೧೨

ಶತ್ರು ತಮಗೆ ಮಾರುಮಲೆತು । ಕಣಿಯ ಕೇಳಿರೋ । ನಿಂದ
ಚಿತ್ರಕಲ್ಲದುರ್ಗ ತಾನು । ಕಣಿಯ ಕೇಳಿರೋ
ಮಿತ್ರರಾಜನು ತಾ ಬರಲು । ಕಣಿಯ ಕೇಳಿರೋ । ನೋಟ
ಮಾತ್ರದಲ್ಲಿ ಹೋಗುತದೆ । ಕಣಿಯ ಕೇಳಿರೋ ೧೩

ಹುಟ್ಟುಗುರುಡರಾಜನೊಬ್ಬ । ಕಣಿಯ ಕೇಳಿರೋ । ಅವಗೆ
ಪಟ್ಟಗಟ್ಟುತ್ತೈತಿ ಮುಂದೆ । ಕಣಿಯ ಕೇಳಿರೋ
ಅಟ್ಟುವೆಂಬ ಕಾಲದಲ್ಲಿ । ಕಣಿಯ ಕೇಳಿರೋ । ಜಗವ
ಬಿಟ್ಟು ಓಡಿ ಹೋಗುತ್ತೈತಿ । ಕಣಿಯ ಕೇಳಿರೋ ೧೪

ಅಂತಃಪುರದ ಒಡೆಯನೊಬ್ಬ । ಕಣಿಯ ಕೇಳಿರೋ । ತಾನು
ಕುಂತಳಾಂಗನೆನೆಸುತಾನೆ । ಕಣಿಯ ಕೇಳಿರೋ
ಕುಂತು ನಿಂತವರಿಗೆ ಮರಣ । ಕಣಿಯ ಕೇಳಿರೋ । ಚರಿಸು-
ತಿಂತು ಜಗವನಾಳುತಾನೆ । ಕಣಿಯ ಕೇಳಿರೋ ೧೫

ಹತ್ತು ನಡೆವ ದಾರಿಯೊಳಗೆ । ಕಣಿಯ ಕೇಳಿರೋ । ಒಂದು
ಸತ್ತ ಹೆಣದ ಸುಳಿವುಕಂಡು । ಕಣಿಯ ಕೇಳಿರೋ
ಮುತ್ತಿ ಅಳುವ ಬಳಗ ಬಹಳ । ಕಣಿಯ ಕೇಳಿರೋ । ಅವರು
ಸತ್ತ ಹೆಣನು ಬದುಕುತ್ತೈತಿ । ಕಣಿಯ ಕೇಳಿರೋ ೧೬

ನವಖಂಡ ಪೃಥ್ವಿಯನ್ನು । ಕಣಿಯ ಕೇಳಿರೋ । ಒಬ್ಬ
ಯುವತಿ ಆಳುತಾಳೆ ಮುಂದೆ । ಕಣಿಯ ಕೇಳಿರೋ
ಅವಳ ಕಾಲಮಹಿಮೆಯಿಂದ । ಕಣಿಯ ಕೇಳಿರೋ । ಪಾಪ
ನಿವಹ ಹೆಚ್ಚುತ್ತೈತಿ ಮುಂದೆ । ಕಣಿಯ ಕೇಳಿರೋ ೧೭

ಒಂಟಿಮುಖದ ದೇಹದವನು । ಕಣಿಯ ಕೇಳಿರೋ । ಒಬ್ಬ
ಎಂಟು ಗಜವನೇರುತಾನೆ । ಕಣಿಯ ಕೇಳಿರೋ
ಎಂಟು ಏಳು ದೇಶದಲ್ಲಿ । ಕಣಿಯ ಕೇಳಿರೋ । ಬಹಳ
ತುಂಟನೆನಿಸಿಕೊಂಬುತಾನೆ । ಕಣಿಯ ಕೇಳಿರೋ ೧೮

ಕಾಳುದೇಹ ಕೀಳದಂತೆ । ಕಣಿಯ ಕೇಳಿರೋ । ಅವಳು
ಬಾಳುಗೆಟ್ಟ ಊರ ಸೂಳೆ । ಕಣಿಯ ಕೇಳಿರೋ
ಏಳುಮಲೆಯ ಹಾಲನೂ । ಕಣಿಯ ಕೇಳಿರೋ । ಮುಂದೆ
ಕೋಳುಕೊಂಬುತಾಳೆ ಜಗವ । ಕಣಿಯ ಕೇಳಿರೋ ೧೯

ಆರುವೈರಿವರ್ಗದವರು । ಕಣಿಯ ಕೇಳಿರೋ । ಮುಂದೆ
ಸೂರೆಗೊಂಬುತಾರೆ ಜಗವ । ಕಣಿಯ ಕೇಳಿರೋ
ಮೂರುಲೋಕದೊಳಗೆ ನೋಡೆ । ಕಣಿಯ ಕೇಳಿರೋ । ಅವರ
ಸಾರಿ ಗೆಲುವರಾರ ಕಾಣೆ । ಕಣಿಯ ಕೇಳಿರೋ ೨೦

ಅಂಚೆಗಮನೆ ಗಂಡನಿಂದೆ । ಕಣಿಯ ಕೇಳಿರೊ । ತಾನು
ಮುಂಚೆಹುಟ್ಟಿ ಮೂರುಜಗವ । ಕಣಿಯ ಕೇಳಿರೋ
ಪಂಚಲಿಖಿತ ವಿಧಿಗಳಿಂದ । ಕಣಿಯ ಕೇಳಿರೋ । ಭವದ
ಸಂಚಿನೊಳಗೆ ಕೆಡಹುತಿಹಳು । ಕಣಿಯ ಕೇಳಿರೋ ೨೧

ಧರಣಿಯಾಣ್ಮ ಹಿರಿಯನೊಬ್ಬ । ಕಣಿಯು ಕೇಳಿರೋ । ತಾನು
ಕರಣಮಥನ ಕರ್ಕಶದೊಳು । ಕಣಿಯು ಕೇಳಿರೋ
ತರಣಿಶಶಿಗಳುಳ್ಳನ್ನಕ್ಕ । ಕಣಿಯು ಕೇಳಿರೋ । ತನ್ನ
ಸ್ಮರಣೆದಪ್ಪಿ ಹೋಗುತಾನೆ । ಕಣಿಯು ಕೇಳಿರೋ ೨೨

ಮೂರು ಮುಖದ ನಾರಿ ತಾನು । ಕಣಿಯು ಕೇಳಿರೋ । ಮುಂದೆ
ಮೂರುಜಗದ ಜೀವರುಗಳ । ಕಣಿಯು ಕೇಳಿರೋ
ಘೋರತರ ವಿಕಾರರಸವ । ಕಣಿಯು ಕೇಳಿರೋ । ತನ್ನ
ಮೂರುಮುಖದಿ ಹೀರುತಾಳೆ । ಕಣಿಯು ಕೇಳಿರೋ ೨೩

ಮೃಗಧರಾರ್ಕರಿರ್ವರಿಂದ । ಕಣಿಯು ಕೇಳಿರೋ । ಮೂರು
ಜಗದಕೃತ್ಯ ನಡವುತ್ತೈತಿ । ಕಣಿಯು ಕೇಳಿರೋ
ಹಗಲು ಇರಳು ಎರಡರೊಳಗೆ । ಕಣಿಯು ಕೇಳಿರೋ । ನಾಲ್ಕು
ಯುಗವು ಸತ್ತು ಹುಟ್ಟುತ್ತೈತಿ । ಕಣಿಯು ಕೇಳಿರೋ ೨೪

ತಥ್ಯಪಾರಮಾರ್ಥ ಮಿಥ್ಯ । ಕಣಿಯು ಕೇಳಿರೋ । ಎಂದು
ಮಿಥ್ಯಭೋಗ ತಥ್ಯವೆಂದು । ಕಣಿಯು ಕೇಳಿರೋ
ತೊತ್ತ ಓಲೆ-ಕಂಠಪಿಡಿದು । ಕಣಿಯು ಕೇಳಿರೋ । ಈ
ಪೃಥ್ವಿಯಲ್ಲಿ ಲಿಖಿಸುತಾಳೆ । ಕಣಿಯು ಕೇಳಿರೋ ೨೫

ಖಂಡಭಂಡಸೆಟ್ಟಿಕಾರ್ತಿ । ಕಣಿಯು ಕೇಳಿರೋ । ಅವಳ
ಗಂಡಗೆರಡು ನಯನವಿಲ್ಲ । ಕಣಿಯು ಕೇಳಿರೋ
ಗಂಡಹೆಂಡರಿಬ್ಬರಿಂದ । ಕಣಿಯು ಕೇಳಿರೋ । ಬ್ರ-
ಹ್ಮಾಂಡ ಸರಕು ಮಾರುತಾರೆ । ಕಣಿಯು ಕೇಳಿರೋ ೨೬

ಕಾರಣಿಕ ಪುರುಷರೆಲ್ಲ । ಕಣಿಯು ಕೇಳಿರೋ । ಸುವಿ-
ಚಾರಿಸಲ್ಕೆ ಮಧುರ ಬೆಲ್ಲ । ಕಣಿಯು ಕೇಳಿರೋ
ಆರು ಅರಿಯದಂತೆ ಸೊಲ್ಲ । ಕಣಿಯು ಕೇಳಿರೋ । ಚೆನ್ನ-
ವೀರ ದೇಶಿಕೇಂದ್ರ ಬಲ್ಲ । ಕಣಿಯು ಕೇಳಿರೋ ೨೭

## ೫೪ ಸಟಿಯನಾಡುವನೆ ಸುಜ್ಞಾನಿ

ರಾಗ : ಅಸಾವೇರಿ

ಸಟಿಯನಾಡುವನೆ ಸುಜ್ಞಾನಿ । ಇದು
ದಿಟವೆಂದು ತಿಳಿಯಬಲ್ಲವನೆ ಅಜ್ಞಾನಿ ॥ ಪಲ್ಲವಿ ॥

ಕೋಡಗನಿಗೆ ಕೋಡು ಮೂಡಿ । ತನ್ನ
ಕೋಡಿನಿಂದಲಿ ಮೂರು ಜಗವನಲ್ಲಾಡಿ
ಆಡುಕೋಡಗ ತಲೆಗೂಡಿ । ನ್ಯಾಯ-
ಮಾಡಿದಾಕ್ಷಣ ಮೋಕ್ಷವಾದಿತು ನೋಡಿ ೧

ಒಂಟೆ ಮೂರೊಂಟೆಯಾಗಿಹುದು । ಹೃದ್-
ಗಂಟು ಲಕ್ಷ್ಮಿಯೊಳೊಂಟಿ ಮನೆಮಾಡಿಹುದು
ಎಂಟಾರು ಲೋಕವಾಳುವುದು । ಇಂಥಾ
ಒಂಟೆಯು ಸೊಕ್ಕನು ಮಂಟಬೆಕ್ಕು ನುಂಗಿಹುದು ೨

ಕರಿಯೆಂಟು ನರಿ ನುಂಗಿತಲ್ಲ । ಸಣ್ಣ-
ಇರಿವೆ ನುಂಗಿತು ಮೂರು ಲೋಕವನೆಲ್ಲ
ಅರಿಯದವರಿಗಳವಲ್ಲ । ಎಮ್ಮ
ಗುರು ಚೆನ್ನ ವೀರೇಶ ಮಹೇಳ ಬಲ್ಲ ೩

## ೫೫ ಅಣ್ಣ ನೀ ಕೇಳೋ ಪಂಚಾಂಗವ

ರಾಗ : ಭೈರವಿ

ಅಣ್ಣಾ ನೀ ಕೇಳೋ ಪಂಚಾಂಗವ । ಕೇಳಿ-
ದಣ್ಣಗಳೆಲ್ಲರ ಭಂಗವ ॥ ಪಲ್ಲವಿ

ದ್ವಾರಾವತಿಯೊಳು ಶ್ರೀಕೃಷ್ಣನು । ಶುಭ
ವಾರ ಸುಲಗ್ನವ ಬೆಸಗೊಂಡು
ಧಾರೆಯೆರಿಸಿಕೊಂಡ ಸ್ತ್ರೀಯರು । ಪದಿ-
ನಾರುಸಾಪಿರಕಾದ ಭಂಗವ ೧

ರಾಮುಸೀತೆಯರಿಗೆ ಲಗ್ನವ । ತಮ್ಮ
ಸ್ವಾಮಿವಶಿಷ್ಠ ಮಾಡಿರಲಾಗಿ
ಆ ಮಹಾ ಸೀತೆಯ ರಾವಣನು । ಒಯ್ದು
ರಾಮನ ವನವಾಸ ಭಂಗವ ೨

ವರಶುಭವೇಳೆಯ ಬೆಸಗೊಂಡು । ನಿತ್ಯ
ಬರುವ ಬ್ರಹ್ಮನು ಶಿವಸಭೆಯೊಳಗೆ
ಶಿರವೈದರೊಳು ನಡುದಲೆಯನು । ಪುರ
ಹರನಿಂದ ಕಳಕೊಂಡ ಭಂಗವ ೩

ಸರಸ್ವತಿದೇವಿ ಜೋಯಿಸರಿಂದ । ಅನ
ವರತ ಶುಭಾಶುಭ ವಿವರಿಸಿ
ಶರಭಾವತಾರನ ದೆಸೆಯಿಂದ । ಲವ-
ಳುರೆ ಮೂಕೊರತಿಯಾದ ಭಂಗವ ೪

ತಾನೆ ದೇವೇಂದ್ರ ಪಂಚಾಂಗವ । ಸನು-
ಮಾನ ಮನ್ನಣೆಯಿಂದ ಲಾಲಿಸಿ
ಮೌನಿಯ ಶಾಪದಿ ತನುವೆಲ್ಲ । ಬಹು
ಯೋನಿಮಂಡಲವಾದ ಭಂಗವ ೫

ಇನನುದಯದೊಳೆದ್ದು ಮನ್ಮಥ । ಶುಭ
ದಿನ ಶುಭ ತಿಥಿಗಳ ಕೇಳುತ್ತ
ಘನಶಿವನಕ್ಷಿಯ ಬಿಸಿಯಿಂದ । ತನ್ನ
ತನುವ ನೀಗಿದ ಮಾನಭಂಗವ ೬

ವಾರ ತಿಥಿ ಯೋಗ ಕರಣವ । ಶುಭ
ತಾರೆಗಳೊಳು ದಕ್ಷಯಜ್ಞವ
ಪೂರೈಸಲು ವೀರಭದ್ರನು । ಸೆರೆ
ಸೂರಿಮಾಡಿದ ಮಾನಭಂಗವ ೭

ಕಷ್ಟಕರ್ಮವ ನೀಗಬೇಕೆಂದು । ಬಹು
ನಿಷ್ಠೆಯಿಂ ಪಂಚಾಂಗವ ಕೇಳಿ
ಸೃಷ್ಟಿಯೊಳಗೆ ಪಂಚಪಾಂಡವರು । ದೇಶ
ಭ್ರಷ್ಟರಾದ ಮಾನಭಂಗವ ೮

ಮೂರೇಕದಶಕೋಟಿ ದೇವತರು । ಶುಭ
ತಾರೆಯೆ ದೈವವೆಂದಾರಾಧಿಸಿ
ತಾರಕಾಸುರನಿಂದಲೊದೆಯಾ । ತಿಂದು
ಮಾರವೈರಿಯ ಮರೆಹೊಕ್ಕಲೇಕಯ್ಯ ೯

ಕುರುಡ ಕುಂಟನ ಹಲ್ಲುಮುರುಕನ । ಒಮ್ಮೆ
ಗುರುತಲ್ಪಕನ ಬಲವನು ಕೇಳಿ
ಚರಿಸಲಾಗದು ವೀರಶೈವರು । ಎಂಬ
ವರಪುರಾತನರ ವಚನಗಳುಂಟು ೧೦

ಮೃಡಲಿಂಗಪೂಜೆ ಜಂಗಮದಾಸೋ । ಹವ
ದೃಢನಿಷ್ಠೆಯೊಳು ಶುಭದಿನವೆಂದು
ಒಡೆಯ ಸದ್ಗುರು ಚೆನ್ನವೀರನ । ಪಾದ-
ವಿಡಿದ ಭಕ್ತರಿಗಾವ ಭಯವಿಲ್ಲ ೧೧

## ೫೬ ಎಂಥ ಕನಸ ಕಂಡೆನೆ ಕೇಳೌ ಸುಜಾಣೆ

### ರಾಗ: ನೀಲಾಂಬರಿ

ಎಂಥ ಕನಸ ಕಂಡೆನೆ । ಕೇಳೌ ಸುಜಾಣೆ
ಕಾಂತ ಮುನಿಸುಗೊಂಡನೆ
ಇಂತು ಕನಸು ಕಂಡ ಭ್ರಾಂತಿಗೊಂಡಿಹನೆ । ಏ-
ಕಾಂತದಿ ತಿಳಿಯ ಪೇಳೌ ದಯಾಳೆ ॥ ಪಲ್ಲವಿ ॥

ಆಲದ ಮರನೊಂದಕ್ಕೆ ಅತ್ತಿಯ । ಕಾಯಿ
ಬಾಳತಂತಿಹುದ ಕಂಡೆ
ಬಾಲೆ ಎನ್ನನುವಿಂಷಲೋಲದೃಷ್ಟಿಗೆ । ವೃಕ್ಷ-
ಮೂಲವೆ ಬಯಲಾಯಿತೆ । ಕೇಳೌ ಸುಜಾಣೆ ೧

ತುಂಬಿದ ಕೆರೆಯೊಂದಕೆ ಬಾಯ್ದೆರೆ । ದಿರ್ಪ
ಒಂಭತ್ತು ತುಂಬ ಕಂಡೆ
ಒಂಭತ್ತರೊಳಗೊಂದು ತುಂಬ । ಬಂಧಿಸಲಾಗಿ
ತುಂಬಿದ ಕೆರೆ ಬತ್ತಿತೆ । ಕೇಳೌ ಸುಜಾಣೆ ೨

ಮಡದಿಯರೊಡನಿಲ್ಲದೆ ನಾ । ನೊಬ್ಬಳೆ
ಕೊಡ ನೀರ ತರುತಿರ್ದೆನೆ
ನಡೆವ ದಾರಿಗೆ ಹೊತ್ತ ಕೊಡವೊಗೆದು । ನೀರ
ಬಿಡದೆ ಹೊತ್ತರುತಿರ್ದೆನೆ । ಕೇಳೌ ಸುಜಾಣೆ ೩

ಊರಲಿಲ್ಲದ ಚೇಳಿಕೆ ಏರದ । ಬೇನೆ-
ಗೂರೆಲ್ಲ ನರಳಿತಲ್ಲೆ
ಬೇರು ಹುಟ್ಟಿ ಎಲೆ ಯೂರು ಮುಟ್ಟಿದ । ಹಚ್ಚೆ
ಊರು ಬೆನ್ನಳಿಯಿತಲ್ಲೆ । ಯೌ ನೀನೆ ಬಲ್ಲೆ ೪

ಈ ರೀತಿ ಕನಸಿನೊಳು ನಿಬ್ಬೆರಗಿ । ನಿಂ-
ದೊರ್ವಳೆ ಒರಗಿರ್ದೆನೆ
ಸಾರಸುಂದರ ಚೆನ್ನವೀರನಪ್ಪಲು । ನಿದ್ರೆ
ಹಾರಿ ಕಣ್ದೆರೆದೆನಲ್ಲೆ । ಇಂತಾಯಿತಲ್ಲೆ ೫

## ೫೭ ರಾಗವರ್ಜಿತ ಲಿಂಗ ಸುಖಂ

### ಚಿತ್ರಪದ ವೃತ್ತ

ರಾಗವರ್ಜಿತ ಲಿಂಗಸುಖಂ
ಭೋಗಿ ಭವಾದಿವಹ್ನಿ ನಿಜ
ಯೋಗಿಜನಂಗಳ ಪಾಲಿಸುವ
ಶ್ರೀ ಗುರುಸೇವೆಯೊಳೊಂದಿಪೆನಾಂ ೧

ಅಷ್ಟವಿಧಾರ್ಚನೆ ಮಾಡುವ ವಿ-
ಶಿಷ್ಟ ಸುಭಕ್ತರ ಪಾಲಿಸುವ
ಶ್ರೇಷ್ಠ ಸುಜಂಗಮ ಪ್ರಾಣವಹ
ಇಷ್ಟ ಮಹಾಘನಲಿಂಗ ನಮೋ ೩

ಹೆಂಗಳ ಭೋಗವ ಪಿಂಗಿ ನಿಜ
ಲಿಂಗಸುಖಂಗಳ ಭೋಗಿಸುವ
ಮಂಗಳಕಾರ್ಯದ ಕಾರಣದ
ಜಂಗಮದಂಘ್ರಿಯ ಪೂಜಿಪೆನಾಂ ೪

ಸಾಧು ಸದ್ಗುರು ಲಿಂಗಾಚಾರ
ಪಾದವ ಸೋಂಕಿದ ಪಾವನ ಪಾ-
ದೋದಕದಿಂದಂ ಲಿಂಗಾಭಿಷೇ-
ಕದಿ ಚರಿತ್ರವನಾಚರಿಪೆಂ ೫

ಆಗಮಶಾಸ್ತ್ರಕೆ ಕಾಣಿಸದ
ಶ್ರೀಗುರುಲಿಂಗ ಸುಜಂಗಮಕೆ
ಬಾಗಿ ಚಿದದ್ವಯ ಭಕ್ತಿಯೊಳು
ಭೋಗಿಪ ತ್ರೈವಿಧ ಶೇಷವನು ೬

ಪ್ರೇತ ಪಿಶಾಚಿಯ ಭೀತಿಯನು
ಖ್ಯಾತಿಯ ಲಾಭದ ವಾಂಛೆಯನು
ಓತು ವಿಸರ್ಜಿಸಿ ಚಿದ್ಘನ ವಿ-
ಭೂತಿಯ ಧಾರಣೆಗೈವೆ ಸದಾ ೭

ಮಾನಸ ವಾಚಕ ಕಾಯಕದಿಂ
ಜ್ಞಾನ ಸುಸತ್ಕ್ರಿಯಲಿಂಗದಭಿ-
ಧಾನ ಷಡಕ್ಷರಮಂತ್ರವನು
ಧ್ಯಾನಿಸುತಿರ್ಪ ಭಕ್ತ ನಮೋ ೮

ಜಂಗಮಲಿಂಗದ ಚಿತ್‌ಕಳೆಯು
ಕಂಗಳನಾಮದ ಚಿನ್‌ಮಣಿಯು
ಮಂಗಳಮಾಲೆಯನಂಗದೊಳು
ಪಿಂಗದೆ ಧಾರಣಗೈವೆ ಸದಾ ೮

ತನ್ನಯ ನೈಜವ ತಾನರಿದು
ನನ್ನುತ ಬ್ರಹ್ಮವನರ್ಚಿಸುವ
ಚಿನ್ಮಯ ಜಂಗಮದೇವ ಸದಾ
ಚೆನ್ನವೀರನೆ ಪಾಲಿಪುದೈ ೯

## ೫೮ ಪಾದಂ ಸದಾಪೂಜಿತಮಾದ ಲೋಲ

ರಾಗ : ವಜ್ರನಾಮ ವೃತ್ತ

ಪಾದಂ ಸದಾ ಪೂಜಿತಮಾದ ಲೋಲಂ
ಬೋಧಾಕಾರಂ ಬ್ರಹ್ಮಮಯಂ ಸುಶೀಲಂ
ವೇಧಾದಿ ತ್ರೈದೀಕ್ಷಿಗನಾದಿಮೂಲಂ
ಶ್ರೀ ದೇಶಿಕಂ ಪಾಹಿ ಸದಾವಕಾಲಂ ೧

ತ್ಯಾಗಾಂಗ ಸತ್‌ಕ್ರಿಯೆಯ ಇಷ್ಟಲಿಂಗಂ
ಭೋಗಾಂಗ ಸುಜ್ಞಾನ ಸುಪ್ರಾಣಲಿಂಗಂ
ಯೋಗಾಂಗ ಸದ್‌ಭಾವದಾ ಭಾವಲಿಂಗಂ
ಜೋಗೈಸುತೆನ್ನ ಸಲಹೈ ಕೃಪಾಂಗ ೨

ಶೈವಾದಿ ದೈವಂಗಳ ನೋಡು ನೀಗಿ
ಭಾವಾದಿ ತ್ರೈಲಿಂಗವೆ ಪ್ರಾಣವಾಗಿ
ಆವಾಗ ದೇಶಾಂತರಗೈವ ಯೋಗಿ
ನೀವೆ ಸದಾ ಪಾಲಿಪುದೈ ವಿರಾಗಿ ೩

ನೂರೊಂದು ಸೋಪಾನದ ಕೂಪದಿಂದ
ಆರಾಧ್ಯರಂಘ್ರಿದ್ವಯ ಸೋಂಕಿ ಬಂದ
ಈರೈದು ಪಾದೋದಕ ನೇಮದಿಂದ
ಆರೈವುತಿರ್ಪಾತನಿಗಾನು ಕಂದ ೪

ಚಿನ್ನಾದ ಚಿದ್‌ಬಿಂದುವೆ ಶುದ್ಧ ಸಿದ್ಧಂ
ಉನ್ನತ ಶ್ರೀ ಚಿತ್‌ಕಳೆಯೆ ಪ್ರಸಿದಂ
ಹನ್ನೊಂದು ನಾಮಾಂಕಿತ ಒಪ್ಪುತಿರ್ದಂ
ಇನ್ನು ಪ್ರಸಾದಾರ್ಪಿತನೆ ಪ್ರಬುದ್ಧಂ ೫

ಶಾಂತಾದಿ ದಿವ್ಯಕರ್ಗಳೆ ತಾಂ ಸಿತಾಂಗಂ
ವಾಂತುರ್ವಿ ಭಕ್ತಾದಿಗಳುತ್ತಮಾಂಗಂ
ಮುಂತಾದಿ ಸರ್ವಾಂಗದ ಶೋಭೆವೆತ್ತಂ
ಕಾಂತೆ ವಿಭೂತೀಶ್ವರಿ ಪಾಲಿಸೆಮ್ಮಂ ೬

ಕಾಲಸುಕರ್ಮಾಂಗಜಾ ಮಾಯು ಶಿಕ್ಷಂ
ಮೂಲನ ಲಕ್ಷಾಂಕಿತವೆ ಶಿಲಾಕ್ಷಂ
ಮಾಲ ವಿಭೂಷಂಗದೊಳಿರ್ಪ ಮೋಕ್ಷಂ
ಶೀಲಾಂಶು ಮಹೇಶ್ವರನೆಮ್ಮ ರಕ್ಷಂ ೭

ವ್ಯೋಮಾದಿ ಭೂತಂಗಳ ಸೋಮತಂತ್ರ
ಕಾಮಾದಿ ಷಡ್‌ವರ್ಗದ ಸಂಗ ಸಿಂತ್ರ
ವಾಮಾಂಗ ಹಸ್ತಾಬ್ಜದ ಲಿಂಗಮಂತ್ರ
ನಾಮಾದಿ ಮೂಲಾಕ್ಷರವೆ ಸ್ವತಂತ್ರ ೮

ಆಚಾರ ಹೀನಾತ್ಮರ ಮಾನಭಂಗಂ
ಆಚಾರ ಸಂಪ್ರೀತರಿಗಂತರಂಗಂ
ವಾಚಾಮನಂಕಾಯಾದಿ ಸುಪ್ರಸಂಗಂ
ಶ್ರೀ ಚೆನ್ನವೀರೇಶ್ವರಮಿಷ್ಟಲಿಂಗಂ ೯

## ೫೯ ವರಸುರತರುವೆ ಕರರುಹದಿರುವೆ

ಸುಲಭನಾಮ ವೃತ್ತ

ವರಸುರತರುವೆ । ಕರರುಹದಿರುವೆ
ಪರಿಸದ್‌ಗುರುವೆ । ಚರಣಕೆರಗುವೆ ೧

ಸದಮಲ ಶಿವಲಿಂಗದ ಹೊಲಬನು ಪೇ-
ಳಿದ ಗುರುವಿನ ಶ್ರೀಪಾದಕ್ಕೆರಗುವೆ ನಾಂ ೨

ನವವಿಧವೆನಿಸಿರ್ಪವಿರಳ ಶಿವಲಿಂ-
ಗವನವರತಂ ತವೆ ಭಜಿಸುವೆ ನಾಂ ೩

ಶಿವನ ಭಜಿಸಿ ದುರ್ಭಾವ ಬಿಡದದರಿಂ
ಶಿವನ ತ್ಯಜಿಸಿ ಲಿಂಗವ ಭಜಿಸುವೆ ನಾಂ ೪

ಗಜಾಜಿನಧರನಂ ತ್ಯಜಿಸಿ ಸುಚರಮಂ
ತ್ರಿಜಗವರಿಯೆ ನಾಂ ನಮಿಸುವೆ ಸತತಂ ೫

ಶಮೆದಮೆಯುತ ಜಂಗಮುವ ಸದುದ-
ಕ ಮಹಕರದೊಳು ನಾಂ ನಮಿಸುವೆ ಸತತಂ ೬

ಅವಿರತ ಚರಪಾದಹನು ಭಜಿಸಿ ತೀ-
ರ್ಥವ ನೆರೆ ಪಡಕೊಂಡವಧರಿಸುವೆ ನಾಂ ೭

ಸದುಗುರುವಿನ ಲಿಂಗದ ಚರದ ತ್ರಿ ಶೇ-
ಷದ ಸುಖಪರಿಣಾಮದೊಳಿಹೆ ನಾಂ ೮

ಲಸಿತ ಭಸಿತಮಂ ನೊಸೊಲೊಳಿಸೆದು ನಾಂ
ಬಸವ ಪೆಸರ ಮಾಲೆಸಳ ಧರಿಸುವೆ ನಾಂ ೯

ಸ್ವಯುಮೆನಿಸುವ ಚಿನ್ಮಯ ಪರಶಿವನ-
ಕ್ಷಯಮಣಿಗಳ ಮಾಲೆಯ ಧರಿಸುವೆ ನಾಂ ೧೦

ಅವಿರಳ ಪರಿಪೂರ್ಣವೆ ಸ್ವಯುವಹ ಶ್ರೀ
ಶಿವನ ಪೆಸರ ಮಂತ್ರವ ಜಪಿಸುವೆ ನಾಂ ೧೧

## ೬೦ ಶೀಲರತಿ-ಕ್ರಾಂತ

ರಾಗ : ಶಶಿಕಾಂತ ವೃತ್ತ

ಶೀಲರತಿಕ್ರಾಂತ । ಬಾಲಶಶಿಶಾಂತ
ಲೋಲಚರಕಾಂತ । ಪಾಲಿಸು ಮಹಾಂತ ॥ ೧

ಕಂಗಳ ಪ್ರಸನ್ನಂ । ಜಂಗಮದ ಭಿನ್ನಂ
ಪಿಂಗದಪೆ ನಿನ್ನಂ । ಲಿಂಗ ಪೊರೆಗೆನ್ನಂ ೨

ಆಗವಾದರೂಹಿ । ಕೋಗಿಲೆಯ ಸ್ನೇಹಿ
ಯೋಗಿಜನಮೋಹಿ । ಶ್ರೀಗುರುವೆ ಪಾಹಿ ೩

ಅಂಗಗುಣತ್ಯಾಗಿ । ಲಿಂಗಸುಖಭೋಗಿ
ಸಂಗ ಶಿವಯೋಗಿ । ಮಂಗಳಾನುರಾಗಿ ೪

ವೈರಿಮದಸಿಂಗ । ಕ್ರೂರಭವ ಭಂಗ
ಸಾರಸುಖಸಂಗ । ವೀರ ಶಿವಲಿಂಗ ೫

## ೬೧ ಶ್ರೀ ವೀರಶೈವಾಚಾರಾಂಗಂ

ವಿದ್ಯುನ್ಮಾಲಾ ವೃತ್ತ

ಶ್ರೀ ವೀರಶೈವಾಚಾರಾಂಗಂ
ಭಾವಾದಿ ತ್ರೈ ಜ್ಯೋತಿರ್ಲಿಂಗಂ
ತೀವಿ ಯುಗ್ಮಂ ಕೂಡಲಸಂಗಂ
ದೇವಂ ಚೆನ್ನಂ ವಿರೋತ್ತುಂಗಂ ೧

ದಾನಂ ಧರ್ಮಂ ಕ್ರಿಯಾಚಾರಂ
ಮೌನ ಧ್ಯಾನಂ ಜ್ಞಾನೋದ್ಧಾರಂ
ನಾನಾ ದುರ್ವಿಕಾರದೂರಂ
ತಾನಾಚಾರ್ಯಂ ಚೆನ್ನವೀರಂ ೨

ಅಷ್ಟಾವರಣಂಗಳ್ಗೆ ದೇಹಿ
ಇಷ್ಟಕ್ರಿಯಾಲಿಂಗ ಸ್ನೇಹಿ
ನಿಷ್ಠೆಯಿಂದಂ ಪೂಜಾಮೋಹಿ
ಶ್ರೇಷ್ಠಂ ಚೆನ್ನವೀರಂ ಪಾಹಿ ೩

ಶಾಂತಂ ಸತ್ಯಾರೂಢಂ ಪಾದಾ
ಕ್ರಾಂತಪಾಲಂ ನಿಶ್ಚಿಂತಂ ನಿರ್-
ಭ್ರಾಂತಂ ನಿತ್ಯಾನಂದಂ ಮುಕ್ತಿ
ಕಾಂತಂ ಪಾಹಿ ಚೆನ್ನವೀರಂ ೪

ಜ್ಞಾನೋತ್ಪತ್ತ್ಯವಾಗಲ್ ಶಿಷ್ಯಂ
ತಾನೆ ಪಾದಾಕ್ರಾಂತವಾಗಲ್
ನೀನೇ ನಿತ್ಯವೆಂದು ಪೇಳ್ದ
ಸ್ವಾನುಭಾವಾಚಾರ್ಯಂ ಪಾಹಿ ೫

ವೃತ್ತಂ ಮಧ್ಯಂ ನಾಳವೃತ್ತಗೋಳ
ವಕ್ತ್ರಂ ಪೀಠಂ ಷಣ್ಮಂತ್ರಂಗಳ್
ಗೋತ್ರಂ ಬೀರುತಿಪಾರ್ವದ್ವೈತಂ
ತತ್ತ್ವಾಚಾರಂ ಲಿಂಗಂ ಪಾಹಿ ೬

ಭಕ್ತಿ ಜ್ಞಾನ ವೈರಾಗ್ಯ ಸಂ-
ಯುಕ್ತಂ ತಾ ಷಣ್ಮಂತ್ರಧ್ಯಾನಾ-
ಸಕ್ತಂ ಭಕ್ತಿಪ್ರಿಯಂ ಮದ್ ವಿ-
ರಕ್ತಂ ನಿತ್ಯಮುಕ್ತ ಪಾಹಿ ೭

ಶಿಷ್ಟಾಚಾರ್ಯಾಂಘ್ರಿಯುಗ್ಮಾಂ-
ಗುಷ್ಟ ಸಂಜಾತಂ ಭೂವಾತ-
ಮಿಷ್ಟಲಿಂಗಸ್ನಾನಂ ಗೈವಂ
ಶ್ರೇಷ್ಠಂ ಚೆನ್ನವೀರಂ ಪಾಹಿ ೮

ಹೃದಯಾಚಾರ್ಯರಿಂದೋತ್ಪತ್ತಂ
ಶುದ್ಧ ವಿಷ್ಟಲಿಂಗಜಾತಂ
ಸಿದ್ಧಂ ಸದ್ವಿರಕ್ತನ ಪ್ರ-
ಸಿದ್ಧಂ ತ್ರೈವಿಶೇಷಂ ಪಾಹಿ ೯

ಧಾವಲ್ಯಾಂಗಂ ಕ್ರಿಯಾಸಂಗಂ
ಆವಕಾಲಂ ಪೂಜಾಮೂಲಂ
ಭಾವಾಶಾಂತೇ ಮುಕ್ತಿಕಾಂತೇ
ಶ್ರೀ ವಿಭೂತಿ ನೀ ಮನ್ಮಾತೇ ೧೦

ಕ್ಷುದ್ರೋಪದ್ರೋದ್ರೇಕಂಗಳ್ ಸೂ-
ಕ್ಷ್ಮದೃಶ್ಯಂಗಳ್ಮಾಡಲ್ಪಟ್ಟಂ
ರುದ್ರಾಕ್ಷಾಲಂಕಾರಂ ಚಿತ್ ಸ-
ಮುದ್ರಂ ಚೆನ್ನವೀರಂ ಪಾಹಿ ೧೧

ಪಾಪಂ ಪುಣ್ಯಾರಣ್ಯಂ ವಹ್ನಿ
ತಾಪ ತ್ರೈಕರ್ದಮಕಾದಿತ್ಯಂ
ಗೋಪ್ಯಾಂತರ್ ಚಿಜ್ಜ್ಯೋತಿರ್ತೈಲಂ
ಶ್ರೀ ಪಂಚಾಕ್ಷರ ಮೂಲಂ ಮಂತ್ರಂ ೧೨

## ೬೨ ಶ್ರೀ ಶಿವಾನುಭಾವಾಮೃತಾರ್ಣವ ಪೂರ್ಣಚಂದ್ರ ಗಣೇಂದ್ರ

### ಮಲ್ಲಿಕಾ ಮಾಲಾವೃತ್ತ

ಶ್ರೀ ಶಿವಾನುಭಾವಾಮೃತಾರ್ಣವ ಪೂರ್ಣಚಂದ್ರ ಗಣೇಂದ್ರ ಸಂ-
ಕಾಶಪೂತ ವಿಭೂತಿ ಸ್ನಾನಸುಧೂಳಧಾರಣಜ್ಯೋತಿ ಸ-
ರ್ವೇಶ ಷಡ್ವ್ರತಶೀಲಭಾವನ ಭಕ್ತಪಾಲನ ವೀರಮಾ-
ಹೇಶ ಶ್ರೀಚರಲಿಂಗದಂಘ್ರಿಗಳೊಲ್ದು ಕಾಯಲಿ ಸಂತತಂ ೧

ಆಣವಾದಿಮಲತ್ರಯಪ್ರವಿದೂರ ತತ್ತ್ವವಿಚಾರ ಕ-
ಲ್ಯಾಣ ಶ್ರೀ ವೃಷಭೇಷ ಮುಖ್ಯ ಸ್ವಕೀಯ ಭಕ್ತಿಯೊಳ್ ಪ್ರಿಯ ನಿ-
ರ್ವಾಣರೂಪ ಸುಚಿತ್ಕಲಾಪ ಜಿತತ್ರಿತಾಪಪ್ರದೀಪ ಷಟ್-
ಪಾಣಿಯೊಳ್ ಬಿಡದಿರ್ಪ ಜಂಗಮಪಾದವೆಮ್ಮನು ಕಾಯಲಿ ೨

ಭಕ್ತಿ ಜ್ಞಾನ ವಿರಕ್ತಿ ಸಂಪದ ಬಿತ್ತು ಬ್ರಹ್ಮದ ಗೊತ್ತು ಸದ್-
ಭಕ್ತರಂತರ ಬಹಿರಂಗ ಪ್ರಸಂಗಿಕಂ ಮಹಾಲಿಂಗಿಕಂ
ವಾಕ್ತಷಡುಸ್ಥಲಸಾರ ಯೋಗ ಸುಮಾರ್ಗ ಮೀರಿದ ಕ್ರಿಯ ಸಂ-
ಯುಕ್ತ ಮುಕ್ತಿ ಫಲಪ್ರದಂ ಚರಪಾದವೆಮ್ಮನು ಕಾಯಲಿ ೩

ದೇಶಗ್ರಾಮ ಸುಗೇಹ ಬಂಧನವಾರ್ಜಿತಂ ಸಕಲೋರ್ಜಿತಂ
ಈಶ ಶ್ರೀಗುರುಲಿಂಗಜಂಗಮತೀರ್ಥಶೇಷ ವಿಭೂತಿ ಪ್ರೋ-
ಚ್ಛ್ರೀ ಶಿವಾಕ್ಷಿ ಷಡಕ್ಷರಾದಿಕವರ್ಣ ಭೂಷಣ ಪುಣ್ಯಕ್ಷೇತ್ರ
ಶ್ರೀ ಸತ್ಪುರ ಜಂಗಮಾಂಘ್ರಿಗಳೊಲ್ದು ಕಾಯಲಿ ಸಂತತಂ ೪

ದೇವಭಕ್ತ ಸದೇಶಗ್ರಾಮಸುವರ್ಣಲೋಷ್ಟ್ರಗಳೊಂದೆಯಂ-
ದಾವಗಂ ರಮಗಾಜೋನರ್ಗಳನದ್ವಿತೀಯಮತರ್ಕ್ಯ ಸದ್-
ಭಾವಿಕಂ ನಿರುಪಾಧಿಕಂ ಪರಮಾರ್ಥಿಕಂ ಸ್ವಯತಂತ್ರಿ
ಕುವ್ಯೋಮದೆನ್ನನಜಸ್ರ ಜಂಗಮಲಿಂಗದಂಘ್ರಿಗಳರ್ತಿಯಿಂ ೫

ನೈಷ್ಠೆಯಿಂದಲಿ ತಟ್ಟಿ ಮುಟ್ಟಿದ ಕಂಡು ಕೇಳಿದರಾಕೃಪಾ-
ದೃಷ್ಟಿಯಿಂದವಲೋಕಿಸುತ್ತತಿ ದೈನ್ಯರಂ ನೆರೆ ಮಾಳ್ಪ ಸಂ-
ತುಷ್ಟ ಪಾವನಾಚಾರ್ಯಮಾಚರಣದ್ವೈಕ ಪ್ರಣವುದಾರ್ಯಮುತ್-
ಕೃಷ್ಟ ಶ್ರೀಪರಜಂಗಮಾಂಘ್ರಿಗಳೊಲ್ದು ಕಾಯಲಿ ಸಂತತಂ ೬

ಶ್ರದ್ಧೆನೈಷ್ಠಿಕ ಸಾವಧಾನ ಮಹಾನುಭಾವ ಮುಖಂಡ ಸಂ-
ಶುದ್ಧ ಭಕ್ತನ ಧ್ಯಾನನೋಟ ಸಮರ್ಚನ ಸ್ತುತಿಗಾವಗಂ-
ಸಿದ್ಧಪಾಗವತರ್ಯ ಮತ್ಪ್ರಭು ಚೆನ್ನವೀರ ಮಹೇಶ ಪ್ರ-
ಸಿದ್ಧಭಾವ ಪ್ರಸಾದ ಸ್ವಾಮಿಯ ಪಾದವೆಮ್ಮನು ಕಾಯಲಿ ೭

## ೭೩ ಗವಿಯು ಶಾಂತವೀರ ನಿಜದನುಭವದ ಸುಖದ ಸಾರ

ಗವಿಯ ಶಾಂತವೀರ । ನಿಜದನು । ಭವದ ಸುಖದ ಸಾರ
ಭುವನದೊಳಿಹ ಶಿವ ಶರಣಗಣಂಗಳ
ತವಕದೊಳವಿರತ ಪೊರೆವ ಸುಧೀರ ॥ ಪಲ್ಲವಿ ॥

ಅಂಗವಿಷಯ ತ್ಯಾಗಿ । ಷಡ್ವಿಧ । ಲಿಂಗ ಸುಕವಿ ಭೋಗಿ
ಕಂಗಳ ಕೊನೆಯೊಳು ಬೆಳಗುವ ಚಿದ್‌ಘನ
ಲಿಂಗವನಂಗಪಿಸಿದ ಶಿವಯೋಗಿ ೧

ಅಷ್ಟಾವರಣದಂಗ । ಭಾವ ಸ । ದಿಷ್ಟ ಪ್ರಾಣಲಿಂಗ
ನಿಷ್ಠೆಯಿಂದ ಕೊಂಡಾಡಿದ । ಭಕ್ತರ-
ಭೀಷ್ಟವ ಕರುಣಿಸಿ ಪೊರೆವ ಕೃಪಾಂಗ ೨

ಸಕಲಾಗಮ ಮೂರ್ತಿ । ಶ್ರುತಿತತಿ । ನಿಕರಂಗಳ ಕೀರುತಿ
ಅಖಿಳ ಶರಣಸಂತತಿಗಳ । ಸುಖಕರ
ಭಕುತಿ ವಿರತಿ ಜ್ಞಾನರಥ ಸಾರಥಿ ೩

ದೇಶಕರುತ್ತುಂಗ । ನೆನಿಸುವ । ಕಾಶಿಯ ಗುರುಸಂಗ-
ಮೇಶನ ಪಾದವ । ಭಜಿಸುವರಭವ-
ಪಾಶವ ಪರಿಹರಿಸುವ ಚರಲಿಂಗ ೪

ಮುನ್ನಿನಾದಿನಾಥ ನಂಬಿದ । ರನ್ನು ಪೊರೆವ ದಾತ
ಅನ್ಯವನರಿಯದೆ । ತನ್ನ ಭಜಿಸುತಿಹ
ಚೆನ್ನವೀರ ಮದ್‌ಗುರು ಗುರುವರನೀಶ ೫

## ೬೪ ಪರತತ್ತ್ವಮೂರ್ತಿಯಷ್ಟಾವರಣ

### ಅಷ್ಟಾವರಣ ವಾರ್ಧಿಕ

ಪರತತ್ತ್ವ ಮೂರ್ತಿಯಷ್ಟಾವರಣ ರೂಪದಿಂ
ಧರೆಯೊಳಗೆ ಭಕ್ತರಿಷ್ಟಾರ್ಥಕೋಸುಗ ಬಂದು
ಸ್ಮರಣೆ ನೋಟದಿಯಿಳೆಯು ಜನಕತಿ ಮೆಚ್ಚಿ ಪೊರೆ
ವುದೆಂತೆನೆ ಕೇಳು ಪೇಳ್ವೆ ॥ ಪಲ್ಲವಿ ॥

ಭವಿತನವ ಕಳೆದು ಭಕ್ತನ ಮಾಡಿ ತನುತ್ರಯಕೆ
ತ್ರಿವಿಧ ದೀಕ್ಷೆಯನಿತ್ತು ತ್ರಿವಿಧ ಗುಣಗಳ ಕಳೆದು
ತ್ರಿವಿಧ ತನುವಿಗೆ ತ್ರಿವಿಧಲಿಂಗಮಂ ನೆಲೆಗೊಳಿಸಿ
ತ್ರಿವಿಧವಾಚಾರವರುಹಿ
ತ್ರಿವಿಧ ಪೂಜೆಯು ಪೇಳಿ ತ್ರಿವಿಧಾರ್ಪಣವ ತಿಳುಹಿ
ತ್ರಿವಿಧಶೇಷವನುಂಬ ತ್ರಿವಿಧಸುಖ ಸಮರತಿಯ-
ನವಿರತಂ ದಯೆಗೆಯ್ದು ಧವಗೇಡಿಯೆನಿಸದವರ
ಅವಿರಳನೇ ಗುರು ನಮಸ್ತೇ ೧

ಆದಿಯೊಳು ಶೂನ್ಯಬ್ರಹ್ಮವು ತನ್ನ ಲೀಲೆಯೊಳು
ಮೇದಿನಿಯು ಸೃಜಿಸಲೋಸುಗವಾಗಿ ಮಂತ್ರಮಂ
ಆದರದಿ ನೆನೆಯಲ್ಕೆ ಆ ಮಂತ್ರಗರ್ಭದಿಂ-
ದಾದ ಮಹಲಿಂಗ ನಿಮ್ಮ
ಪಾದದಿಂದಖಿಳ ಭುವನಂಗಳಾದುವದರೊಳ-
ಗಾದ ಪ್ರಾಣಿಗಳೊಳಗೆ ನಿಮ್ಮ ಜಾನಿಸಿದರ್ಗೆ
ವೇದಪದಗೊಡುವೆ ಮರೆದರ್ಗೆ ನೀನತಿದೂರ
ಮಾದಲಿಂಗವೆ ಪಾಹಿ ಮಾಂ ೨

ಪರತತ್ತ್ವ ಜಂಗಮವೇ ಪರಿಪೂರ್ಣ ಜಂಗಮವೆ
ಸ್ಥಿರವಪ್ಪ ಜಂಗಮವೇ ಪರಮಕಳೆ ಜಂಗಮವೆ
ಗುರುಲಿಂಗವೆರಡಕ್ಕೆ ಹರಣ ಜಂಗಮರಾಯ
ಧರೆಯೊಳಗೆ ಭೂರುದ್ರನೆ

ನರಸುರಾಧಿಗಳರಸಿ ಕಾಣದಿಹ ಜಂಗಮವೆ
ಅರಿವುಳ್ಳ ಭಕ್ತರ ಅಂತರ್‌ಸಾಕ್ಷಿ ಜಂಗಮವೆ
ಶರಣಗಣ ತಿಂಥಿಣಿಯು ಹರುಷದಿಂದನವರತ ಪೊರೆವ
ಜಂಗಮವೇ ಪಾಹಿ ಮಾಂ ೩

ಗುರುದೇವನಂಘ್ರಿಜಲ ಪರಮಲಿಂಗೋದಕಂ
ಚರಮೂರ್ತಿ ಚರಣದಿಂದುದಿಪ ತೀರ್ಥಂ ಬಳಿಕ
ಸ್ಪರಶನೋದಕವು ವರಧಾರೆ ಜಲವಾಪ್ಯಾಯ-
ನೋದಕಂ ಹಸ್ತೋದಕಂ
ಪರಿಣಾಮ ಜಲವು ನಿರ್ನಾಮ ಸತ್ಯೋದಕಂ
ನಿರುತದಿಂ ಪರಶಿವಾನಂದವೇ ಧರೆಗುದಿಸಿ
ಮೆರೆವಂಗದೊಳು ಮೋಕ್ಷದಿರವಾಗಿ ಭಕ್ತರಂ ಪೊರೆವ
ತೀರ್ಥವೇ ಪಾಹಿ ಮಾಂ ೪

ಗುರುವಿನಿಂದುದಿಸಿ ಶುದ್ಧ ಪ್ರಸಾದವೇ ಆದೆ
ಚರಲಿಂಗದಿಂದೊಗೆದು ಶಿದ್ಧಶೇಷವೇ ಆದೆ
ಚರಮೂರ್ತಿಯಿಂದ ಪ್ರಸಿದ್ಧ ಪ್ರಸಾದ-
ವೆಂದಿರದೆ ನಾಮವ ತಾಳಿದೆ
ಪರಿಯಾಯ ನಾಮಂಗಳೇಕಾದಶವನಾಂತೆ
ಹರುಷದಿಂ ಸವಿದರ್ಗೆ ಪರಮಮೋಕ್ಷವನಿತ್ತೆ
ಜರಿದರ್ಗೆ ಹಿರಿದು ಪಾತಕವಿತ್ತೆ ಶ್ರೀ ಮಹಾಗುರು
ಹಸಾದವೇ ಪಾಹಿ ಮಾಂ ೫

ಸಿಪಿವಿಷ್ಣನಂಗಭವಿ ಭಸಿತವಾಗಿಯೋ ತಾನು
ಗುಪಿತದಿಂದಿರೆ ಪಂಚಋಷಿಗಳಾಭರ್ಗನಿಂ-
ದುಪದೇಶವಡೆವಾಗ ಪಂಚಮ ಧೇನುವ ಪಡೆದು
ಪಂಚಭಸಿತವ ನಿರ್ಮಿಸಿ
ಸುಪವಿತ್ರವೆನಿಸಿದರು ನಿನ್ನ ಧಾರಣದಿಂದ
ಜಪತಪವ ಮಾಡೆ ಯಜ್ಞಕ್ಕೆ ಕಾರಣವಿಂದೆ
ಅಪಸ್ಮಾರ ಮುಂತಾದ ಗೃಹಪಾತಕಂ ನಾಸ್ತಿ
ವಿಪುಳ ಭಸಿತವೇ ಪಾಹಿ ಮಾಂ ೬

ಆದಿಯೊಳು ಪರಮೇಶನಂಶವೇ ರುದ್ರಾಕ್ಷಿ-
ಯಾದುದೆಂದುಪನಿಷದ್ವಾಕ್ಯಾರ್ಥಮುಂಟದುವೆ
ಆದಿಯಾಮೂರುತಿ ತ್ರಿಪುರುವನುರುಪುವಾಗ
ನೇತ್ರೋದಕದಿ ಪುಟ್ಟಿರುತಿರೆ

ಆದಿಯಜ ಮುಂತಾದ ದೇವದಾನವ ಋಷಿಗ-
ಳಾದರಿಸಿ ನೆನೆದು ಈಕ್ಷಿಸಿ ಜಪಿಸಿ ಧರಿಸಲ್ಕೆ
ಆದುದಿಷ್ಟಾರ್ಥ ರುದ್ರಾಕ್ಷಿ ನಿಮ್ಮಿಂದಲಾ-
ನೋದಿ ನಮಿಸುವೆ ಸಂತತಂ ೭

ಹರನಾಮವೆನಿಪ ಪರತರ ಷಡಕ್ಷರ ನಿಮ್ಮ
ಸ್ಮರಣೆಯನು ನಂಬಿ ಪಾಡಿದ ಶರಣಸಂತತಿಯು
ಹರನ ಸನ್ನಿಧಿಯೊಳಗೆ ಪರಮಮೋಕ್ಷವನಿತ್ತು
ಪೊರೆವೆ ಎಂದವು ಶ್ರುತಿಗಳು

ಹರುಷದಿಂ ಶಿವಭಕ್ತ ಋಷಿಸಮೂಹಗಳೆಲ್ಲ-
ರರಿದು ಜಪಿಸಲು ಬೇಡಿದಿಷ್ಟಾರ್ಥಸಿದ್ಧಿಗಳ
ದೊರೆಕೊಳಿಸಿ ಜನನಮರಣಗಳಳಿದು ಪಾಲಿಸುವೆ
ಕರುಣಮಂತ್ರವೆ ಪಾಹಿ ಮಾಂ ೮

ಗುರುವರ್ಯನಂ ಲಿಂಗದೇವನಂ ಚರಮೂರ್ತಿ
ಚರಣಜಲ ವರ ಸುಪ್ರಸಾದ ಪರತರಭಸಿತ
ಚಿರದ ರುದ್ರಾಕ್ಷಿ ಮಂತ್ರಂಗಳೆಂಬೆಂಟನಾ-
ದರದಿಂದಲಂಗವಾಗಿ

ಧರಿಸಿರ್ಪ ಚೆನ್ನವೀರೇಶನಂಘ್ರಿಗಳೆನ್ನ
ಕರಮನಭಾವ ನೇತ್ರದೊಳು ಪೂರಿತವಾಗಿ
ಸರಸಿಜಾಪ್ತನ ಕೋಟಿ ತೇಜದಿಂದೊಳಹೊರಗೆ
ಮಿನುಗುತಿರ್ಪುವು ಸಂತತಂ ೯

## ೬೫ ಸಾಲು ಚಕ್ರದಳಕುಳದ ಸುಹಂಸನ

(ಷಟ್‌ಚಕ್ರಪರಾಗ ಪರಿವರ್ಧಿನಿ)

ಪರಿವರ್ಧಿನಿ ಷಟ್ಪದಿ

ಸಾಲು ಚಕ್ರದಳ ಕುಳದ ಸುಹಂಸನ
ಕೀಲನರಿದು ಷಡಧ್ವ ಲಿಂಗಾಂಗದ
ಮೂಲಷಡಕ್ಷರ ಮಂತ್ರವ ಮರೆಯದೆ ಜಪಿಸುವನೆ ಜ್ಞಾನಿ ॥ ಪಲ್ಲವಿ ॥

ಲೇಸೆನಿಪಾಧಾರೆ ಚೌದಳದ ನಿ-
ವಾಸದೊಳಿರುತಿಹ ಕರಣ ಚತುಷ್ಟಯ
ವಾಸನೆಯನು ಪರಿಹರಿಸುವ ಚತುರ್‌ವಿಧ ಸಾರಾಯುವನರಿದು
ನಾಶಿಕ ಮುಖದಾಚಾರ ಸುಲಿಂಗದ
ಶೇಷ ಸುಗಂಧವನನುಭವಿಸುತ ಜಪ
ಸಾಸಿರದೇಳ್ನೂರ್ ಇಪ್ಪತ್ತೆಂಟನು ಜಪಿಸುವನೆ ಭಕ್ತ ೧

ನಿರುಪಮ ಸ್ವಾಧಿಷ್ಠಾನದ ಷಡ್‌ದಳ-
ದಿರುವಿನೊಳಿರುತಿರ್ಪರಿಷಡ್‌ವರ್ಗ-
ದುರವಣೆಗೆಡಿಸುವ ಪರಮ ಷಟುಸ್ಥಲದನ್ವಯುವನೆ ತಿಳಿದು
ವರ ಜಿಹ್ವಾನನವಹ ಗುರುಲಿಂಗದ
ಸರಸ ಪ್ರಸಾದವ ಸವಿದು ಜಪವ ಸಾ-
ಸಿರವೆರಡೈಶತ ತೊಂಭತ್ತೆರಡನು ಜಪಿಸುವ ಮಹೇಶ ೨

ವರಮಣಿಪೂರಕ ದಶದಳದೊಳು ಸಂ-
ಚರಿಸುವ ದಶವಿಧ ಮರುತ ಗುಣಂಗಳ
ತ್ವರಿತದಿ ಕೆಡಿಸುವ ದಶವಿಧ ಚರಣ ಜಲಾಚರಣೆಯ ತಿಳಿದು
ಚಿರನಯನಾಶ್ಯದ ಶಿವಲಿಂಗದ ರೂ-
ಪರಿದು ಪ್ರಸಾದವ ಸವಿದು ಚತುಸ್ಸಾ-
ಸಿರದ ತ್ರಿವಿಧ ಶತವಿಂಶ ಜಪವ ಜಪಿಸುವೆನೆ ಪ್ರಸಾದಿ ೩

ದ್ವಾದಶ ದಳದಿಂದೊಪ್ಪುವನಾಹತ
ಸ್ವಾಧೀನದೊಳಿಹ ದ್ವಾದಶೇಂದ್ರಿಗಳ
ಮೂದಲಿಸುವ ಘನ ದ್ವಾದಶ ಪ್ರಣವ ಪ್ರಸಾದವ ನೆರೆ ತಿಳಿದು
ಸಾದೇಹವೆ ಮುಖವಹ ಚರಲಿಂಗ ಸ-
ದೋದಿತ ಸ್ಪರಿಶನ ಶೇಷ ಸವಿದು ಜಪ-
ವೈದು ಸಾಸಿರ ಶತದೆಂಭೈನಾಲ್ಕನು ಜಪಿಸುವನಸುಲಿಂಗಿ ೪

ಬೀರುವಿಶುದ್ಧಿಯು ಷೋಡಶ ದಳದೊಳು
ತೋರುವ ಷೋಡಶಮದ ತಮಂಧವ
ತೋರುವ ಷೋಡಶ ಚಿತ್‌ಕಳೆಗಳ ಸದ್‌ಗುರುಮುಖದಿಂದರಿದು
ಚಾರು ಶ್ರೋತ್ರ ಮುಖದ ಪ್ರಸಾದ ಲಿಂ-
ಗಾರೂಢತೆಯಿಂ ಶಬ್ದಶೇಷವ ಸವಿ-
ದಾರು ಸಾಸಿರದ ನವ ಶತ ದ್ವಾದಶವನು ಜಪಿಸುವನೆ ಶರಣ ೫

ನಿಟ್ಟಿಸಲಾಜ್ಞೆಯು ದ್ವಿದಳಬ್ಜದೊಳಿಹ
ಭ್ರಷ್ಟ ದ್ವಿ ಮಮಕಾರಹಂಕಾರಂಗಳ
ಬಿಟ್ಟು ಲಿಂಗಾಂಗದ ನಡೆನುಡಿಗಳ ದೃಢವಿಡಿದಾಚರಿಸೆ
ದಿಟ್ಟ ಹೃದಯಮುಖವಹ ಮಹಲಿಂಗ ವಿ-
ಶಿಷ್ಟ ಸಂತೃಪ್ತಿ ಪ್ರಸಾದವ ಭೋಗಿಸು-
ತಷ್ಟ ಶತದ ಚೌಷಷ್ಟ ಜಪವನುರೆ ಜಪಿಸುವ ಮಹದೈಕ್ಯ ೬

ಆರೈಯಲ್ಕೊಂದೆ ಮೂರಾದುದು
ಆರಾದುದು ಮೂವತ್ತಾರಾದುದು
ಬೀರುವ ಇನ್ನೂರು ಹದಿನಾರಾದುದು ಶತದಳದೊರ್ತನಿಗೆ
ತೋರುವ ಇಪ್ಪತ್ತೊಂದು ಸಾಸಿರದಾರು
ನೂರು ಜಪವೆ ತಾಂ ಷಡುಸ್ಥಲ ಬ್ರಹ್ಮದ
ಸಾರ ಸುಬೋಧಯು ಸದ್‌ಗುರು ಚೆನ್ನವೀರೇಶ್ವರ ಜಯುಸತತಂ ೭

## ೭೭ ಶ್ರೀ ಪರಮ ಪರತತ್ತ್ವಮೂರ್ತಿ ಅಷ್ಟಾವರಣ

(ಷಡುಸ್ಥಲಷ್ಟಾವರಣ ವಾರ್ಧಕ)

### ವಾರ್ಧಕ ಷಟ್ಪದಿ

ಶ್ರೀ ಪರಮ ಪರತತ್ತ್ವ ಮೂರ್ತಿಯಷ್ಟಾವರಣ
ರೂಪಕದೊಳವತರಿಸಿ ಸದ್‌ಭಕ್ತ ಮೊದಲಾದ
ವ್ಯಾಪಕ ಷಟುಸ್ಥಲ ಚಿದಂಗವಾಗಿರ್ಪ ಸತ್-
ಕ್ರಮವದೆಂತೆನೆ ಪೇಳುವೆ ॥ ಪಲ್ಲವಿ ॥

ಮಂಗಳ ಸುದೀಕ್ಷ ಗುರು ಆಚಾರಲಿಂಗ ಸ್ವಯ
ಜಂಗಮವು ಸ್ಪರಿಶನಾಂಬುವದು ಪಾದೋದಕವು
ಕಂಗೊಳಿಸುವಾಪ್ಯಾಯನ ಪ್ರಸಾದಂ ವಿಭೂತಿ-
ನಿಜ ವಿಭೂತಿಯು ಪರಶಿವಂ
ಕಂಗಳಭಿಧಾನದ್ವೈವೊಗದ ಮಣಿಮಾಲೆಗಳ
ಓಂಗದೆ ನಕಾರಾದಿ ಷಣ್‌ಮೂಲ ಮಂತ್ರವನು
ಅಂಗವಿಸಲದು ತಾನೆ ಶ್ರದ್ಧೆ ಸದ್ಭಕ್ತನ
ಚಿದಂಗದಷ್ಟಾವರಣವು ೧

ಪರಮಪಾವನ ಶಿಕ್ಷೆ ದೇಶಿಕನು ಗುರು ಲಿಂಗ
ಚರ ಜಂಗಮಧಾರ ಜಲವೆ ಸಾದೋದಕವು
ವರಸಮಯೆ ಸುಪ್ರಾಸಾದಂ ಭಸ್ಮ ವಿಭೂತಿ
ನಾಲ್ಕಾರು ವದನಮುಳ್ಳ
ಪರಶಿವಾಕ್ಷಿಯ ಮಣಿಯ ಸರಗೊಳಿಸಿ ಧರಿಸುವುದು
ನಿರುತದಿ ಮಕಾರಾದಿ ಷಣ್‌ಮೂಲಮಂತ್ರವನು-
ಚ್ಚರಿಸಲುದವರ ನೈಷ್ಠೆಯುಳ್ಳ ಮಹೇಶನ
ಚಿದಂಗದಷ್ಟಾವರಣವು ೨

ಸತ್ಯಸದ್ಯೋನ್ಮೋಕ್ಷದಾಚಾರ ಶಿವಲಿಂಗ
ಮತ್ತೆ ಪರ ಜಂಗಮಾಪ್ಯಾಯನ ಪಾದೋದಕವು
ಅತ್ಯಧಿಕ ಪಂಚೇಂದ್ರಿ ವಿರಹಿತ ಪ್ರಸಾದ ಚಿದ್-
ಭಸಿತ ನಿಜ ವಿಭೂತಿಯು
ಪ್ರತ್ಯೇಕ ಮೂರೇಳು ಮುಖದ ಚಿದ್‌ರುದ್ರಾಕ್ಷಿ
ಚಿತ್ತದಿ ಶಿಕಾರಾದಿ ಷಣ್ಮಂತ್ರಗಳನು ನೆನೆ-
ಯುತ್ತಿರಲು ವರಸಾವಧಾನಿ ಪ್ರಸಾದಿಯ
ಚಿದಂಗದಷ್ಟಾವರಣವು ೩

ಪರಮಗುರುವಿನ ಗುರುವು ಬಳಿಕ ಜಂಗಮಲಿಂಗ
ನಿರುಪಾದಿ ಜಂಗಮ ಉಕಾರ ಜಲಪಾದೋದಕವು
ನಿರುತದಂತಃಕರಣ ಚೌರಹಿತ ಪ್ರಾಸಾದ
ಕ್ಷಾರ ನಿಜ ವಿಭೂತಿಯು
ಎರಡೆಂಟು ಮುಖದ ಚಿದ್‌ರುದ್ರಾಕ್ಷಿ ಮಣಿದೊಡವು
ನಿರುತದಿ ವಕಾರಧಿ ಷಣ್‌ಮೂಲಮಂತ್ರವನು
ಮರೆಯದೆಚ್ಚರವಿರಲು ಅನುಭಾವ ಸತ್‌ಪ್ರಾಣಲಿಂಗಿಯು
ಚಿದಂಗದಷ್ಟಾವರಣವು ೪

ಮುಂತೆ ಶ್ರೀ ಪರಮಗುರುವ ಶೇಷಲಿಂಗ ಸ್ವಾ-
ತಂತ್ರ ಜಂಗಮವು ಪರಿಣಾಮ ಪಾದೋದಕವೋ
ರಂತ ನಿಜ ಸುಪ್ರಸಾದಿಯು ಸುಪ್ರಸಾದ
ಸಂರಕ್ಷೆ ನಿಜ ವಿಭೂತಿಯು
ಇಂತೆಸೆವ ನವಮೇಕ ಮುಖದ ಘನರುದ್ರಾಕ್ಷಿ
ಸಂತತಂ ಯಕಾರಾದಿ ಷಣ್‌ಮೂಲ ಮಂತ್ರವನು
ಚಿಂತಿಸುತ್ತಿರಲದು ನಿಜಾನಂದ ಶರಣನ
ಚಿದಂಗದಷ್ಟಾವರಣವು ೫

ಗುರುವೆ ಪರಮಾರಾಧ್ಯ ಮಹಲಿಂಗ ನಿಜಪರಾ-
ತ್ಪರವೆ ಜಂಗಮವು ನಿರ್ನಾಮ ಪಾದೋದಕವು
ಪರಮ ಸದ್ಭಾವ ಪ್ರಸಾದ ಪ್ರಪಂಚ
ದಹಪಂಚ ವಿಭೂತಿಯು

ಚಿರ ಹತ್ತು ಮುಖದ ಪರಶಿವಾಕ್ಷಿ ಮಾಲೆಗಳ
ಧರಿಸಿ ಓಂಕಾರಾದಿ ಷಣ್ಮೂಲ ಮಂತ್ರವನು
ಸ್ಮರಿಸಲದು ತಾನೆ ವರ ಸಮರಸ ನಿಜೈಕ್ಯನ
ಚಿದಂಗದಷ್ಟಾವರಣವು ೬

ಗುರುವಾರು ಲಿಂಗ ಷಡ್ವಿಧ ಜಂಗಮುಗಳಾರು
ಚರಣಜಲವಾರು ಪ್ರಸಾದ ಷಡ್ವಿಧ ಭಸಿತ
ಪರಿಯಾರು ರುದ್ರಾಕ್ಷಿ ಮಣಿಮಾಲೆಯಾರು ಷಡ್ವಿಧ
ಮೂಲ ಮಂತ್ರಗಳಾರು
ವರಣವೆಂಟಾರುತೆರನಾಗಿ ಲಿಂಗಾಂಗದೊಳು
ಧರಿಸಿ ಶೋಭಿಸುವ ಷಟುಸ್ಥಲ ಬ್ರಹ್ಮಸದ್ಧರ್ಮ-
ದಿರುವೆ ಮದ್ಗುರುವೆ ಸುರತರುವೆ ನಡೆನುಡಿ ಚೆನ್ನವೀರ
ಪಾಲಿಪುದೆಮ್ಮನು ೭

## ೬೭ ಪುಸಿಯುನಾಡುವದಿಲ್ಲವಣ್ಣಾ

ಪುಸಿಯುನಾಡುವದಿಲ್ಲವಣ್ಣಾ । ನೀವು
ಹಸನಾಗಿ ಶೋಧಿಸಿ ತಿಳಕೊಳ್ಳಿರಣ್ಣಾ ॥ ಪಲ್ಲವ ॥

ಬೇರು ಬಲಿದು ಸಾರವಳಿದ । ಅಣ್ಣಾ
ನೀರು ಬೀಜವ ಬಿತ್ತಿ ಭೂಮಿಯು ಬೆಳೆದು
ಮಾರುತನ ಹೊತ್ತು ಸುಳಿದ । ವಕ್ಕಿ
ತೂರದ ಮುನ್ನ ಮೂಗಂಡುಗವಳೆದ ೧

ತಾಳೆಯ ಮರದ ಮೇಲೊಂದು । ಬಾವಿ
ಆಳು ಪ್ರಮಾಣದರೊಳಗೇಳು ಸಿಂಧು
ಬಾಳುವ ಜನವೆಲ್ಲ ಬಂದು । ಮುಳಿ
ಗೇಳುತಿಹರು ತಡಿಗಾಣದೆಂದೆಂದೂ ೨

ನೀರ ನಡುವೆ ಮೂರು ಬೆಂಕಿ । ಹುಟ್ಟಿ
ತೀರಿ ತೀರದು ಸುಟ್ಟು ಸುಡುತದೆ ಲೆಂಕಿ
ಆರಿಸಬೇಕೆಂಬ ಶಂಕೆ । ತಲೆ
ದೋರಲೊಲ್ಲದು ಮೂರುಲೋಕಕ್ಕೆ ಸೋಂಕಿ ೩

ಹುಲಿಯು ಹುಲ್ಲೆಯು ನಡುವೊಂದು । ಅದು
ತಲೆಯುರಡಾಗಿ ಲೋಕವನೆಲ್ಲ ತಿಂದು
ಕೆಲದಲ್ಲಿ ಮತ್ತೊಂದು ಬಂದು । ಅಲ್ಲಿ
ಮೆಲುಕಿರಿವುದ ನಾನೋಡಿದೆ ನಿಂದು ೪

ಕುಲವಂತ ಹೊಲೆಯುನ ತಂಗಿ । ತಾನು
ಜಲಜಭವಾಂಡಮಂಡಲಕೆ ಮೂಲಂಗಿ
ಒಲವಿಂದ ಹಾಕಿದ ಭಂಗಿ । ಅದು
ತಲೆಗೇರಿ ಮೊಲಬೇಟೆಕಾರನ ನುಂಗಿ ೫

ಕತ್ತಲೆಯೊಳು ಕಂಡ ಕುಣಿಯು । ತಾನು
ಹೊತ್ತಾರೆ ಕಣುಗಂಡು ಬೀಳುವ ಗಣಿಯಾ
ಸತ್ತುಹುಟ್ಟುವದಕ್ಕೆ ದಣಿಯು । ನೆಂದು
ಸತ್ಯಲೋಕದ ಜನ ನಗುವಂತಹ ಖಣಿಯಾ ೬

ಅಣ್ಣತಂಗಿದರೊಂದುಗೂಡಿ । ಒಬ್ಬ
ರುಣ್ಣದೂಟವನುಂಡು ಚುನ್ನಾಟವಾಡಿ
ಪುಣ್ಯಪಾಪವ ಹಿಂದುಮಾಡಿ । ಮೂರು
ಕಣ್ಣೊಳಗೆ ತಾವು ಬೆರದಾರು ನೋಡಿ ೭

ಆಡಿನಕೊರಳೊಳಗಿರುವ । ಮೊಲೆ
ಜೋಡಿನಿಂದಲಿ ಹಾಲು ನಿತ್ಯದಿ ಕರೆವ
ಮಾಡುವ ಜಾತಿಸಂಕರವ । ಇಂತ
ಗಾಡಿಗತನವ ಬಲ್ಲವ ನಮ್ಮ ಗೊರವ ೮

ಶರಧಿಯೊಳಗೆ ಒಂದು ಹಳ್ಳ । ತಾನು
ಹರಿದು ಹರಿಯುತಿದೆ ನಿಲಕಾಲವಿಲ್ಲ
ಮರೆಮಾಜಲೇತಕೀ ಸೊಲ್ಲ । ಮುಕ್ತಿ-
ವರದ ಸದ್ಗುರು ಚೆನ್ನವೀರನೆ ಬಲ್ಲ ೯

## ೬೮ ದೃಢವಾಗದವಿರಳ ನಡೆನುಡಿ ಎಂದು ನೀ

ರಾಗ : ರೇಗುಪ್ತಿ

ದೃಢವಾಗದವಿರಳ ನಡೆನುಡಿ । ಎಂದು ನೀ
ತಡಬಡಗೊಂಬಲಿ ಬೇಡೆಲೆ ಮನವೆ ॥ ಪಲ್ಲವಿ ॥

ಸತ್ಯಸದ್ಗುರುವಿನ ತೊತ್ತಸೇವೆಗೆ । ತನು
ವಿತ್ತು ನಾ ನಿಜಭಕ್ತನಾದೆನೆಂಬೆ
ಕರ್ತೃ ಗುರು ಕರೆದು ಕಿಂಚಿತ್ ಸೇವೆಯ । ಪೇಳೆ
ಹೊತ್ತಲ್ಲ ಬಿಡಿರೆಂಬ ಕತ್ತೆ ಮನವೆ ೧

ಅನುಪಮಲಿಂಗದ ನೆನವು ನೆಲೆಸಿ । ಎನ್ನ
ಬಿನುಗುಬುದ್ಧಿಗಳೆಲ್ಲವಳಿದವೆಂಬೆ
ನಿನಗನ್ಯವಾಗಿಹ ಧನಕಾಮಿನಿಯರೊ- ।
ಳಿನಿತು ಮೋಹವ ಬಿಡೆ ಶುನಕ ಮನವೆ ೨

ಅಂದಿಂದು ಗಳಿಸಿದ ಕುಂದದರ್ಥವ । ಎನ್ನ
ತಂದೆ ಜಂಗಮಲಿಂಗಕ್ಕೀವೆನೆಂಬೆ
ಬಂದ ಜಂಗಮದೇವರೊಂದು । ಕಾಣೆಯ ಬೇಡೆ
ಹಿಂದೆ ಮೋರೆಯಾಗುವೆ ಹಂದೆ ಮನವೆ ೩

ಮಡದಿ ಮಕ್ಕಳು ನಾನು ಒಡೆಯರ । ದಾಸೋಹ-
ವಿಡಿದರಲ್ಲದೆ ಬದಲಿಲ್ಲವೆಂಬೆ
ಒಡೆಯ ಲಿಂಗಾರ್ಪಿತದೆಡೆಯೊಳು । ಭಿಕ್ಷವೆನ್ನೆ
ನಡೆಯುಯ್ಯ ಮುಂದಕ್ಕೆಂಬುವೆ ಹಡಕಿ ಮನವೆ ೪

ಎನ್ನ ಮನೆಯಲ್ಲಿ ಸುಪ್ರಸನ್ನ । ಸದ್‌ಗುರುಚರ-
ದುನ್ನತವಾದ ಬಿಡಾರವೆಂಬೆ
ಮುನ್ನ ಬಂದಯ್ಯ ತಾಸು ಚನ್ನಾಗಿ । ಕುಳಿತರೆ
ಇನ್ನು ಸಾಕೇಳೆಂಬೆ ಕುನ್ನಿ ಮನವೆ ೫

ಹೊರಗೆ ಕಂಡಲ್ಲಿ ಎನ್ನ ಹರಣದೊಡೆಯ । ಶಿವ
ಶರಣು ಮನೆಗೆ ಬನ್ನಿ ಸ್ವಾಮಿ ಎಂಬೆ
ಕರೆದ ಸದ್‌ಭಕ್ತನೆಂದು ಮರುದಿನ । ಮನೆಗೆ
ಬರೆ ಗ್ರಹ ಹೊಡೆದಂತೆ ಸುಮ್ಮನಿರುವೆ ಮರುಳು ಮನವೆ ೬

ರೊಕ್ಕದಿಂದಲಿ ಸೊಕ್ಕು ಸೊಕ್ಕಿನಿಂದಲಿ ದುಃಖ
ದುಃಖವೆಂಬುದು ಯಮಲೋಕವೆಂಬೆ
ರೊಕ್ಕದೊಳಗೆ ಲೆಕ್ಕ ಮುಕ್ಕಾಣೆ । ಹೋದರೆ
ಕಕ್ಕುಲತೆಯ ಬಿಡು ಚುಕ್ಕ ಮನವೆ ೭

ಬಲ್ಲವರಿಗೆ ಪರವಲ್ಲಭೆಯರ । ಸಂಗ
ಸಲ್ಲದ ನಡತೆಗಳೆಂದು ಪೇಳುವೆ
ಫುಲ್ಲಗಂಗಳೆಯರ ಚಲ್ವಿಕೆಗಳ । ಕಂಡು
ನಲ್ಲಾಟವಾಡುವೆ ಖುಲ್ಲಮನವೆ ೮

ನಡೆಯಂತೆ ನುಡಿ ನಿಜನುಡಿಯಂತೆ । ನಡೆ ತ-
ಕ್ಕಡಿ ತ್ರಾಸಿನಂತೆ ಹೆಚ್ಚು ಕಡಿಮೆ ಇಲ್ಲದೆ
ನಡೆನುಡಿಯೊಂದಾದೆನ್ನೊಡೆಯ ಶ್ರೀ । ಚೆನ್ನವೀರ
ನಡಿಯ ಭಕ್ತಿಯ ಮಾಡಿ ಪಡೆಯೊ ಮನವೆ ೯

## ೬೯ ಸೃಷ್ಟಿಯೊಳಗುದಿಸಿದ ಶರಣರಿಗಿಷ್ಟ ಸಿದ್ಧಿಯನಿತ್ತು

### ಭಾಮಿನಿ ಷಟ್ಪದಿ

ಸೃಷ್ಟಿಯೊಳಗುದಿಸಿದ ಶರಣರಿ-
ಗಿಷ್ಟ ಸಿದ್ಧಿಯನಿತ್ತು ಪಾಲಿಸು-
ವಷ್ಟವರಣ ಸ್ವರೂಪ ಚೆನ್ನವೀರ ನಮೋ ॥ ಪಲ್ಲವಿ ॥

ಗುರುವೆ ಪರಶಿವ ಶರಣರನುಭವ-
ದಿರುವೆ ದಯದಾಗರವೆ ಸುಖಸಾ-
ಗರವೆ ಪರಸ್ಕೃತಿಯ ಸಮ್ಯಕ್‌ಜ್ಞಾನ ಮಂದಿರವೆ
ಗುರುವೆ ದೀಕ್ಷಾಗುರುವೆ ಶಿಕ್ಷಾ
ಗುರುವೆ ಮೋಕ್ಷಾಗುರುವೆ ಸಾಕ್ಷಾತ್
ಗುರುಪರಾತ್ಪರಬೊಮ್ಮ ಸದ್ಗುರು ಚೆನ್ನವೀರ ನಮೋ ೧

ಲಿಂಗವಾಚಾರಾಂಗ ಗೌರವ
ಲಿಂಗ ಪರಶಿವೆಲಿಂಗ ಜಂಗಮ
ಲಿಂಗ ಶೇಷಸುಲಿಂಗ ಮಹ ಘನಲಿಂಗ ಕರದಿಷ್ಟ
ಲಿಂಗ ಪ್ರಾಣವು ಲಿಂಗಭಾವವು
ಲಿಂಗ ನಿಷ್ಕಳಲಿಂಗ ಶೂನ್ಯಕ
ಲಿಂಗ ಪರಮನಿರಂಜನ ಪ್ರಭು ಚೆನ್ನವೀರ ನಮೋ ೨

ಜಂಗಮವೆ ನಿರುಪಮ ನಿರಾವಯ
ಜಂಗಮವೆ ನಿಜಪರ ಚರಸ್ವಯ
ಜಂಗಮವೆ ಲಿಂಗಾಂಗವೆರಡರ ಸಂಗ ಸಹಚರ್ಯ
ಜಂಗಮವೆ ತ್ರೈಲೋಕ ಪಾವನ
ಜಂಗಮವೆ ಸದ್ಭಕ್ತಿವಾಹನ
ಜಂಗಮವೆ ಪ್ರಭುವರ ನಿರಂಜನ ಚೆನ್ನವೀರ ನಮೋ ೩

ಗುರುಪದೋದಕ ಲಿಂಗದಡಿ ಜಲ
ಪರಮ ಜಂಗಮದಂಘ್ರಿ ತೀರ್ಥ
ಸ್ಪರುಶನಾಂಬುವ ಧಾರಜಲವಾಪ್ಯಾಯನೋದಕವು
ಕರಸಲಿಲ ಪರಿಣಾಮವಾರಿಯು
ನಿರುತನಿನಾರ್ಮಾಂಬು ಸತ್ಯದ
ಚರಣಜಲವೆರಡೈದು ಹರಣನೆ ಚೆನ್ನವೀರ ನಮೋ ೪

ಗುರು ಸುಲಿಂಗದ ಶುದ್ಧಸಿದ್ಧವು
ವರಸುಜಂಗಮದ ಪ್ರಸಿದ್ಧವು
ಸ್ಫುರಿತವಾಪ್ಯಾಯನ ಸಮಯ ಪಚೇಂದ್ರಿಯರಹಿತ
ಕರಣಚಾರರಹಿತ ಪ್ರಸಾದಿಯು
ನಿರುತಸದ್ಭಾವವು ಸಮತಮಹ
ಪರಮೈಕದಶ ಶೇಷ ಕಾಯನೆ ಚೆನ್ನವೀರ ನಮೋ ೫

ಶಿರವೆ ಭಕ್ತಭುಜದ್ವಯಂ
ವರ ಮಹೇಶ ಪ್ರಸಾದಿ ಶರಿರವೆ
ಹರಣಲಿಂಗಿಯು ಚರಣಯುಗ ಶರಣೈಕ್ಯರುಗಳಷ್ಟಾ
ವರಣ ತನುವೆಂಟು ತೆರನೆಂ-
ದರಿದು ನಾಲ್ವತ್ತೆಂಟು ಸ್ಥಾನದಿ
ಪರಮ ಚಿದ್ಭಸಿತವನು ಧರಿಸುವ ಚೆನ್ನವೀರ ನಮೋ ೬

ಹರನು ರುದ್ರಾಕ್ಷಿಯನು ಫಣೆಯೊಳ್
ಧರಿಸಲೊಂದದರಿಂದ ಹರಿಯಜ
ಸುರಪ ಮನುಮುನಿ ದಿವಿಜ ತತಿಗಳ್ ಶರಣು ಹೋಗುತಿಹರು
ಹರಗಧಿಕ ಶಿವಶರಣರಹುದೆಂದರಿದು
ಕರ ಶಿರ ಕರ್ಣ ಕಂಠಾಭರಣ
ವರರುದ್ರಾಕ್ಷಿಯನು ಧರಿಸುವ ಚೆನ್ನವೀರ ನಮೋ ೭

ಆರು ಅಂಗಗಳಾರು ಲಿಂಗಗ-
ಳಾರು ಶಕ್ತಿಗಳಾರು ಭಕ್ತಿಗ-
ಳಾರು ಹಸ್ತಗಳಾರು ವ್ಯಕ್ತ ಪದಾರ್ಥ ಷಡ್ವಿಧವು
ಆರು ಶೇಷಗಳಷ್ಟವಿಧದಿಂ
ತೋರುತಿರ್ಪ ಸಕೀಲ ಮರ್ಮಗ-
ಳಾರು ವಿಧ ಷಣ್ಮಂತ್ರಮೂರ್ತಿಯೆ ಚೆನ್ನವೀರ ನಮೋ ೮

ಪರಮ ಶ್ರೀಗುರು ಲಿಂಗ ಜಂಗಮ
ಚರಣಜಲ ವರಶೇಷ ಭಸಿತವು
ಚಿರದ ರುದ್ರಾಕ್ಷೆಯು ಷಡಕ್ಷರ ಮಂತ್ರವೆನಿಪಷ್ಟಾ-
ವರಣವಂಗಾಚಾರ ಪಂಚಕ
ಹರಣ ನಡೆನುಡಿ ಚೆನ್ನವೀರನ
ಚರಣ ಮತ್ಕರ ಮನ ಸುಭಾವದೊಳಿರಲಿ ಸಂತಸದೊಳ್ ೯

## ೭೦ ತಾನೆ ಬೆಳಗುತಿದೆ

ರಾಗ : ನಾದರಾಮಕ್ರಿಯೆ

ತಾನೆ ಬೆಳಗುತಿದೆ ಸ್ವಯಂ ಜ್ಯೋತಿ । ತಾನೆ ಬೆಳಗುತಿದೆ
ಮಾನಸ ವಾಚಕ ಕಾಯಕದೊಳು ತನ್ನ ॥ ಪಲ್ಲವಿ ॥

ತನ್ನ ವಾಮಕರಪೀಠ ಪಾತ್ರೆಯೊಳು । ನಿರ್-
ಭಿನ್ನಭಕ್ತಿಯು ರಸತೈಲತೀವಿ
ಸನ್ನುತ ನಡೆನುಡಿ ಭಕ್ತಿವಿಡಿದು । ಸುಪ್ರ
ಸನ್ನ ಪ್ರಕಾಶ ಸತ್‌ಕ್ರಿಯಾ ಜ್ಯೋತಿ ೧

ಪರತತ್ತ್ವ ಹೃದಯ ಪಣಿತೆಯೊಳು । ಷಣ್ಮಂತ್ರ-
ದರುವೆಂಬಸುರಸ ತೈಲವ ಹೀರುತ
ವರದೃಢ ಚಿತ್ತಬತ್ತಿಯು ಕೊನೆಯೊಳು । ಲಿಂಗ
ಕಿರಣದೊಬ್ಬಳಿಯು ಸುಜ್ಞಾನ ಜ್ಯೋತಿ ೨

ಚಾರು ಸದ್‌ಭಾವ ಪಣಿತೆಯೊಳು । ತತ್ತ್ವವಿ-
ಚಾರ ಸುಸಾರ ಘೃತವನೀಂಟುತ
ಮೀರಿದಾಚರಣೆ ಬತ್ತಿಯು ಕೊನೆಯೊಳು । ಚೆನ್ನ-
ವೀರ ಮದ್‌ಗುರು ಮಹಾಜ್ಞಾನ ಜ್ಯೋತಿ

**ಸಂಪೂರ್ಣ**

ಶ್ರೀಗುರು ಬಸವಲಿಂಗಾಯ ನಮಃ

# ಲಿಂಗಪೂಜಾ ವಿಧಾನ

## ಭಾವನೋಪಚಾರ

ಕಂದ ॥ ಶ್ರೀ ಗುರುವೆ ಶರಣಜನ ಸುಖ
ಸಾಗರವೆ ನಿತ್ಯದಾಸೋಹಿಗಳ ಸುಮೋಕ್ಷ-
ದಾಗರವೆ ಎನ್ನ ಪಡೆದನು
ರಾಗದಿ ಸಲಹಯ್ಯ ತಂದೆ ಬಹು ಕೃಪೆಯಿಂದೆ ೧

ಶರಣು ಶ್ರೀ ಗುರುವಿನಂಘ್ರಿಗೆ
ಶರಣು ಕರಕಮಲದಿಷ್ಟಲಿಂಗದ ಪದಕಂ
ಶರಣು ಪರತತ್ತ್ವ ಜಂಗಮ
ಚರಣಕೆ ಇನ್ನುಳಿದ ಪಂಚಾವರಣಕೆ ಶರಣು ೨

ಚರಮೂರ್ತಿ ನಿಮ್ಮ ಶ್ರೀಪದ
ಸರಸಿಜಯುಗ್ಮಂಗಳೆನ್ನಯ ಕರ ಹೃದಯದೊಳಂ
ವರ ಕ್ರಿಯಾ ಜ್ಞಾನ ರೂಪದಿ
ಸ್ಥಿರಗೊಳಿಸಿ ಸಲಹು ದೇವಾ ವರ ಸಂಜೀವಾ ೩

ಶ್ರೀ ಗುರುವೆ ನಿಮ್ಮ ಸತ್‌ಕೃಪೆ
ಸಾಗರದೊಳೊಗೆದ ರತ್ನಾಕರ ಮಹಲಿಂಗವ
ಕೈಗೊಲಿದು ಕೊಟ್ಟೊಡದು ತಾ-
ನಾಗಿ ತಾ ಭಜಿಪ ಭಕ್ತಂ ಅವ ನಿಜಮುಕ್ತಂ ೪

ಎಲೆ ಗುರುವೆ ನಿಮ್ಮ ಶ್ರೀಕರ
ಜಲಜದೊಳೊಗೆದಿಷ್ಟಲಿಂಗವನು ತನ್ನಯ ಕರ
ಸ್ಥಲದೊಳಗೆ ಬಹುವಿಧಾರ್ಚನೆ
ಸಲೆಗೈದು ಫಲಪದವ ನೀಗಿದವ ಶಿವಯೋಗಿ ೫

### ೧ ಸಂಕಲ್ಪ

ಸಂಕಲ್ಪದಿ ವಿಕಲ್ಪದಾ
ಶಂಕೆಯನತಿಗಳೆದ ಪರಮ ಶ್ರೀಗುರುವಿನ ಪದ
ಪಂಕಜ ಮಕರಂದದೊಳಂ
ಝೇಂಕರಿಸುತಿರ್ಪ ಭೃಂಗಂ ಅದು ಮಹಲಿಂಗಂ ೬

### ೨ ಧ್ಯಾನ

ಮಾನಸ ವಾಚಕ ಕಾಯಕ
ಏನುವ ಸೋಂಕದಿಹ ಬಚ್ಚ ಬರಿಯರಿವದು ತಾಂ
ತಾನು ತಾನಾದ ವರಸು
ಜ್ಞಾನವೆ ಕರಿಗೊಂಡ ಮೌನಮದು ತದ್ಧ್ಯಾನಂ ೭

### ೩ ಆಹ್ವಾನ

ಶಿರದರ ಮನೆಯಧಿಕರ್ತನೆ
ಗುರುಕರಾಂಬುಜದೊಳೊಗೆದಾ ಪರಬ್ರಹ್ಮವೆ ನೀ
ಉರಸಜ್ಜೆಯಿಂದಲೆನ್ನಯ
ಕರಪೀಠಕೆ ಪೂಜೆಗೊಂಬಾತರುದಿಂದಲಿ ಬಾ ೮

### ೪ ಆಸನ

ನಯನವೆ ನಂದಾದೀವಿಗೆ
ಭಯ ಭಕ್ತಿ ಭೃತ್ಯ ಕಿಂಕರ ಚೌಮಣಿ ಮಂಚಂ
ಸ್ವಯ ಸುಜ್ಞಾನತಿವಾಸಿಗೆ
ಕ್ರಿಯ ಲಿಂಗಕೆನ್ನ ಕರಸಿಂಹಾಸನ ಲೇಸಂ ೯

### ೫ ಅರ್ಘ್ಯ

ತಿಲಗೋಕ್ಷೀರ ಕುಶಾಗ್ರಂ
ಬಿಳಿಸಾಸುವೆ ನೆಲ್ಲು ಜವೆಯ ಗೋದಿಯಿವಾರಂ
ಸಲಿಮಿಳಿತಮಾದ ಗುರುಪದ
ಜಲಮಿಷ್ಟಲಿಂಗ ಹಸ್ತಕ್ಕೆರಿವುದುದರ್ಘ್ಯಂ ೧೦

೬ ಪಾದ್ಯ

ಬಿಳಿಸಾಸುವೆ ಲಾವಂಚಂ
ಎಳೆದುರ್ವೆ ಕುಸುಮ ಕರ್ಪೂರ ಕೋಷ್ಟಮಿವಾರಂ
ಮಿಳಿತಪದೋದಕದಿಂ ಕರ
ಸ್ಥಳದಿಷ್ಟಲಿಂಗದಂಘ್ರಿಯುದೊಳೆವುದು ಪಾದ್ಯಂ ೧೧

೭ ಆಚಮನ

ಪರಿದೇಲಕ್ಕಿ ಖರ್ಜೂರಂ
ವರ ಜಾಫಲ ಕೋಷ್ಟ ಕುಂಕುಮ ಕರ್ಪೂರವಾರಂ
ಬೆರದ ಚರಚರಣಜಲದಿಂ-
ದುರೆ ಲಿಂಗ ಜಿಹ್ವೆ ಮುಕ್ಕುಳವಾಚಮನೀಯಂ ೧೨

೮ ಮಿಶ್ರ ಪಂಚಾಮೃತ

ಗೋದಧಿ ಗೋಘೃತ ಗೋಕ್ಷೀ-
ರಾದಿ ಮಧು ಶರ್ಕರದಿಂತೀ ಪಂಚಾಮೃತವ
ಪಾದೋದಕ ಮಿಶ್ರಂಗೈದ-
ನಾದಿ ಮಹದೇವಂಗಮೃತಭಿಷೇಕಂ ೧೩

೯ ಗೋಕ್ಷೀರ

ಭೂಲೋಕದೊಳಗೆ ತಾನಿ-
ರ್ದಾ ಲೋಕವೆ ಕೈಲಾಸವೆಂದು ನೆರೆನಂಬಿದರಂ
ಆಲೋಕಮಾತ್ರದಿಂದಲಿ
ಪಾಲಿಸುವಿಷ್ಟಲಿಂಗಕ್ಕೆ ಪಾಲಭಿಷೇಕಂ ೧೪

೧೦ ಗೋದಧಿ

ಬಸವನ ಮಲಮೂತ್ರಗಳಿಂ
ವಸುಧೆಯು ಪಾವನವದಾಗುತಿಹುದದರಿಂದಂ
ಬಸವನ ಘನವ ತ್ರಿಲೋಕಕೆ
ಪಸರಿಸುವ ಲಿಂಗದೇವಗೆ ಮೊಸರಭಿಷೇಕಂ ೧೫

೧೧ ಗೋಘೃತ

ಶ್ರುತಿತತಿ ನಿಗಮಕೆ ನಿಲುಕದ
ಅತಿಶಯದನುಮಿಷಲಿಂಗವ ಪಿಂಗದೆ ಕಂಗಳ್
ವ್ರತಹಿತರೆನಿಸುವ ಶರಣರ
ಗತಿಮತಿ ಚೈತನ್ಯಲಿಂಗಕೆ ಘೃತದಭಿಷೇಕಂ ೧೬

೧೨ ಮಧು

ಹೃದಯದ ಸಮ್ಯಗ್ ಜ್ಞಾನ-
ವದು ಬಹಿಷ್ಕರಿಸಿ ಲಿಂಗಾಕೃತಿಯಂ ಧರಿಸಿ
ಸದುಭಕ್ತನಂಗವಾಗಿಹ
ಸದಮಲಕರದಿಷ್ಟಲಿಂಗಕೆ ಮಧುವಭಿಷೇಕಂ ೧೭

೧೩ ಶರ್ಕರ

ಮುಕ್ಕಣ್ಣನಾಗಮೋಕ್ತವ
ಲೆಕ್ಕಿಸದ ವೀರಶೈವಸಂಗ್ರಹ ನೆಲಿಸಲ್
ತಕ್ಕ ಮಂದಿರವದೆನಿಪಾ-
ರಕ್ಕರದ ಲಿಂಗರಮಣಗೆ ಸಕ್ಕರೆ ಸ್ನಾನಂ ೧೮

೧೪ ಗಂಧೋದಕ

ಮುಂದೆ ಬಹ ಫಲಪದಂಗಳ
ದಂದುಗದ ಬೇರ ಕೀಳ್ವವರ ಕುದ್ದಾಲಂ
ಎಂದೆನಿಪ ಇಷ್ಟಲಿಂಗಕೆ
ಗಂಧೋದಕದ ಸೌಖ್ಯಾನಂದಾಭಿಷೇಕಂ ೧೯

೧೫ ನಾರಿಕೇಳೋದಕ

ಕಂಗಳ ಮೂರಿದರ್ಾಗಸ
ಗಂಗೆಯನು ಧರಿಸಿ ತಿಂಗಳ ಸೂಡಿಯು ಪಾಂಡು-
ರಂಗ ತಾನಲ್ಲವದು ನಾ-
ರಂಗದ ಫಲ ಪಾಲ್ ಇಷ್ಟಲಿಂಗಾಭಿಷೇಕಂ ೨೦

೧೬ ರತ್ನೋದಕ

ಯತ್ನ ಪ್ರಯತ್ನಗಳಿಂ ಪರ
ಪತ್ನಿಯು ಪರದ್ರವ್ಯ ದೈವಂಗಳ ಬಯಸದೆ ಬಹು
ಜತ್ನದಿ ಬಾಳುವಾ ಶರಣ
ಪತ್ನಿಯು ಪತಿ ಲಿಂಗಕ್ಕೆ ರತ್ನಾಭಿಷೇಕಂ ೨೧

೧೭ ಸ್ವರ್ಣೋದಕ

ಅನುಪಮಲಿಂಗವೆ ಶರಣನ
ತನು ಮನ ಭಾವದೊಳಗಿಷ್ಟ ಪ್ರಾಣ ಸುಭಾವಂ
ಎನಿಸಿ ಸುಜನಕರದೊಳಗಿಹ
ಘನಮಹಿಮ ಲಿಂಗಪತಿಗೆ ಕನಕಾಭಿಷೇಕಂ ೨೨

೧೮ ಭಸ್ಮೋದಕ

ನಾದವ ಬಿಂದು ಸುಕಳೆಯುಂ
ಸಾಧಿಸುವಷ್ಟಾಂಗಯೋಗಾಭ್ಯಾಸಕೆ ನಿಲುಕ-
ದಾದಿಕರದಿಷ್ಟಲಿಂಗಕೆ
ನಾದ ಕಳೆ ಬಿಂದುಮಯ ಭಸ್ಮೋದಕ ಸ್ನಾನಂ ೨೩

೧೯ ಪುಷ್ಪೋದಕ

ಸಕಲಶುಭೋದಯ ಭಕ್ತನ
ಮುಖಕಮಲದೊಳಗೆ ತಾನೈಮೊಗನಾಗಿರ್ಪಂ
ಅಕಳಂಕ ಲಿಂಗದೇವಗೆ
ಮುಖಕಳೆಗುಂದದ ಪುಷ್ಪೋದಕದಾಭಿಷೇಕಂ ೨೪

೨೦ ಪತ್ರೋದಕ

ಶ್ರೋತ್ರದಿ ಪಂಚಾಕ್ಷರಿ ಸುಪ-
ವಿತ್ರಮಯ ಭಸಿತ ರುದ್ರಾಕ್ಷಿಗಳನು ಧರಿಸಿದ
ಗಾತ್ರದ ಸದ್ಗುರು ಕರಶತ
ಪತ್ರದಿಷ್ಟಲಿಂಗಕ್ಕೆ ಪತ್ರಾಭಿಷೇಕಂ ೨೫

೨೧ ಫಲೋದಕ

ಸುಲಭ ಗುರುಲಿಂಗ ಚರಪದ
ಜಲಶೇಷಭಸಿತ ರುದ್ರಾಕ್ಷಿ ಪಂಚಾಕ್ಷರಿ
ಒಲಿದಂಗವಾದ ಗುರುಕರ
ಜಲದೊಳೊಗೆದಿಷ್ಟಲಿಂಗಕೆ ಫಲದಭಿಷೇಕಂ ೨೬

೨೨ ತಿಲೋದಕ

ಸುಳ್ಳಿನ ಸೀಮೆಯು ಮೆಟ್ಟದ
ಕಳ್ಪರ ಕಣಿವೆಯನುಯೇರಿ ಭವಗಿರಿಗಿಳಿಯುದ
ಒಳ್ಳೆಯ ಶರಣನ ಕರದೊಳ
ಗುಳ್ಳ ಮಹಲಿಂಗದೇವಗೆ ಎಳ್ಳಭಿಷೇಕಂ ೨೭

೨೩ ಆವ್ಲೋದಕ

ಪಿಸುಣಮದಗಜಕೆ ಸಿಂಗಂ
ವುಸಿಯು ಮನಮಾಯಾಭಂಗನೆನಿಸುವ ಲಿಂಗ-
ಕ್ಕೊಸೆದು ಮಾಡುವುದಾ ಬಣ್ಣ
ವೆಸೆವ ತನಿವಣ್ಣ ನಿಂಬಾರಸದಭಿಷೇಕಂ ೨೮

೨೪ ಪರಿಮಳೋದಕ

ಪರಮ ಮಹದಾನುಭಾವದ
ವರಸದ್ವಾಸನೆಯಿದೆಂದು ಪರಿಭಾವಿಸಿ ಕ-
ಸ್ತುರಿ ಮಕರಂದವೆರಸಿದ
ಪರಿಮಳಜಲದಿಂ ಕ್ರಿಯಾಲಿಂಗಾಭಿಷೇಕಂ ೨೯

೨೫ ನಿರ್ಮಲೋದಕ

ಒಲಿದಂತ-ಬಾಹ್ಯದರುವೆಯ
ಮಲಿನವ ತಾ ಕಳೆದು ತನ್ನಯು ಕಳೆಯುದ ಕಿತ್ತು
ಸಲೆಮುಡಿಯು ಮಾಡುತಿಹ ನಿ-
ರ್ಮಲ ಜಲದಿಂ ಶ್ರೀಗುರುಲಿಂಗಾಭಿಷೇಕಂ ೩೦

### ೨೬ ಉಷ್ಣೋದಕ

ಗುಪ್ತಮಹಾಜ್ಞಾನಾಗ್ನಿಯು
ಸಪ್ತವಿಧ ಭಕ್ತಿಯಿಂದಂ ಗೈದರುಹಿ
ಆಪ್ತ ಸತ್ಕ್ರಿಯೆ ಘಟದೊಳು
ತಪ್ತಮಾದುದಕಂ ಶಿವಲಿಂಗಾಭಿಷೇಕಂ ೩೧

### ೨೭ ಶೈತ್ಯೋದಕ

ತನ್ನಯ ಶಮೆದಮೆ ಶಾಂತಿಯು
ಚೆನ್ನತಂಪುದಕಮೆಂದು ಪರಿಭಾವಿಸುತೆ ಭಾ-
ವನ್ನ ಸಮ್ಮಿಶ್ರಮಾಗಿಹ
ಪನ್ನೀರಿನಿಂ ಜಂಗಮಲಿಂಗಾಭಿಷೇಕಂ ೩೨

### ೨೮ ಮಂತ್ರೋದಕ

ಯಂತ್ರದ ನಿಗಮವನಳಿದು ಕು-
ತಂತ್ರದಾಗಮವನೆ ಕಳೆದು ಷಣ್ಮಂತ್ರದ ಸ್ವಾ-
ತಂತ್ರ ಸಂಗ್ರಹ ಷಡಕ್ಷರ
ಮಂತ್ರೋದಕ ಪ್ರಸಾದಲಿಂಗಾಭಿಷೇಕಂ ೩೩

### ೨೯ ರುದ್ರಾಭಿಷೇಕ

ಕ್ಷುದ್ರ ನರಹರಿಯುುಸಿರ್ದ ಶ್ರೀ
ರುದ್ರವನತಿಗಳೆದು ಬಳಿಕಿಹಪರ ಸೌಖ್ಯಸ-
ಮುದ್ರಸುಮಹಲಿಂಗಕೆ ಭೂ-
ರುದ್ರನಾಗಿಯೆ ಮಾಳ್ಪುದು ರುದ್ರಾಭಿಷೇಕಂ ೩೪

### ೩೦ ಪಾದೋದಕ

ಗುರುಲಿಂಗ ಚರಪಾದೋದಕ
ಸ್ಫುರಿತನವಧಾರವಾಪ್ಯಾಯನ ಹಸ್ತೋದಕ
ಪರಿಣಾಮ ನಿರ್ನಾಮೋದಕ
ವರಸತ್ಯೋದಕದಿ ಲಿಂಗಮಜ್ಜನಗೈವೆಂ ೩೫

೩೧ ಅಂಗಾರಲೇಪನ

ಮೇಲೆ ಮೇಲೊದಗಿ ನೀಡುವ
ನಾಲಭಿಷೇಕಂ ಮುಗಿದಾ ತದನಂತರದೊಳ್
ಲೋಲ ಮಯ ಧೂಪ ಧೂಮ್ರದ
ಜ್ವಾಲೆಯೊಳಂಗಾರ ತಾಪನಮಂ ಮಾಡುವುದು ೩೬

೩೨ ವಸ್ತ್ರ

ಒಳಗಣ ಜ್ಞಾನಾಂಬರಮಂ
ಇಳೆಗದ ಬಹಿಷ್ಕರಿಸಿ ಕ್ರಿಯವಸ್ತ್ರಂಗೈದು
ತೊಳೆದು ಮಡಿಮಾಡಿ ಶ್ರೀಕರ
ತಳದಿಷ್ಟಲಿಂಗದಂಗಕ್ಕಾಚ್ಛಾದಿಸುವೆಂ ೩೭

೩೩ ವಿಭೂತಿ

ಭೂತಿಯು ಭಸ್ಮವು ಭಸಿತವು
ಈ ತೆರದ ಕ್ಷಾರ ರಕ್ಷೆಗಳೆಂಬೈದಂ
ಪ್ರೀತಿಯಿಂದೊಲಿದು ಗುರುಕರ
ಜಾತೇಷ್ಟಲಿಂಗ ಸರ್ವಾಂಗಕೆ ಧರಿಸುವೆ ನಾಂ ೩೮

೩೪ ರುದ್ರಾಕ್ಷಿ

ಈ ಕ್ಷಿತಿಯ ಪರಲೋಕದ
ಮೋಕ್ಷ ಕರ್ಮಂಗಳೆಂಬ ಸುಖದುಃಖಗಳಿಗೆ
ಸಾಕ್ಷಿಯಾಗಿಯೆ ತೋರ್ಪ ರು-
ದ್ರಾಕ್ಷಿಯ ಮಾಲೆಯನೆ ಇಷ್ಟಲಿಂಗಕೆ ಧರಿಪೆಂ ೩೯

೩೫ ಗಂಧ

ಕೋಷ್ಟ ಕರ್ಪೂರ ಜಾಪರ
ಶ್ರೇಷ್ಠಾಗುರು ಗಂಧ ಕಸ್ತುರಿ ಬಾಳ ತಮಾಲಂ
ಅಷ್ಟಗಂಧವನು ಶ್ರೀಕರ-
ದಿಷ್ಟಮಹಲಿಂಗದಂಗಕ್ಕನುಲೇಪಿಸುವೆಂ ೪೦

೩೬ ಅಕ್ಷತೆ

ಬಿಳಿಯ ತಿಲ ನಿವಳ ತಂಡುಲ
ತಿಳಿಗೋದುಮೆ ಚಣಕದೊಡಕುಮುದ್ದಿನ ವಿದಳಂ
ಮಿಳಿತಮಾದಕ್ಷತೆಯ ಕರ
ನಳಿನ ಸ್ಥಳದಿಷ್ಟಲಿಂಗದ ಪಣೆಗಾಂ ನೀಡುವೆಂ ೪೧

೩೭ ಪುಷ್ಪ

ಚೌದಳ ಷಡುದಳ ದಶದಳ
ದ್ವಾದಶದಳ ಷೋಡಶದ್ವಿದಳ ಕುಸುಮಗಳಂ
ಆದಿ ಶ್ರೀ ಇಷ್ಟಲಿಂಗದ
ಪಾದಾರವಿಂದಂಗಳ್ಗೆ ಧರಿಸುವೆ ಸತತಂ ೪೨

೩೮ ಪತ್ರೆ

ಶಶಿ ಭಾಸ್ಕರಾಗ್ನಿ ಈ ಮೂ-
ರ್ವೆಸರಕ್ಷಿಯ ಹುಟ್ಟೆ ಬಿಲ್ಲುಕಳೆ ಸರಳಂಬಿಂ-
ದೆಸೆವ ಶ್ರೀ ಬಿಲ್ವಪತ್ರೆಯ
ಅಸಮಾಕ್ಷ ಬಸವಲಿಂಗಕೆ ಧರಿಸುವೆ ಸತತಂ ೪೩

೩೯ ಧೂಪ

ಕರಿಯ ಬಿಳಿಯಗಿಲು ಗುಗ್ಗುಳ
ಅರಗು ಮಧು ರಾಳ ಕರ್ಪೂರ ಬಿಲ್ವಲ ಗಂಧಂ
ತುರುಘೃತ ಸಹಿತ ದಶಾಂಗಂ
ವರ ಧೂಪವಾ ಚರಲಿಂಗಕ್ಕಾರೋಪಿಸುವೆಂ ೪೪

೪೦ ದೀಪ

ಕರ್ಪೂರ ಧೂಪದ ಗಟ್ಟಿಯು
ಸರ್ಪಿಯು ತಿಲತೈಲ ಮುಂತಾದಖಿಳ ದೀಪವ
ಕರ್ಪೂರದಾಲಯದೊಳಗಿರು-
ತಿರ್ಪ ಶಿವಲಿಂಗ ದೇವಂಗೆತ್ತುವೆ ಸತತಂ ೪೫

### ೪೧ ನೈವೇದ್ಯ

ಹೂರಿಗೆ ಗಾರಿಗೆ ಪಾಯಸ
ಸೌರಭಘೃತ ರಂಭ ಕರ್ಜೂರ ದ್ರಾಕ್ಷ ಪಣ್ ಫಲ-
ಹಾರಮಿಂತಿವನು ಶ್ರೀಗುರು
ಕಾರುಣ್ಯಲಿಂಗಮೂರ್ತಿಗೆ ನೈವೇದಿಸುವೆಂ ೪೬

### ೪೨ ತಾಂಬೂಲ

ಎಳೆಎಲೆ ಸೋಸಿದ ಸುಣ್ಣಂ
ಕಳೆಯಡಕ್ಯಾಲಕ್ಕಿ ಜಾಫಲ ಪತ್ರಿ ಲವಂಗ
ಒಳಗಿಟ್ಟು ಮಡಿಚಿ ವೀಳ್ಯದ
ಗಳಿಗೆಯ ಕರದಿಷ್ಟ ಲಿಂಗದ ಮುಖಕಾಂ ಕೊಡುವೆಂ ೪೭

### ೪೩ ಘಂಟಾನಾದ

ಕಂಠಸ್ಥಾನದೊಳಿರುವೀ-
ರೆಂಟುದಳದಬ್ಜ ವಿಶುದ್ಧಿಯ ಕರ್ಣದ್ವಾರದ
ಮಂಟಪದ ಶೇಷಲಿಂಗಕೆ
ಘಂಟಾನಾದವ ಗಣಗಣದಿಂದರ್ಪಿಸುವೆಂ ೪೮

### ೪೪ ವ್ಯಜನ

ಮುನ್ನ ಹೃನ್ನಳಿನಮೆನಿಸುವ
ಪನ್ನೆರಡುದಳದನಾಹತ ತ್ವಙ್ಮುಖದೊಳಗಿ-
ಪ್ಪುನ್ನತ ಜಂಗಮ ಲಿಂಗಕೆ
ಸನ್ನುತ ಸೌರಭದ ಮಂದಮಾರುತವ್ಯಜನಂ ೪೯

### ೪೫ ದರ್ಪಣ

ಪ್ರಕಟಿತ ನಡುನಾಭಿಯೊಳಿಹ
ವಿಕಸಿತವೀರೈದು ದಳದ ಮಣಿಪೂರಕ ದ್ವಾ-
ರಕದ ನಡುಮನೆಯೊಳೊಪ್ಪುವ
ಸುಖಕರ ಶಿವಲಿಂಗಮುಖಕೆ ಮುಕುರವ ತೋರ್ಪೆಂ ೫೦

೪೬ ಚಾಮರ

ಸರಸದಿ ಗುಹ್ಯಸ್ಥಾನದೊ-
ಳಿರುವವಾರುದಳದ ಸ್ವಾದಿಷ್ಠಾನದ ಮುಖದೊಳ್-
ಮರೆಯದೆ ಷಣ್ಮಂತ್ರವನು-
ಚ್ಚರಿಸುವ ಗುರುಲಿಂಗಕೆ ಚಾಮರಡಾಳಿಸುವೆಂ ೫೧

೪೭ ಆತಪತ್ರ

ಓತು ಗುದಸ್ಥಾನದೊಳಿಹ
ಚಾತುರ್ದಳ ಕಂಜದಾಧಾರದ ಮನೆಯ ಪಾ-
ನೀತದಾಚಾರ ಲಿಂಗಕೆ
ಪ್ರೀತಿಯಿಂದಾತಪತ್ರಸುಛತ್ರವ ಪಿಡಿವೆಂ ೫೨

೪೮ ವಾದ್ಯ

ಸಹಜದಿಂ ಭ್ರೂಕುಟಿಸ್ಥಳದೊ-
ಳಿಹ ದ್ವಿದಳದಾಜ್ಞೆ ಮಂಟಪದ ಮಹಾಲಿಂಗಕೆ
ಕಹಳೆಯು ಭೇರಿ ಮೃದಂಗಂ
ಬಹುವಿಧದ ಗೀತವಾದ್ಯಂಗಳನೊಪ್ಪಿಸುವೆಂ ೫೩

೪೯ ಪುಷ್ಪಾಂಜಲಿ

ಮಲ್ಲಿಗೆ ಸಾದರಿ ಬಕುಳಂ
ಮೊಲ್ಲೆಯುದಿರ್ಗಂಚಿ ಜಾಜಿವರಕರವೀರಂ
ಎಲ್ಲ ಬಹು ಪುಷ್ಪದಿಂ ಕರ-
ದಲ್ಲಿರ್ಪ ಲಿಂಗಕ್ಕೆ ಪುಷ್ಪಾಂಜಲಿಗೈವೆಂ ೫೪

೫೦ ಪ್ರದಕ್ಷಿಣ

ಪೂರಕರೇಚಕ ಕುಂಭಕ
ಮಾರುತ ಮನಮಂತ್ರಮಾಗಿ ಮೂರೇಳ್ಸಾಸಿರ
ಆರುಶತ ವೇಳೆ ಸ್ವರ ಜಪ
ಪೂರೈಸೆ ಪ್ರಾಣಲಿಂಗ ಪ್ರದಕ್ಷಿಣವೆನಿಕುಂ ೫೫

೫೧ ಶರಣಾರ್ಥಿ

ಶರಣೆಂಬೆ ಇಷ್ಟಲಿಂಗಕೆ
ಶರಣೆಂಬೆ ನಿಚ್ಚಪ್ರಾಣಲಿಂಗದ ಪದಕಂ
ಪರತರ ವರಸದ್ಭಾವದ
ಕರದೊಳಿಹ ಭಾವಲಿಂಗಕೆ ಶರಣೆನುತಿಹೆನಾಂ ೫೬

೫೨ ನೀರಾಜನ

ಅಷ್ಟವಿಧಾರ್ಚನೆಗಳಂ ವಿ-
ಶಿಷ್ಟದುಪಚಾರಗಳನು ಕೈಕೊಂಬುವಾ ಕರ-
ದಿಷ್ಟ ಗುರು ಚೆನ್ನವೀರನ
ಶ್ರೇಷ್ಠ ಶ್ರೀಪಾದಕಾರತಿ ಬೆಳಗುವೆ ಸತತಂ ೫೭

ಇತಿ ಮೈಲಾರ ಬಸವಲಿಂಗ ಶರಣ ಕವಿಕೃತ
ಲಿಂಗಪೂಜಾ ವಿಧಾನಂ
ಸಂಪೂರ್ಣಂ
ಮಂಗಳ ಮಹಾ ಶ್ರೀ

# ಅನುಬಂಧ

## ಏಕಾದಶ ಪ್ರಸಾದ

೧ ಗುರು ಪ್ರಸಾದ (ಶುದ್ಧ ಪ್ರಸಾದ), ೨ ಲಿಂಗ ಪ್ರಸಾದ (ಸಿದ್ಧ ಪ್ರಸಾದ), ೩ ಜಂಗಮ ಪ್ರಸಾದ (ಪ್ರಸಿದ್ಧ ಪ್ರಸಾದ), ೪ ಪ್ರಸಾದಿಯ ಪ್ರಸಾದ, ೫ ಸಮಯ ಪ್ರಸಾದ, ೬ ಭೋಜ್ಯ ಪ್ರಸಾದ, ೭ ಆಪ್ಯಾಯನ ಪ್ರಸಾದ, ೮ ಭಕ್ಷ್ಯ ಪ್ರಸಾದ, ೯ ಚೋಹ್ಯ ಪ್ರಸಾದ, ೧೦ ಲೇಹ್ಯ ಪ್ರಸಾದ, ೧೧ ತೃಪ್ತಿ ಪ್ರಸಾದ.

## ದಶವಿಧ ಪಾದೋದಕ

೧ ಗುರು ಪಾದೋದಕ, ೨ ಲಿಂಗ ಪಾದೋದಕ, ೩ ಜಂಗಮ ಪಾದೋದಕ, ೪ ಸ್ಪರ್ಶನೋದಕ, ೫ ಅವಧಾನೋದಕ, ೬ ಆಪ್ಯಾಯನೋದಕ, ೭ ಹಸ್ತೋದಕ, ೮ ಪರಿಮಾಣೋದಕ, ೯ ನಿರ್ನಾಮೋದಕ, ೧೦ ಸತ್ಯೋದಕ.

## ನವ ಲಿಂಗಗಳು

೧ ಆಚಾರ ಲಿಂಗ, ೨ ಗುರುಲಿಂಗ, ೩ ಶಿವಲಿಂಗ, ೪ ಜಂಗಮಲಿಂಗ, ೫ ಪ್ರಸಾದ ಲಿಂಗ, ೬ ಮಹಲಿಂಗ, ೭ ಇಷ್ಟಲಿಂಗ (ನಿಷ್ಕಳಲಿಂಗ), ೮ ಪ್ರಾಣ ಲಿಂಗ (ನಿಃಶೂನ್ಯಲಿಂಗ), ೯ ಭಾವಲಿಂಗ (ನಿರಂಜನಲಿಂಗ).

## ಅಷ್ಟಾವರಣಗಳು

೧ ಗುರು, ೨ ಲಿಂಗ, ೩ ಜಂಗಮ, ೪ ಪಾದೋದಕ, ೫ ಪ್ರಸಾದ, ೬ ವಿಭೂತಿ, ೭ ರುದ್ರಾಕ್ಷಿ, ೮ ಮಂತ್ರ.

## ಷಟ್‌ಸ್ಥಲಗಳು

೧ ಭಕ್ತ, ೨ ಮಹೇಶ, ೩ ಪ್ರಸಾದಿ, ೪ ಪ್ರಾಣಲಿಂಗಿ, ೫ ಶರಣ, ೬ ಐಕ್ಯ.

## ಪಂಚಾಚಾರಗಳು

೧ ಲಿಂಗಾಚಾರ, ೨ ಸದಾಚಾರ, ೩ ಭೃತ್ಯಾಚಾರ, ೪ ಶಿವಾಚಾರ, ೫ ಗಣಾಚಾರ.

| ಅಂಗತ್ರಯ | ಲಿಂಗತ್ರಯ | ಮಲತ್ರಯ | ದೀಕ್ಷಾತ್ರಯ | ಶರೀರತ್ರಯ |
|---|---|---|---|---|
| ೧ ತ್ಯಾಗಾಂಗ | ಇಷ್ಟಲಿಂಗ | ಆಣವಮಲ | ಕ್ರಿಯಾದೀಕ್ಷೆ | ಸ್ಥೂಲ |
| ೨ ಭೋಗಾಂಗ | ಪ್ರಾಣಲಿಂಗ | ಮಾಯಾಮಲ | ಮಂತ್ರದೀಕ್ಷೆ | ಸೂಕ್ಷ್ಮ |

೩. ಯೋಗಾಂಗ ಭಾವಲಿಂಗ ಕಾರ್ಮಿಕಮಲ ವೇಧಾದೀಕ್ಷೆ ಕಾರಣ

| ಜೀವತ್ರಯ | ಅವಸ್ಥಾತ್ರಯ | ಗುಣತ್ರಯ | ಆತ್ಮತ್ರಯ |
|---|---|---|---|
| ೧ ವಿಶ್ವ | ಜಾಗ್ರ | ಸತ್ತ್ವ | ಜೀವಾತ್ಮ |
| ೨ ತೈಜಸ | ಸ್ವಪ್ನ | ರಜ | ಅಂತರಾತ್ಮ |
| ೩ ಪ್ರಾಜ್ಞ | ಸುಷುಪ್ತಿ | ತಮ | ಪರಮಾತ್ಮ |

## ದಶ ವಾಯುಗಳು

೧ ಪ್ರಾಣ, ೨ ಅಪಾನ, ೩ ವ್ಯಾನ, ೪ ಉದಾನ, ೫ ಸಮಾನ, ೬ ನಾಗ, ೭ ಕೂರ್ಮ, ೮ ಕೃಕರ, ೯ ದೇವದತ್ತ, ೧೦ ಧನಂಜಯ.

## ಅಂತರಂಗದಷ್ಟ ಮದಗಳು

೧ ಸಂಸ್ಥಿತ, ೨ ತೃಣೀಕೃತ, ೩ ವರ್ತಿನಿ, ೪ ಕ್ರೋಧಿನಿ, ೫ ಮೋಹಿನಿ, ೬ ಅತಿಚಾರಿಣಿ, ೭ ಗಂಧಚಾರಿಣಿ, ೮ ವಾಸಿನಿ.

## ಬಹಿರಂಗದಷ್ಟ ಮದಗಳು

೧ ಕುಲ, ೨ ಛಲ, ೩ ಧನ, ೪ ರೂಪು, ೫ ಯೌವನ, ೬ ವಿದ್ಯಾ, ೭ ರಾಜ್ಯ, ೮ ತಪ.

## ಸಪ್ತ ವ್ಯಸನಗಳು

೧ ತನುವ್ಯಸನ, ೨ ಮನವ್ಯಸನ, ೩ ಧನವ್ಯಸನ, ೪ ರಾಜ್ಯವ್ಯಸನ, ೫ ವಿಶ್ವವ್ಯಸನ, ೬ ಉತ್ಸಾಹವ್ಯಸನ, ೭ ಸೇವಕವ್ಯಸನ.

## ಷಡೂರ್ಮಿಗಳು

೧ ಹಸಿವು, ೨ ನೀರಡಿಕೆ, ೩ ಸುಖ, ೪ ದುಃಖ, ೫ ಜನನ, ೬ ಮರಣ.

## ಅರಿಷಡ್ವರ್ಗಗಳು

ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ,

## ಕರ್ಮೇಂದ್ರಿಗಳು

ಗುದ, ಗುಹ್ಯ, ಪಾದ, ಪಾಣಿ, ವಾಕ್ಕು ಬಿಡುವದು, ಮೋಹಿಸುವದು, ನಡೆಯುವದು, ಹಿಡಿಯುವದು, ಮಾತಿಡುವದು.

## ಷಟ್‌ಕರಣಗಳು

ಚಿತ್ತ, ಬುದ್ಧಿ, ಅಹಂಕಾರ, ಮನ, ಜ್ಞಾನ, ಭಾವ.

# ಅಷ್ಟವಿಧ ಸಕೀಲಗಳು

| | | | | | | | | |
|---|---|---|---|---|---|---|---|---|
| ೧ | ಚಕ್ರ | ಆಧಾರ, | ಸ್ವಾಧಿಷ್ಠಾನ, | ಮಣಿಪೂರಕ, | ಅನಾಹತ, | ವಿಶುದ್ಧಿ, | ಆಜ್ಞಾ |
| | ಸ್ಥಾನ | ಗುದ, | ಗುಹ್ಯ (ಲಿಂಗ) | ನಾಭಿ, | ಹೃದಯ, | ಕಂಠ, | ಭ್ರೂಮಧ್ಯ |
| | ದಳ | * ೪, | ೬, | ೧೦ | ೧೨ | ೧೬, | ೨ |
| ೨ | ಅಂಗ | ಭಕ್ತ, | ಮಹೇಶ, | ಪ್ರಸಾದಿ, | ಪ್ರಾಣಲಿಂಗಿ, | ಶರಣ, | ಐಕ್ಯ |
| ೩ | ಲಿಂಗ | ಆಚಾರಲಿಂಗ, | ಗುರುಲಿಂಗ, | ಶಿವಲಿಂಗ, | ಜಂಗಮಲಿಂಗ, | ಪ್ರಸಾದಲಿಂಗ, | ಮಹಾಲಿಂಗ |
| | ಪ್ರಣವ | ನಕಾರ, | ಮಕಾರ, | ಶಿಕಾರ, | ವಕಾರ, | ಯಕಾರ, | ಓಂಕಾರ |
| ೪ | ಮುಖ | ಘ್ರಾಣ, | ಜಿಹ್ವೆ, | ನೇತ್ರ, | ತ್ವಕ್ಕು, | ಶ್ರೋತ್ರ, | ಹೃದಯ |
| ೫ | ಶಕ್ತಿ | ಕ್ರಿಯಾಶಕ್ತಿ, | ಜ್ಞಾನಶಕ್ತಿ, | ಇಚ್ಛಾಶಕ್ತಿ, | ಆದಿಶಕ್ತಿ, | ಪರಾಶಕ್ತಿ, | ಚಿಚ್ಛಕ್ತಿ |
| ೬ | ಭಕ್ತಿ | ಶ್ರದ್ಧಾಭಕ್ತಿ, | ನಿಷ್ಠಾಭಕ್ತಿ, | ಸಾವಧಾನಭಕ್ತಿ, | ಅನುಭವಭಕ್ತಿ, | ಆನಂದಭಕ್ತಿ, | ಸಮರಸಭಕ್ತಿ |
| ೭ | ಹಸ್ತ | ಸುಚಿತ್ತ, | ಸುಬುದ್ಧಿ | ನಿರಹಂಕಾರ, | ಸುಮನಸ್ಸು | ಸುಜ್ಞಾನ, | ಸದ್ಭಾವ |
| ೮ | ಪದಾರ್ಥ | ಗಂಧ, | ರಸ, | ರೂಪು, | ಸ್ಪರ್ಶ, | ಶಬ್ದ, | ತೃಪ್ತಿ |
| | ಪ್ರಸಾದ | ಸುಗಂಧ, | ಸುರಸ, | ಸುರೂಪು, | ಸುಸ್ಪರ್ಶ, | ಸುಶಬ್ದ, | ಸುತೃಪ್ತಿ |

* ವ, ಶ, ಷ, ಸ, ನಾಲ್ಕುದಳಗಳು ಆಧಾರಚಕ್ರ

ಬ, ಭ, ಮ, ಯ, ರ, ಲ, ಆರು ದಳಗಳು ಸ್ವಾದಿಷ್ಠಾನ ಚಕ್ರ

ಡ, ಢ, ಣ, ತ, ಥ, ದ, ಧ, ನ, ಪ, ಫ, ಹತ್ತು ದಳಗಳು, ಮಣಿಪೂರಕ ಚಕ್ರ

ಕ, ಖ, ಗ, ಘ, ಙ, ಚ, ಛ, ಜ, ಝ, ಞ, ಟ, ಠ, ಹನ್ನೆರಡು ದಳಗಳು ಅನಾಹತ ಚಕ್ರ

ಅ, ಆ, ಇ, ಈ, ಉ, ಊ, ಋ, ೠ, ಌ, ೡ, ಏ, ಐ, ಓ, ಔ, ಅಂ, ಅಃ, ಹದಿನಾರು ದಳಗಳು ವಿಶುದ್ಧಿ ಚಕ್ರ

ಹಂ, ಕ್ಷಂ, ಎರಡು ದಳಗಳು ಆಜ್ಞಾ ಚಕ್ರ

## ೨೮ ದೀಕ್ಷೆಗಳು

| | | |
|---|---|---|
| ವೇದಾ ದೀಕ್ಷೆ | ಮಂತ್ರ ದೀಕ್ಷೆ | ಕ್ರಿಯಾ ದೀಕ್ಷೆ |
| ಏಕಾಗ್ರಚಿತ್ತ ದೀಕ್ಷೆ | ಸಮಯ ದೀಕ್ಷೆ | ಆಜ್ಞಾ ದೀಕ್ಷೆ |
| ದೃಢವ್ರತ ದೀಕ್ಷೆ | ನಿಃಸಂಸಾರ ದೀಕ್ಷೆ | ಉಪಮಾ ದೀಕ್ಷೆ |
| ಪಂಚೇಂದ್ರಿಯಾರ್ಪಿತ ದೀಕ್ಷೆ | ನಿರ್ವಾಣ ದೀಕ್ಷೆ | ಸ್ವಸ್ತಿಕಾರೋಹಣ ದೀಕ್ಷೆ |
| ಅಹಿಂಸಾ ದೀಕ್ಷೆ | ತತ್ತ್ವ ದೀಕ್ಷೆ | ಕಲಶಾಭಿಷೇಕ ದೀಕ್ಷೆ |
| ಲಿಂಗನಿಷ್ಠಾ ದೀಕ್ಷೆ | ಆಧ್ಯಾತ್ಮ ದೀಕ್ಷೆ | ವಿಭೂತಿಪಟ್ಟ ದೀಕ್ಷೆ |
| ಮನೋರ್ಲಯ ದೀಕ್ಷೆ | ಅನುಗ್ರಹ ದೀಕ್ಷೆ | ಲಿಂಗಾಯತ ದೀಕ್ಷೆ |
| ಸದ್ಯೋನ್ಮುಕ್ತಿ ದೀಕ್ಷೆ | ಸತ್ಯಶುದ್ಧ ದೀಕ್ಷೆ | ಲಿಂಗಸ್ವಾಯತ ದೀಕ್ಷೆ |

# ೪೮ ಸ್ಥಾನಂಗಳ ವಿವರ

೧ ಬ್ರಹ್ಮರಂಧ್ರ
೨ ಲಲಾಟ
೩ ಬಲದ ಕರ್ಣ
೪ ಎಡದ ಕರ್ಣ
೫ ಬಲದ ನೇತ್ರ
೬ ಎಡದ ನೇತ್ರ
೭ ಬಲದ ನಾಶಿಕ
೮ ಎಡದ ನಾಶಿಕ
೯ ಜಿಹ್ವೆ
೧೦ ಬೆನ್ನು
೧೧ ಕಂಠ
೧೨ ಬಲದ ಭುಜ
೧೩ ಎಡದ ಭುಜ
೧೪ ಬಲದ ತೋಳು
೧೫ ಎಡದ ತೋಳು
೧೬ ಬಲದ ಮುಂಗೈ
೧೭ ಎಡದ ಮುಂಗೈ
೧೮ ಬಲದ ಬದಿ
೧೯ ಎಡದ ಬದಿ
೨೦ ಹೃದಯ
೨೧ ನಾಭಿ
೨೨ ಕಟಿ
೨೩ ಗುಹ್ಯ
೨೪ ಗುದ
೨೫ ಬಲದ ತೊಡಿ
೨೬ ಎಡದ ತೊಡಿ
೨೭ ಬಲದ ಮಣಿಪಾದ
೨೮ ಎಡದ ಮಣಿಪಾದ
೨೯ ಬಲದ ಕಣಪಾದ
೩೦ ಎಡದ ಕಣಪಾದ
೩೧ ಬಲದ ಹರಡಿ
೩೨ ಎಡದ ಹರಡಿ
೩೩ ಬಲದ ಮೇಗಾಲು
೩೪ ಎಡದ ಮೇಗಾಲು
೩೫ ಬಲದ ಉಂಗುಷ್ಠ
೩೬ ಎಡದ ಉಂಗುಷ್ಠ
೩೭ ಬಲದ ಅಡಿಪಾದ
೩೮ ಎಡದ ಅಡಿಪಾದ
೩೯ ಆಧಾರ
೪೦ ಸ್ವಾಧಿಷ್ಠಾನ
೪೧ ಮಣಿಪೂರಕ
೪೨ ಅನಾಹತ
೪೩ ವಿಶುದ್ಧಿ
೪೪ ಆಜ್ಞೇಯ
೪೫ ಬ್ರಹ್ಮಚಕ್ರ
೪೬ ಶಿಖಾಚಕ್ರ
೪೭ ಪಶ್ಚಿಮಚಕ್ರ
೪೮ ಅಣುಚಕ್ರ

# ಶಬ್ದಕೋಶ

(ಕೆಲವು ಶಬ್ದಗಳಿಗೆ ಸಂಕೇತಾರ್ಥವನ್ನೇ ಕೊಟ್ಟಿದೆ)

ಅಂಗತ್ರಯ-ತ್ಯಾಗಾಂಗ, ಭೋಗಾಂಗ, ಯೋಗಾಂಗ
ಅಂಗನೆ-ಮಾಯೆ
ಅಂಗವಿಸು-ಪ್ರಕಾಶಿಸು, ಚದರಿಸು
ಅಣಿಮ-ಎಂಟು ಸಿದ್ಧಿಯೊಳಗಿನ ದೊಂದು ಸಿದ್ಧಿ
ಅಣು-ಬಹು ಸಣ್ಣ ವಸ್ತು
ಅಣುಗ-ಹುಡುಗ
ಅತಿಗಳೆದು-ಬೇಡವೆಂದು ಹೇಳಿ
ಅಮಳೈಕ್ಯ-ಕಂಠದ ಒಳಭಾಗ
ಅರ್ಕ-ಸೂರ್ಯ
ಅರ್ತಿ-ಉಪದ್ರವ
ಅಪ್ರತಿಮ-ಸರಿಯಿಲ್ಲದವ
ಅರಿವೊರೆದ-ಜ್ಞಾನವನ್ನು ಬೋಧಿಸಿದ
ಅಸಮಾಕ್ಷ-ಶಿವ
ಅಳವಡು-ಮನನವಾಗು, ಅನುಭವದಲ್ಲಿ ಬರು
ಅಹಃ-ಹಗಲು
ಅಳವು-ಸಾಮರ್ಥ್ಯ

**ಆ**

ಆಗರ-ಆಶ್ರಯ
ಆಗಸ-ಆಕಾಶ
ಆಣತಿ-ಆಜ್ಞೆ
ಆಣ್ಮ-ಒಡೆಯ
ಆತಪತ್ರ-ಕೊಡೆ
ಆಂತು-ಧರಿಸಿ, ಹೊಂದಿ
ಆಪನಿತು-ಸಾಧ್ಯವಾದಷ್ಟು
ಆಪ್ಯಾಯನ ಸಂತೋಷಪಡಿಸೋಣ
ಆರೋಗ(ಣೆ)ಣೆ-ಊಟ

**ಇ**

ಇಕ್ಕೆಲ-ಎರಡು ಕಡೆ
ಇಕ್ಕೇರಿ ಬೀದಿ-ಬಾಯಿಯ ವಿಷಯ
ಇಂಗಿತ-ಮನಸ್ಸಿನೊಳಗಿನ ಗುಟ್ಟು
ಇನ-ಸೂರ್ಯ
ಇನಿತು-ಇಷ್ಟು
ಇಳ್ಳು (ಇರುಳು)-ರಾತ್ರಿ

**ಉ**

ಉನ್ಮನ-ನಿವೃತ್ತಿ ಮಾರ್ಗದ ಮನಸ್ಸು
ಉಪಾಧಿ-ಧರ್ಮವಿಚಾರ
ಉರುವಣಿಗೆ-ಉಪದ್ರವ
ಉರೆ-ಚೆನ್ನಾಗಿ

**ಎ**

ಎಣೆ(ಣೆ)-ಸಮ, ಸರಿ
ಎಮ್ಮ ಮಗ-ಕೋಣ
ಎರವು-ಹೆಚ್ಚು ಕಡಿಮೆ
ಎಲ್ಲಾಗಲು-ಯಾವಾಗಲೂ
ಎಸಳು-ಹೂವಿನ ದಳ
ಎಸೆವ ಶೋಭಿಸುವ

ಒ

ಒಬ್ಬುಳಿ-ಸಮುದಾಯ
ಒಂಭತ್ತು ತೂತಿನ ಕುಂಭ-ಒಂಭತ್ತು ಬಾಗಿಲಿನ ದೇಹ
ಒಯ್ಯಾಳಿ(ವೈಹಾಳಿ)-ಕುದುರೆಯ ಆರೋಹಣ
ಒರತೆ-ನೀರಿನ ಬುಗ್ಗೆ
ಒರೆದ-ಬೋಧಿಸಿದ

ಓ

ಓತು-ಪ್ರೀತಿಸಿ

ಕ

ಕಕ್ಷ-ಬಗಲು
ಕಂಚುಕ-ಹೊದಿಕೆಯ ವಸ್ತ್ರ
ಕಂಜ-ಕಮಲ
ಕಟಿ-ಲಿಂಗದ ವೃತ್ತದ ಮೇಲಿರುವ ತಗ್ಗಿನ ಭಾಗ
ಕಟ್ಟುಸೂತ್ರ-ಕೌಪೀನವನ್ನು ಧರಿಸುವ ಸೂತ್ರ
ಕಣ್ಣ ಕುಪ್ಪೆ ಕಣ್ಣಿನ ರೆಪ್ಪೆ
ಕರಕಂಜ-ಕೈ ಎಂಬ ಕಮಲ
ಕರಿಯ ಬಣ್ಣದ ಪಕ್ಷಿ-ಅಜ್ಞಾನ
ಕವಚ-ರಕ್ಷಣಾರ್ಥ ಸ್ತೋತ್ರ
ಕಸ-ಕಶ್ಮಲ, ಮಲಿನ
ಕಾಂತಾ-ಹೆಂಗಸು
ಕಾಶಿಮೂಶಿಯ ಮೃಗ-ಅಹಂಕಾರದ ಮನುಷ್ಯ (ಮೊಲ)
ಕಾಷಾಂಬರ-ಕೆಂಪು ಬಟ್ಟೆ
ಕಿಸುಕುಳ-ನಿಂದಿಸುವ, ತಪ್ಪು ಹೊರಿಸುವ
ಕೀಲಿಸು-ಗಟ್ಟಿಮಾಡು
ಕುದ್ದಾಲ-ಗುದ್ದಲಿ
ಕುರುವು-ಗುರುತು
ಕುಹಕಿ-ಕಪಟ
ಕೆನೆವಾಲು-ತೀರ್ಥಪ್ರಸಾದ
ಕೈಸಾರ್ದ-ಕೈಗೂಡಿದ
ಕೊಟ್ಟಣ-ಭತ್ತ ಕುಟ್ಟೋಣ
ಕೋಟಲೆ-ಕಷ್ಟ, ದುಃಖ
ಖೇಚರ-ದೇವತೆ

ಗ

ಗಜಬಜ-ಗೊಂದಲ
ಗಂಭೀರ-ಸೂಕ್ಷ್ಮ
ಗಳ-ಕಂಠ
ಗಾಳಿಗಿಕ್ಕಿದ ಸೊಡರು-ದೇಹಾಭಿಮಾನ
ಗುಡಿ-ಬಣ್ಣ
ಗೋಮುಖ-ಲಿಂಗದ ಎಡಗಡೆಗೆ ಚಾಚಿರುವ ಭಾಗ
ಘಟ-ಶರೀರ

ಚ

ಚಣಕ-ಕಡ್ಲೆ
ಚತುರ್ವಿಧ ಸಾರಾಯ-ಗುರು, ಲಿಂಗ, ಜಂಗಮ, ಪ್ರಸಾದ ಈನಾಲ್ಕು ಕೂಡಿದ್ದು.
ಚಿದ್ರಸ-ಜ್ಞಾನಸ್ವರೂಪವಾದ ರಸ
ಚಿತ್ಪೀಠ-ಲಿಂಗದಲ್ಲಿಯ ಬಾಣ
ಚಿಂತಾಲು-ತ್ರಾಸು, ತಕ್ಕಡಿ
ಚಿಲುಮೆ-ನೀರಿನ ಬುಗ್ಗೆ

ಜ

ಜಸ-ಯಶ, ಕೀರ್ತಿ

ಲೆಂಕ-ಭಕ್ತ, ಸೇವಕ

ವ

ವರ್ತುಳ-ಲಿಂಗದ ಗೋಮುಖದ ಮೇಲಿನ ಸುತ್ತು

ವ್ಯಕ್ತ-ಪ್ರತ್ಯೇಕ

ವ್ಯಜನ-ಬೀಸಣಿಕೆ

ವಾರಿ-ನೀರು

ವಾಚಾಮಗೋಚರ-ಹೇಳುವದಕ್ಕೆ ಅಸಾಧ್ಯವಾದಂಥ

ವಾನರ ರಾಜ-ಚೆಂಚಲ ಚಿತ್ತ

ವಾಸಿ-ಹಟ

ವಿಡಂಬಿಸು-ಹಾಸ್ಯಮಾಡು, ನಿಂದಿಸು

ವಿಂಡು-ಹಿಂಡು

ವಿದಳ-ತುಣುಕು

ವಿರಂಚಿ-ಬ್ರಹ್ಮ

ವಿಲಸಿತ-ಶೋಭಿಸುವಂಥ

ವೃತ್ತ-ಲಿಂಗದಲ್ಲಿ ಕೆಳಗಿನ ಸುತ್ತು

ಶ

ಶಶಿ-ಎಡಗಣ್ಣು

ಶಾಂಭವಿ-ಪಾರ್ವತಿ

ಶಿಖಿ-ಶಿರ

ಶಿರಹಟ್ಟಿ-ಶಿರದೊಳಗಿನ ಬ್ರಹ್ಮರಂಧ್ರ

ಶಿಪಿವಿಷ್ಟ-ಬೇನೆಯಿಂದ ತಲೆಯ ಕೂದಲು ಉದರಿದವನು, ಶಿವ

ಶೋಣಿತ-ರಕ್ತ

ಷ

ಷಟ್ಕರಣ-ಚಿತ್ತ, ಬುದಿ, ಅಹಂಕಾರ, ಮನ, ಜ್ಞಾನ, ಭಾವ

ಸ

ಸಗಣ-ಗೋಮಯ

ಸಂಕುಳ-ಸಮೂಹ ಯುದ್ಧ

ಸಂಚು-ರಹಸ್ಯ

ಸಟೆ-ಅಸತ್ಯ

ಸಂತಸ-ಸಂತೋಷ

ಸರಣ-ಮಾರ್ಗ

ಸತ್ಕಲಾಪ-ಒಳ್ಳೆಯ ಗೋಷ್ಠಿ

ಸರಿ-ಎರಡು ( ಶುಕ್ಲ, ರಕ್ತ )

ಸವಣೂರು-ಜೈನ ಯತಿಗಳ ಊರು, ಕಿವಿ

ಸವಿಸಕ್ಕರಿ-ಪ್ರಸಾದ

ಸಸಿನ-ದುಃಖ

ಸಾಲೋಕ್ಯ-ಸ್ವರ್ಗದಲ್ಲಿರೋಣ

ಸಾಸಿರ-ಸಾವಿರ

ಸ್ವಾನುಭಾವ-ತನ್ನ ರೂಪವನ್ನು ಶಿವನಾಗಿ ತಿಳಿದು ಆಚರಿಸುವಂಥ ಮಾರ್ಗ

ಸಿ ( ಶಿ ) ತ-ಬಿಳಿ

ಸಿಂಧು-ಸಂಸಾರ

ಸುಯಿದಾನ-ಎಚ್ಚರ

ಸುಯ್ದಾನಿ-ಎಚ್ಚರವುಳ್ಳವ

ಸುಗೇಹ-ಸುಗೃಹ

ಸುರಪ-ಇಂದ್ರ

ಸುರಭಿ-ಸಂಸ್ಕಾರ

ಸುಳುವು-ಆಕಾರ

ಸೂಕರ-ಹಂದಿ

ಸೂರ್ಯ-ಬಲಗಣ್ಣು

ಸೆಜ್ಜೆ-ಶಯ್ಯೆ

ಸೊಡರು-ದೀಪ

ಸೊಲ್ಲು-ಮಾತು

ಸೊಮ್ಮು-ದ್ರವ್ಯ

## ಹ

ಹದನ-ಉದ್ದೇಶ
ಹಮ್ಮು-ಗರ್ವ
ಹರಣ-ಜೀವ
ಹದ್ದು-ಪ್ರಾಣವಾಯು
ಹಸಾದ-ಅನುಗ್ರಹ, ಪ್ರಸಾದ
ಹಾವು-ಕುಂಡಲಿನಿ
ಹಿಂಗು-ಬಿಟ್ಟು ಬಿಡು
ಹುಲಿ-ಅಹಂಕಾರ
ಹುಳ್ಳು-ನಿಸ್ಸಾರವಾದ ಸಂಸಾರ
ಹುಲ್ಲೆ-ಜೀವ, ಚಿಗರಿ
ಹೂಣೆ-ವಚನ
ಹೆರ್-ದೊಡ್ಡ
ಹೊಲಬು-ಸುದ್ದಿ, ವಿಚಾರ
ಹೊಗರಿಸು-ಪ್ರಕಾಶಿಸು
ಹೊಂಗಿ-ಉತ್ಸಾಹಪಟ್ಟು
ಹೊಕ್ಕರಣೆ-ಸಣ್ಣಕೆರೆ
ಹುಬ್ಬಳ್ಳಿ ನೇಟಿ-ಹುಬ್ಬಿನ ಮಧ್ಯದ ಸ್ಥಳದ ವಿಷಯು

# ಪ್ರಸ್ತುತ ಗ್ರಂಥ ಪ್ರಕಟನೆಗೆ

( ದ್ವಿತೀಯ ಮುದ್ರಣಕ್ಕೆ )

ಭಕ್ತಿಯಿಂದ

ಸಹಾಯ ಸಲ್ಲಿಸಿದ

ಮಹನೀಯರು

ಸಾಹಿತ್ಯ ಮತ್ತು ಧರ್ಮಾಭಿಮಾನಿಗಳಾದ
ರಾವ ಬಹಾದ್ದೂರ ಶ್ರೀಮಂತ
ವೈ. ಮಹಾಬಳೇಶ್ವರಪ್ಪನವರು, ಬಳ್ಳಾರಿ ರೂ. ೫೪೦/-

ಶ್ರೀ ಚಂದ್ರಶೇಖರಪ್ಪನವರು, ದಾವಣಗೇರಿ
ಮು. ಕರಜಗಿ ರೂ. ೨೫೧/-

ಶ್ರೀ ಮುರಿಗೆಪ್ಪನವರು, ದಾವಣಗೇರಿ
ಮು. ಕರಜಗಿ ರೂ. ೧೦೧/-

ಶ್ರೀ ಚನ್ನವೀರಪ್ಪನವರು, ದಾವಣಗೇರಿ
ಮು. ಕರಜಗಿ ರೂ. ೫೧/-